॥ ಶ್ರೀ ಚಿದಂಬರೋ ವಿಜಯತೆ ॥

# ಶ್ರೀ ಚಿದಂಬರ ಪ್ರಕಾಶ ಭಾಗ ೧

## (ಉಪಾಸನಾ ವಿಭಾಗ ಸಹಿತ)




ಲೇಖಕರು—ಗಣೇಶ ಚಿದಂಬರ ದೀಕ್ಷಿತ
ಇನಾಮದಾರ ಬಿ. ಎ. ಆನರ್ಸ ಬಿ. ಟಿ.

೧೯೭೬

ಬೆಲೆ ಆರು ರೂಪಾಯಿ

ಶ್ರೀ ಚಿದಂಬರ ಪ್ರಕಾಶ ಭಾಗ–೧

ಕ್ರಯ – ೬ ರೂಪಾಯಿ

ಪ್ರಕಾಶಕರು–

ಗಣೇಶ ಚಿದಂಬರ ಇನಾಮದಾರ

ಬಿ. ಎ. ಆನರ್ಸ ಬಿ. ಟಿ.

ಚಿದಂಬರ ಕೃಪಾ, ಮದಿಹಾಳ
ಧಾರವಾಡ.

೧೯೭೬ * ಶಕೆ ೧೮೯೮

೧೦, ಡಿಸೆಂಬರ್ * ಮಾರ್ಗ. ವ. ಚತುರ್ಥಿ

ಮೊದಲನೆಯ ಆವೃತ್ತಿ

ಒಂದು ಸಾವಿರ ಪ್ರತಿಗಳು







ಮುದ್ರಕರು:–

ಮೋಹನ ಕುಲಕರ್ಣಿ
ವಿಜಯಲಕ್ಷ್ಮೀ ಆರ್ಟ ಪ್ರಿಂಟರ್ಸ
ಶೇರಿ ಗಲ್ಲಿ, ಬೆಳಗಾಂವ.



# ನಮನ

## (ಪದ್ಮಶ್ರೀ ಬೇಂದ್ರೆಯವರಿಂದ)

ನಾವು ನಮನರೂಪದ ಪ್ರಾಸ್ತಾವಿಕ ನಾಕು ಮಾತು ಬರೆಯುವದೇಕೆಂದರೆ—ಹೀಗೇ ಬರೆಯಬೇಕು-ವಾಕ್ಯ "ನಾನು" ಎಂದು ಪ್ರಾರಂಭವಾಗ ಬಾರದು-"ನಾನು" ಎಂಬುದು ಅಹಂಕಾರದ ಮಾತು-ಇರಲಿ. ನನ್ನ ದೇಹಾಹಂಕಾರ ಶೇಷ ಇನ್ನೂ ಇರಬಹುದು-ಇದೆ. 'ಅಧಿಯಜ್ಞಃ ಅಹಮೇವ ದೇಹೇ' ಈ ಭಗವದ್ಗೀತಾ ವಚನ ಜೀವರಸವಾಗುವ ಪಾಚಕ ಕ್ರಿಯೆ ಇನ್ನೂ ಸಾಗಿದೆ. ಆಂತೆಯೇ ಸಾಧು-ಸಂತರ ಜೀವನ ಚಿಂತನೆ.

"ಗುರುಪಾರಮ್ಯ-ದೇವತಾಪಾರಮ್ಯ ಈ ಗುದ್ದಾಟ ನನಗೆ ಒಗ್ಗಲಾರದ ಮಾತು. "ಪರಪಕ್ಷನಿಂದಾಪೂರ್ವಕ ಸ್ವಪಕ್ಷನಿರ್ಧಾರ"— ಇದೂ ನನ್ನ ಹಾದಿಯಲ್ಲ. ಶ್ರೀ ಚಿದಂಬರ ದೀಕ್ಷಿತರು ನನ್ನ ಅಜ್ಜಿ (ಗೋದೂಬಾಯಿ) ಗೆ ಅಂತರ್ಜೀವನ ಆಧಾರವಾಗಿದ್ದರು. ನಾನು ಐದು ವರ್ಷದವ ಆದಾಗಲೇ ಅವರ ಜ್ಯೋತಿರ್ಬಿಂಬ ಕಂಡೆ. ಆ ಶ್ರದ್ಧಾಭಕ್ತಿ ನನ್ನೊಳಗೆ ಮನೆ ಮಾಡಿಕೊಂಡಿದೆ. ಆ "ಋಣ" ಕ್ಕೆ ಈ ವ್ಯವಸಾಯ.

ಶ್ರೀ ಚಿದಂಬರೇಶ್ವರ ಗುಡಿ ಮೂರ್ತರೂಪಗೊಳ್ಳುತಿಲ್ಲ. ಸ್ವಾಮಿಯ ಇಚ್ಛೆ! ಮತ್ತೇನು? 'ಶ್ರೀ ಚಿದಂಬರ ಪ್ರಕಾಶ' ಮೊದಲ ಭಾಗ ಬೆಳಕು ಕಾಣಲಿದೆ. ಸ್ವಾಮಿಯ ಕೃಪೆ! ಅವರ ವಂಶದವರೇ ಮಾಡುತ್ತಿದ್ದಾರೆ-ಸುಚಿನ್ಹ. ಎಲ್ಲ ಭಾಗಗಳು ಬೇಗ ಬೆಳಕು ಕಾಣಲಿ-ಸ್ವಾಮಿ ಪ್ರಸಾದದಿಂದ. ದುಡಿಯುವವರು ನೊಗ ಹೊತ್ತಿದ್ದಾರೆ. ನಾನು ಈ ರಥೋತ್ಸವದಲ್ಲಿ ಕೈ-ಮುಗಿಯುತ್ತಿದ್ದೇನೆ. ಇದು ಈ ನಮನ. ಕರ್ನಾಟಕದಲ್ಲಿ ಈ ಕಾರ್ಯ ಆಗಲಿದೆ. ಇದಕ್ಕೆ ಮಹಾ

ರಾಷ್ಟ್ರದ ಶ್ರೀ ಜ್ಞಾನೇಶ್ವರರು ಬೆಂಬಲ-ಮುಂಬಲ ಆಗುವವರಿದ್ದಾರೆ. ಇದು ಹಳೆಯ "ಪಸಾಯದಾನ."

ಆಗಿ ಹೋದ ಸಾಧು-ಸಂತರ ಮಹಿಮೆ ಇನ್ನೂ ಇದೆ. ಅದು ಇಂದಿನ ಸಮಾಜದ ಆರೋಗ್ಯಕ್ಕೆ ಕಾರಣ. ಪೌರುಷ ಪ್ರಯತ್ನ ಇದ್ದೇ ಇದೆ. ಅದು ಪ್ರತಿ ಜೀವ ತನ್ನ ಅಂತರಂಗದಲ್ಲಿ ಶ್ರೀ ಭಗವದ್ಗುರು ಉಪಾಸನೆಯಿಂದ ಉಳಿಸಿಕೊಳ್ಳಬೇಕು. ಸಮಾಜದಲ್ಲಿ ಬಾಹ್ಯದಲ್ಲಿ ಸಹಕಾರ, ಒಳಗಿನಿಂದ ವಿದ್ವೇಷ ಇದೆ. ಸ್ವಾಮಿ ವಿದ್ವೇಷ ವಿಷ ಹೀರಿ ಹೃದಯಕ್ಕೆ ಅಮೃತ ಉಣಿಸಲಿ.

ಸಧ್ಯದ ಕಲಿಕಾಲವು ಕೃತಯುಗದತ್ತ ಮುಖ ಹೊರಳಿಸಿದೆ. ಆದರೆ ಇತಿಹಾಸವು ನಾಟಕ ಪ್ರಯೋಗವಲ್ಲ. ಈ ಹಾದಿಗೆ ಮುಗಿವಿಲ್ಲ. ಭಕ್ತಿಯು ಶಕ್ತಿಯ ಸೌಜನ್ಯ ಜೀವನವು ಕಲ್ಪವೃಕ್ಷವಾಗಿ ಬೆಳೆಯಬೇಕು. ಗುಡಿ-ಗುಂಡಾರ ಗಳಿವೆ; ಅಂಥಿಂಥ ಮಠ-ಗಿಠಗಳಿವೆ; ಆಶ್ರಮ-ಈಶ್ರಮಗಳೂ ಇವೆ. ಯುಗ ಪರಿವರ್ತಕವಾದ ಸಹಜೀವನವು ಗಿರಣಿಯ ಬಟ್ಟೆಯಲ್ಲ. ಇಲ್ಲಿ ದಲ್ಲಾಳಿಗಳ ದಾಳಿ ಇರಬಾರದು-ಹೌದು! ಶ್ರೀ ಚಿದಂಬರರ ಸಮಾನಕಾಲೀನ ಜೀವನದಲ್ಲಿಯೇ ಎಂಥ ಹಾಹಾಕಾರ ಜೀವಂತವಾಗಿತ್ತು-ಇದನ್ನು ಭಕ್ತ ರಾಜಾರಾಮನ ಎಲ್ಲ ಚರಿತ್ರಗಳನ್ನು ಓದಿ, ತಿಳಿದುಕೊಳ್ಳಬೇಕು.

ಸಧ್ಯದ ಗ್ರಂಥವು ಸಂಗ್ರಾಹ್ಯವಾಗಿದೆ. ಪುನಃ ಪುನಃ ವಾಚನೀಯ ಮನನೀಯವಾಗಿದೆ. ಅವರ ನಿವೇದನೆ ಓದಿದರೆ ಸಾಕು-ಅದೊಂದು ತಪಸ್ಸಿನ ವಿಧಾನ ಎನಿಸುವದು. ಮುಖ್ಯ ಶ್ರೀ ಚಿದಂಬರ ಸ್ವಾಮಿಗಳ ಪ್ರಸಾದದಿಂದಲೇ ಪ್ರಾರಂಭವಾಗುವ ಈ ವಾಙ್ಮಯ ಯಜ್ಞ, ಅವರಿಂದಲೇ ಕೊನೆಗಾಣಲಿ! ಕೊನೆಗೊಂಡೀತು ಎಂಬ ಭರವಸೆ ಬರುತ್ತದೆ. ಸ್ವಸ್ತಿ.

"ಶ್ರೀಮಾತಾ" — ದತ್ತ ರಾಮ ಬೇಂದ್ರೆ.

ಸಾಧನಕೇರಿ, ಧಾರವಾಡ.

೨೮-೧೧-೭೭



# ಲೇಖಕರ ನಿವೇದನೆ

॥ ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ॥

ಮಹನೀಯರೇ,

ಶ್ರೀ ಚಿದಂಬರ ಮಹಾಸ್ವಾಮಿಗಳ ವಿಷಯವಾಗಿ ಸಪ್ರಮಾಣವಾದ, ಐತಿಹಾಸಿಕ ಹಾಗೂ ಪೌರಾಣಿಕ ಹಿನ್ನೆಲೆಯಿಂದ ಯುಕ್ತವಾದ ಒಂದು ಪುಸ್ತಕವನ್ನು ಬರೆಯಬೇಕೆಂದು ನನ್ನ ಪೂಜ್ಯ ತಂದೆಯವರ ಮನೀಷೆ ಇತ್ತು. ಆ ದೃಷ್ಟಿಯಿಂದ ಅವರು ಚಿದಂಬರ ವಾಙ್ಮಯ ಸಂಗ್ರಹವನ್ನು ಮಾಡಿದ್ದರು. ಶ್ರೀಮಚ್ಚರಿತ್ರ, ಶ್ರೀ ಚಿದಂಬರ ಮಹಾತ್ಮ್ಯ, (ಸಂಸ್ಕೃತ), ಸಾಂಬದೀಕ್ಷಿತರು ರಚಿಸಿದ ಸಂಸ್ಕೃತ ಮತ್ತು ಮರಾಠೀ ಚರಿತ್ರಗಳು, ಗರ್ದೇವಿರಚಿತ ಅಭಂಗ ರೂಪೀ ಚರಿತ್ರ, ಮನೆತನದ ಹಳೆಯ ರೆಕಾರ್ಡಿನಲ್ಲಿ ದೊರೆತ, ಅಸಲ ಕಾಗದ ಪತ್ರಗಳು, ರಾಜಾರಾಮನ ಕೆಲ ಅಭಂಗಗಳು, ಇವನ್ನೆಲ್ಲ ಸಂಗ್ರಹಿಸಿ ಇಟ್ಟಿದ್ದರು, "ಶ್ರೀಮಚ್ಚರಿತ್ರ" ವನ್ನು ಒಳ್ಳೆ ಆಸ್ಥೆಯಿಂದ ಕಾಯ್ದಿಟ್ಟಿದ್ದರು. ಅದನ್ನು ರೇಶಿಮೆಯ ಅರಿವೆಯಲ್ಲಿ ಕಟ್ಟಿ, ದೇವರ ಹತ್ತಿರ ಇಡುವ ಸಂಪ್ರದಾಯ, ನನ್ನ ಅಜ್ಜಂದಿರಾದ ಶ್ರೀ ಯಜ್ಞೇಶ್ವರ ದೀಕ್ಷಿತರು ಬಡಲಿ ಅವರಿಂದಲೇ ಬಂದದ್ದು. ನನ್ನ ತಂದೆಯವರು ಇದರಲ್ಲಿಯ ಯಾವತ್ತೂ ವಿಷಯಗಳನ್ನು ತಿಳಿಸಿ ಕೊಟ್ಟರು. ಮಹಾಸ್ವಾಮಿಗಳು ರಾಜಕೀಯ ರಂಗದಲ್ಲಿ ವಹಿಸಿದ ಅದ್ವಿತೀಯ ಪಾತ್ರವನ್ನೂ ಅಷ್ಟಿಷ್ಟು ತಿಳಿಸಿದರು. "ಮಹಾಸ್ವಾಮಿಗಳು ಪರಶಿವನ ಅವತಾರ ಸರಿ; ಆದರೂ ಅವರು ಧಾರ್ಮಿಕ, ಸಾಮಾಜಿಕ, ರಾಜಕೀಯ ರಂಗಗಳಲ್ಲಿ, ಅದ್ವಿತೀಯ ಪಾತ್ರ ವಹಿಸಿ, ಆದರ್ಶ ವ್ಯಕ್ತಿಯಾಗಿ ತಮ್ಮ ಜೀವನ ಸಾಗಿಸಿದ್ದಾರೆ. ಇದರ ಬಗ್ಗೆ ನೀನು ಹೆಚ್ಚಿನ ಅಧ್ಯಯನವನ್ನು ಮಾಡು" ಎಂದು ಹೇಳಿದರು. ಅಂದಿನಿಂದ ನನಗೆ ಚಿದಂಬರ ವಾಙ್ಮಯದಲ್ಲಿ, ಅದರಲ್ಲೂ ಶ್ರೀಮಚ್ಚರಿತ್ರದಲ್ಲಿ ವಿಶೇಷ ಅಭಿರುಚಿ ಉಂಟಾಯಿತು. ನನ್ನ ಪರಿಚಿತರಾದ ಶ್ರೀ ಉಣಕಲ್‌ಕರ ಹಣಮಂತರಾವ ಇವರ ಸಹಾಯದಿಂದ, ಶ್ರೀ ತೊರವಿಯವರ ಜೊತೆ, ಶ್ರೀಮಚ್ಚರಿತ್ರವನ್ನು ಸಂಪೂರ್ಣ ಓದಿ ವಿಷಯಗಳ

ಅನುಕ್ರಮಣಿಕೆಯನ್ನು ಸಿದ್ಧ ಮಾಡಿದೆನು. ಐತಿಹಾಸಿಕ ಲೇಖಸಂಗ್ರಹ, ಬಾಪೂ-ಗೋಖಲೇ ಪತ್ರವ್ಯವಹಾರ ಮುಂತಾದ ಗ್ರಂಥಗಳನ್ನು ಓದಿಕೊಂಡು, ಈ ಗ್ರಂಥ ಬರೆಯಲು ಉದ್ಯುಕ್ತನಾದೆ. ಶ್ರೀಮಚ್ಚರಿತ್ರವನ್ನೇ ಮೂಲ ಆಧಾರ ವಾಗಿಟ್ಟುಕೊಂಡು, ಸ್ವಾಮಿಗಳ ಇತಿಹಾಸ ಬರೆಯುವ ಯೋಜನೆಯನ್ನು ಇಟ್ಟುಕೊಂಡಿದ್ದೇನೆ. ಸಮಗ್ರ ಜೀವನವನ್ನು ಒಂದೇ ಭಾಗದಲ್ಲಿ ನಿರೂಪಿಸು ವದು ಸವಂಜಸವಾಗದೆಂದು ಮನಗಂಡು, ಶ್ರೀಮಚ್ಚರಿತ್ರದಲ್ಲಿದ್ದಂತೆ, ನಾಲ್ಕು ಭಾಗಗಳಲ್ಲಿ ಅವರ ಚರಿತ್ರ ನಿರೂಪಿಸಬೇಕೆಂದು ಮಾಡಿದ್ದೇನೆ. ಈ ಭಾಗದಲ್ಲಿ, ಚಿದಂಬರ ಮಹಾಸ್ವಾಮಿಗಳ ತಂದೆ, ಮಾರ್ತಂಡಭಟ್ಟರು ಕಾಶಿಯಲ್ಲಿ ಸ್ವಯಂಪ್ರಕಾಶ ಸ್ವಾಮಿಗಳ ಹತ್ತಿರ ಮಾಡಿವ ವಿದ್ಯಾವ್ಯಾಸಂಗ, ಹಿಪ್ಪರಿಗಿ, ಪಂಢರಪುರ, ಆಕಾಶಚಿದಂಬರ, ಮುರಗೋಡು, ಸೊಗಲ ಮುಂತಾದ ಕ್ಷೇತ್ರ ಗಳಲ್ಲಿ ಮಾಡಿದ ಗಾಯತ್ರೀಪುರಶ್ಚರಣಗಳು, ಪಂಚಾಕ್ಷರೀ ಮಂತ್ರ ಪುರ ಶ್ಚರಣ, 'ದೀಕ್ಷಿತ' ಎಂದು ಬಿರುದು ಪಡೆದು ಮರಳಿ ತಮ್ಮ ಗ್ರಾಮಕ್ಕೆ ಬಂದು, ತಮ್ಮ ಮೂವರು ತಮ್ಮಂದಿರ ಯೋಗಕ್ಷೇಮ, ಮುರಗೋಡಕ್ಕೆ (ಅಮರಕಲ್ಯಾಣಕ್ಕೆ) ಆಗಮನ, ಲಕ್ಷ್ಮೀಬಾಯಿಯ ಪಾಣಿಗ್ರಹಣ, ಮತ್ತೆ ಗಾಯತ್ರೀ ಪುರಶ್ಚರಣ, ಚಿದಂಬರ ಅವತಾರ—ಈ ರೀತಿ ಬಂದಿದೆ. ಅವ ತಾರ ಪೂರ್ವಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಪರಿಸ್ಥಿತಿ, ರಾಜಾ ರಾಮನ ಕೆಲ ಅಭಂಗಗಳು, ಅವತಾರ ಸಮಯದ ವೈಶಿಷ್ಟ್ಯ, ಚಿದಂಬರ ಜಯಂತೀ ವಿಧಾನ ಇತ್ಯಾದಿ ವಿಷಯಗಳೂ ಬಂದಿವೆ.

೧೮ನೆಯ ಶತಮಾನದ ಉತ್ತರಾರ್ಧದಲ್ಲಿ (ಇ. ೧೭೫೮, ನವ್ಹೆಂಬರ ೨೦) ಪರಮಾತ್ಮನು ಸದ್ಗುರು ಶ್ರೀ ಚಿದಂಬರ ರೂಪದಿಂದ ಅವತರಿಸಿ, ಧರ್ಮ ಸ್ಥಾಪನೆಯನ್ನು ಮಾಡಿದನು. ಶಾಂತಿ, ಸತ್ಯ, ನ್ಯಾಯ, ಅಹಿಂಸೆ, ಧರ್ಮಾಚರಣೆ ಮೊದಲಾದವುಗಳ ಆಶ್ರಯದಿಂದ ಚಿದಂಬರ ಜ್ಯೋತಿಯು ತನ್ನ ಪ್ರಕಾಶವನ್ನು ಆಸೇತು ಹಿಮಾಚಲ ಬೀರಿತು. ಶ್ರೀ ಚಿದಂಬರ ಸ್ವಾಮಿಗಳ ಜನ್ಮವೇ ಒಂದು ದಿವ್ಯ ತೇಜದ ಉದಯ; ಅವರ ಜೀವನವೇ ಧರ್ಮಸ್ಥಾಪನೆಯ ಪ್ರಕಾಶ,

ಶ್ರೀ ಚಿದಂಬರ ಮಹಾಸ್ವಾಮಿಗಳು, ಸತ್ಯ, ಸರಲ, ನಿರಾಡಂಬರ, ಲೋಕೋಪಕಾರಕವಾದ ಆದರ್ಶ ಜೀವನ ಸಾಗಿಸಿ, ಸಾಧುಸತ್ಪುರುಷರಿಂದ,

ರಾಜರಂಕರಿಂದ, ಪಂಡಿತಪಾಮರರಿಂದ, ದೀನದಲಿತರಿಂದ, ಸಕಲ ವರ್ಣ· ಮತ, ಪಂಥದವರಿಂದ, ಪೂಜ್ಯತೆಯನ್ನು ಪಡೆದರು. ಸಾವಿರಾರು ವಿದ್ಯಾರ್ಥಿಗಳ ಯೋಗಕ್ಷೇಮವನ್ನು ನಿರ್ವಹಿಸಿಕೊಂಡು ವೇದವೇದಾಂಗ, ಪುರಾಣ, ಇತಿಹಾಸಗಳ ಅಧ್ಯಯನವನ್ನು ಮಾಡಿಸಿದರು. ಅನನ್ಯಭಕ್ತಿಯಿಂದ ಆಶ್ರಯ ಮಾಡಿದ ಆನೇಕ ಕುರುಡ, ಕುಂಟರಿಗೆ ಕಂಣು ಕಾಲ್ಗಳನ್ನೂ, ನಿರ್ಧನರಿಗೆ ಧನವನ್ನೂ, ಮೂಕರಿಗೆ ವಾಕ್ ಶಕ್ತಿಯನ್ನೂ ಕೊಟ್ಟು ದೀನ ದಲಿತರನ್ನು ಉದ್ಧರಿಸಿದರು. ಗಲಿತಕುಷ್ಠ, ರಾಜಯಕ್ಷ್ಮಾ (ಕ್ಷಯ) ಮೊದಲಾದ ಅಸಾಧ್ಯ ರೋಗಗಳನ್ನು ದರ್ಶನ ಮತ್ತು ಸ್ಪರ್ಶ ಮಾತ್ರದಿಂದ ಗುಣಪಡಿಸಿದರು. ನಿರ್ಜಲ ಸ್ಥಳದಲ್ಲಿ ನೀರನ್ನು ಹರಿಯಿಸಿದ್ದಾರೆ; ಬಂಜೆ ನಾರಿಯರಿಗೂ ಕೂಡ ಸಂತತಿ ಫಲ ಕೊಟ್ಟಿದ್ದಾರೆ. ಭೀಕರ ಬರಗಾಲದಲ್ಲಿ ಅನೇಕ ಕಡೆಗೆ ಅನ್ನಛತ್ರಗಳನ್ನು ತೆರೆಯಿಸಿ ದೀನ ದಲಿತರನ್ನೂ, ಅನಾಥರನ್ನೂ ಸಂರಕ್ಷಿಸಿದ್ದಾರೆ. ರಾಜ್ಯಕ್ರಾಂತಿಯ ವೇಳೆಯಲ್ಲಿ (೧೭೯೮-೧೮೦೬) ಮುರಗೋಡನ್ನು ಬಿಟ್ಟು, ದೇವಲಾಪೂರ, ಕುಸುಗಲ್, ಕುಂದಗೋಳ, ಹುಬ್ಬಳ್ಳಿ, (ಪುಷ್ಪಲತಿಕಾಪುರ,) ಶಿರಹಟ್ಟಿ, ವಕ್ಕುಂದ, ಸತ್ತೀಗೇರಿ, ಮುನವಳ್ಳಿ, ಬೆಡಸೂರ, ಅಸುಂಡಿ, ಹಾವನೂರ (ಸರ್ಪಪುರ), ನವಿಲುಗುಂದ, ಅಮ್ಮಿನಭಾವಿ, ಧಾರವಾಡ, ದೊಡ್ಡವಾಡ, ಲಕ್ಷ್ಮೇಶ್ವರ ವಗೈರೆ ಭಾಗದಲ್ಲಿ ಸಂಚರಿಸಿ, ಅನೇಕ ಭಕ್ತರನ್ನು ಆಪತ್ತಿನಿಂದ ಸಂರಕ್ಷಿಸಿದ್ದಾರೆ. ಆಧಿಕಾರ ಮತ್ತು ಶಕ್ತಿಯಿಂದ ಉನ್ಮತ್ತರಾದ ರತ್ನಾಕರಪಂತ, ಧೋಂಡೋಪಂತ, ಧೋಂಡಜಿವಾಘ ಮೊದಲಾದ ಸರದಾರರಿಗೂ, ಬಾಜೀರಾವ, ಟೀಪುಸುಲ್ತಾನ ಮೊದಲಾದವರಿಗೂ ಉಪದೇಶದ ಮಾತುಗಳನ್ನು ಹೇಳಿ, ಪ್ರಜೆಗಳನ್ನು ಸರ್ವರೀತಿಯಿಂದ ಸಂರಕ್ಷಿಸುವದೇ ರಾಜನ ಧರ್ಮವೆಂದು ಹೇಳಿದ್ದಾರೆ. ಶ್ರಂಗೇರಿ, ಕರವೀರ, ಹಂಪಿ, ಕೂಡ್ಲಿ, ಪುತ್ತಿಗಿ ಮೊದಲಾದ ಪೀಠಾಧಿಪತಿಗಳಲ್ಲಿದ್ದ ಪರಸ್ಪರ ವೈಮನಸ್ಯವು ದೀಕ್ಷಿತರ ದರ್ಶನದಿಂದಲೇ ಮಾಯವಾಯಿತೆಂದು ಶ್ರೀಮಚ್ಚರಿತ್ರಕಾರರು ಹೇಳಿದ್ದಾರೆ. ಪಟವರ್ಧನ, ರಾಸ್ತೆ, ಲಾಗು ಹಾಗೂ ಗೋಖಲೇ ಮನೆತನದವರು ವಗೈರೆ ಇವರನ್ನು ಬಹಳ ಪೂಜ್ಯದೃಷ್ಟಿಯಿಂದ ಗೌರವಿಸುತ್ತಿದ್ದರು. ಬಾಪೂಗೋಖಲೆಯಂತೂ ಶ್ರೀ ದೀಕ್ಷಿತರ ಪೂರ್ಣ ಅನುಗ್ರಹಕ್ಕೆ ಪಾತ್ರನಾಗಿದ್ದನು. ಇವನು ತನ್ನ ಗೃಹೀಯ ವ್ಯವಹಾರವನ್ನಷ್ಟೇ ಅಲ್ಲದೆ

ರಾಜಕೀಯ ವ್ಯವಹಾರವನ್ನೂ ಕೂಡ ಶ್ರೀ ದೀಕ್ಷಿತರ ಸಲಹೆಯಂತೆ ಸಾಗಿಸುತ್ತಿದ್ದನು. ("ಬಾಪೂಗೋಖಲೇಪತ್ರವ್ಯವಹಾರ" ಇತಿಹಾಸ ಸಂ, ಮಂಡಳ ಧುಳೆ ಇದನ್ನು ನೋಡಬೇಕು.) ಗೋಣ್ಣಾಗರ (ಗುಣಗಳ ಆಗರ) ದಲ್ಲಿ ಮಲಾಪಹಾರೀ ತೀರದಲ್ಲಿ ಇವರು ಮಾಡಿದ ಯಜ್ಞವು (೧೮೦೭ರಲ್ಲಿ) ಅಭೂತಪೂರ್ವವಾದದ್ದು. ಜಮಖಿಂಡಿ, ಸಾಂಗ್ಲಿ, ಮಿರಜ, ಬುಧಗಾಂವ ಮೊದಲಾದ ೨೯ ಸ್ಥಳಗಳ ಸಂಸ್ಥಾನಿಕರೂ, ಸರದಾರರೂ, ಸೈನಿಕರೂ, ಅನೇಕ ಪೀಠಾಧಿಪತಿಗಳೂ, ದೇಸಾಯಿ, ದೇಶಪಾಂಡೆ, ನಾಡಗೌಡ ಮೊದಲಾದವರೂ ದಶವಿಧಬ್ರಾಹ್ಮಣರೂ, ಯೋಗಿಗಳೂ, ಶಾಸ್ತ್ರವಿಶಾರದರೂ, ತಪಸ್ವಿಗಳೂ, ಶೆಟ್ಟರೂ, ಸಾಹುಕಾರರೂ, ಲೇಖಕರೂ, ಶಸ್ತ್ರವಿದ್ಯೆ ಬಲ್ಲವರೂ, ಗಾಯಕರೂ, ನರ್ತಕಿಯರೂ, ವ್ಯಾಪಾರಿಗಳೂ ಮೊದಲಾದವರು ಬಂದಿದ್ದರೆಂದು, ಯಜ್ಞಕಾರ್ಯದ ಯಾವ ಯಾವ ಹೊಣೆಯನ್ನು ಯಾವ ಯಾವ ರಾಜರೂ ಮತ್ತು ಮಾಂಡಲಿಕರೂ ವಹಿಸಿದ್ದರೆಂಬುವದನ್ನೂ ಬಹು ಸುರಸವಾಗಿ, ಅಂಕಿ ಸಂಖ್ಯೆಗಳನ್ನೂ, ಮಿತಿಗಳನ್ನೂ ನಿರ್ದಿಷ್ಟ ಮಾಡಿ ಶ್ರೀಮಚ್ಚರಿತ್ರದ ೨ನೆಯ ಪಾದದ ಯಜ್ಞಚಂಪೂದಲ್ಲಿ ವರ್ಣಿಸಿದ್ದಾನೆ. ಯಜ್ಞದ ಕೊನೆಯ ಒಂದೇ ಒಂದು ದಿನ ೫,೯೭,೦೦೦ ಜನರು ಪ್ರಸಾದವನ್ನು ಸ್ವೀಕರಿಸಿದರಂತೆ! ಯಾರ ಕಡೆಯಿಂದಲೂ ಯಾವ ಕಾಣಿಕೆಯನ್ನೂ ತೆಗೆದುಕೊಳ್ಳಲಿಲ್ಲವಂತೆ!

## ಶ್ರೀ ಚಿದಂಬರ ವಾಙ್ಮಯ

ಶ್ರೀ ಚಿದಂಬರ ದೀಕ್ಷಿತರು ಆಯಾ ಜನರಿಗೆ ಆಯಾ ಸಮಯದಲ್ಲಿ ಮಾಡಿದ ಉಪದೇಶವು ಪ್ರತಿಯೊಬ್ಬ ಭಕ್ತನ ಹೃದಯಕ್ಕೆ ಮುಟ್ಟುವಂತಹದಿದೆ. "ಅನ್ನನಿಂದೆ ಮಾಡಬಾರದು, ಅಸತ್ಯವನ್ನು ಎಂದೂ ನುಡಿಯಬಾರದು; ದುಷ್ಟ ಮಾತುಗಳನ್ನು ಆಡಬಾರದು; ವಂಚನೆಯನ್ನು ಸರ್ವಥಾ ಮಾಡಬಾರದು; ಧನಧಾನ್ಯ, ಕನಕ, ವಿದ್ಯಾ ಮೊದಲಾದವುಗಳಿಂದ ಗರ್ವಿತರಾಗಬಾರದು: ಧರ್ಮ ಧರ್ಮಗಳಲ್ಲಿ ವೈಮನಸ್ಯವಿರಬಾರದು, ಸ್ವಧರ್ಮಥ ಅಂಧಶ್ರದ್ಧೆ ಇರಬಾರದು. ದಾಂಭಿಕತನವನ್ನು ಎಂದಿಗೂ ಆಶ್ರಯಿಸಬಾರದು. ಮನೋಭಿಲಷಿತಗಳನ್ನು ಪೂರ್ಣ ಮಾಡಿಕೊಳ್ಳಲು ಕ್ಷುದ್ರ ಮಾರ್ಗ, ಕ್ಷುದ್ರ ದೇವತೆಗಳ ಬೆನ್ನು ಹತ್ತಬಾರದು. ಮನೆಗೆ ಹಸಿದು ಬಂದ ಅತಿಥಿಗಳನ್ನು ವಿಮುಖ

ರನ್ನಾಗಿ ಎಂದೂ ಕಳಿಸಬಾರದು. ವೈದಿಕ ಮಾರ್ಗದಲ್ಲಿ ಶ್ರದ್ಧೆ ಇರಬೇಕು; ಭಗವಂತನು ಎಂತಹ ಸಮಯದಲ್ಲಿಯೂ ತನ್ನ ಭಕ್ತರನ್ನು ಸಂರಕ್ಷಿಸುವನು; ಹರಿಹರಾದಿ ಭೇದ ಮಾಡಿದವರು ಪಾಪಿಷ್ಠರು; ಅಜ್ಞಾನಿಗಳು. ಪರಧರ್ಮ ಹಳಿಯಬಾರದು. ದ್ವೇಷಾಸೂಯಾದಿಗಳನ್ನು ತೊರೆಯಬೇಕು. ಶಾಂತಿಯನ್ನು ಆಶ್ರಯಿಸಬೇಕು; ಕ್ಷಮಾಶೀಲರಾಗಬೇಕು; ಆಲಸ್ಯವನ್ನು ಹೊಡೆದೋಡಿಸಬೇಕು; ಗುರುಗಳಲ್ಲಿ ಅಚಲ ವಿಶ್ವಾಸ ಇಡಬೇಕು." ಇತ್ಯಾದಿ ಅನೇಕ ಅಮೃತೋಕ್ತಿಗಳನ್ನು, ತಮ್ಮ ಕುಟುಂಬಕ್ಕೆ, ಮಕ್ಕಳಿಗೆ, ರಾಜರಿಗೆ, ಮಂತ್ರಿಗಳಿಗೆ, ಸರದಾರರಿಗೆ, ಭಕ್ತರಿಗೆ, ಪಂಡಿತರಿಗೆ, ಪಾಮರರಿಗೆ, ಅನೇಕ ಸಲ ಹೇಳಿದ್ದಾರೆ. ಅವರ ಮಾತಿನಲ್ಲಿ ವಿಶ್ವಾಸವಿಡದವರು ಅದಕ್ಕೆ ತಕ್ಕಂತೆ ಪ್ರಾಯಶ್ಚಿತ್ ಪಡೆದಿದ್ದಾರೆ; ವಿಶ್ವಾಸವಿಟ್ಟವರು ಸದ್ಗತಿ ಪಡೆದಿದ್ದಾರೆ.

ಇಂತಹ ದಿವ್ಯ ಸಂದೇಶವನ್ನು ಬೀರಿದ, ದಿವ್ಯ ವಿಭೂತಿಯ ಚರಿತ್ರವೆಲ್ಲವೂ ಬಹುಶಃ ಮರಾಠಿ ಭಾಷೆಯಲ್ಲಿಯೇ ಬರೆಯಲ್ಪಟ್ಟಿದೆ. ಸಂಸ್ಕೃತದಲ್ಲಿ ಒಂದೆರಡು ಗ್ರಂಥಗಳಿವೆ. ಕನ್ನಡದಲ್ಲಿ ಇತ್ತಿತ್ತಲಾಗಿ ಒಂದೆರಡು ಪುಸ್ತಕಗಳು ಪ್ರಕಟವಾಗಿವೆ. ಆದರೆ ಮೂಲತಃ ಇದ್ದ ವಾಙ್ಮಯದ ಒಂದು ಸಹಸ್ರಾಂಶದಷ್ಟು ಕೂಡ ಪ್ರಕಾಶನವನ್ನು ಕಂಡಿಲ್ಲ. ಶ್ರೀ ಚಿದಂಬರ ವಾಙ್ಮಯ ಪ್ರಕಾಶನದಿಂದ, ಕರ್ನಾಟಕ ಮತ್ತು ಮಹಾರಾಷ್ಟ್ರಗಳ ೧೮ನೆಯ ಶತಮಾನದ ಇತಿಹಾಸದ ಮೇಲೆ ಒಂದು ಹೊಸ ಬೆಳಕು ಬೀಳುವದೆಂದು ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅವರ ಅಭಿಪ್ರಾಯಗಳನ್ನು ಮುಂದೆ ಕೊಟ್ಟಿದ್ದೇವೆ. ಈ ವಾಙ್ಮಯವನ್ನೆಲ್ಲ ಕ್ರಮಶಃ ಪ್ರಸಿದ್ಧಿಸುವ ಉದ್ದೇಶದಿಂದ ಈ ನಿವೇದನೆಯನ್ನು ಮಾಡಿಕೊಳ್ಳುತ್ತಲಿದ್ದೇವೆ. ಈ ಗ್ರಂಥ ಮೊದಲನೆಯ ಹೆಜ್ಜೆ.



# ಉಪಕಾರ ಸ್ಮರಣೆ

ಆನಂದವನದಲ್ಲಿ (ಶ್ರೀ ಶೇಷಾಚಲ ಜಯಂತಿಯಂದು) ನನಗೆ ಶ್ರೀಮಾನ್ ನಾನಾಸಾಹೇಬ ಕುಲಕರ್ಣಿ, (ಎಮ್. ಏ.) ಕಮಡೊಳ್ಳಿ ಅವರು ಭೆಟ್ಟಿ ಆಗಿದ್ದರು. ಪ್ರಸಂಗಾನುಸಾರವಾಗಿ ಶ್ರೀಮಚ್ಚರಿತ್ರದಲ್ಲಿ ನಿರೂಪಿಸಲಾದ "ಸದ್ಗುರು" ಎಂಬ ಅಧ್ಯಾಯವನ್ನು ಅವರಿಗೂ ಹಾಗೂ ಭಕ್ತವೃಂದಕ್ಕೂ ಓದಿ ತೋರಿಸಿ, ಸದ್ಗುರುಗಳ ಬಾಹ್ಯ ಮತ್ತು ಆಂತರಿಕ ಲಕ್ಷಣಗಳ ಬಗ್ಗೆ ವಿವರಣೆ ನೀಡಿದೆ. "ವಿಷಯ ಬಹಳ ಚನ್ನಾಗಿ ಇದೆ. ಇದು ಪ್ರಕಾಶನವನ್ನು ಕಾಣಲೇ ಬೇಕು" ಎಂದು ಶ್ರೀ ನಾನಾಸಾಹೇಬರು ಎಂದರು. "ಸಂತೋಷ ನಿಮ್ಮ ಅಭಿಪ್ರಾಯ ಸರಿ; ಆದರೆ ಆರ್ಥಿಕ ಸಹಾಯ ಬೇಕಲ್ಲ" ಎಂದೆ. "ಇಕೋ ನನ್ನದು ಅಲ್ಪ ಸೇವೆ; ನಾನು ಈ ಕಾರ್ಯಕ್ಕಾಗಿ ೫೦೧ ರೂಪಾಯಿಗಳನ್ನು ನೀವು ಬೇಡಿದಾಗ್ಗೆ ಕೊಡುವೆ. ಇಂದೇ ಗ್ರಂಥ ಬರೆಯಲು ಪ್ರಾರಂಭಿಸಿರಿ" ಎಂದು ಆಶ್ವಾಸನವಿತ್ತು ಹೊಸ ಹುಮ್ಮಸವನ್ನು ತಂದು ಕೊಟ್ಟರು. ನುಡಿದಂತೆ ನಡೆದೂ ತೋರಿಸಿದರು. ನಾನು ಬೇಡಿದ ಕೂಡಲೇ, ೫೦೧ ರೂಪಾ-ಯಿಗಳ ಮಾತೃಭಿಕ್ಷೆಯನ್ನು, ಚಿದಂಬರ ವಾಙ್ಮಯ ಪ್ರಕಾಶನಕ್ಕಾಗಿ ಒಡಿದ ನನ್ನ ಜೋಳಿಗೆಯಲ್ಲಿ ಪ್ರಪ್ರಥಮವಾಗಿ ಹಾಕಿದರು. ಅವರ ವಿಶ್ವಾಸದ ಮತ್ತು ಹುಮ್ಮಸದ ನುಡಿಗಳು ಹಾಗೂ ನುಡಿದಂತೆ ನಡೆದು ತೋರಿಸಿದ ಅವರ ಸಹಾಯವೂ ಈ ಪುಸ್ತಕ ಪ್ರಕಾಶನಕ್ಕೆ ಹೆಚ್ಚಿನ ಸಹಾಯವಾಗಿವೆ. ಹೃತ್ಪೂರ್ವಕವಾಗಿ ಅವರಿಗೆ ನನ್ನ ಕೃತಜ್ಞತೆ ಸಲ್ಲಿಸುತ್ತೇನೆ. ಎರಡನೆಯ ಭಿಕ್ಷೆಯನ್ನು ನೀಡಿದವರು ಶ್ರೀ ರಾಮಚಂದ್ರ ಕೃಷ್ಣರಾವ ತಿಮ್ಮಾಪೂರ. ಬಿ. ಇ. ಡೋಂಬಿವಲಿ, ಮುಂಬೈ ಅವರೂ ಹಾಗೂ ಶ್ರೀ ಮೃತ್ಯುಂಜಯ ಬಾಳದೀಕ್ಷಿತ ಬಂಕಾಪೂರ ಅವರು ಇವರು ತಮ್ಮ ಚಿರಂಜೀವಿಗಳಾದ, ಶ್ರೀಧರ ಹಾಗೂ ವಿನಾಯಕ ಇವರ ಉಪನಯನ ನಿಮಿತ್ತ ಮಂಗಲ ಕಾಣಿಕೆಯೆಂದು ೫೨೭ ರೂಪಾಯಿಗಳನ್ನು ಸಮರ್ಪಿಸಿದರು. ಮುಂದೆ ದಿ. ಶ್ರೀಮತೀ ಜಾನಕೀಬಾಯಿ ಮಾರ್ತಂಡರಾವ ಪಾಟೀಲ ಅಸುಂಡಿ, ಇವರ ಸ್ಮರಣಾರ್ಥವಾಗಿ, ಇವರ ಚಿರಂಜೀವಿಗಳಾದ. ೧) ವಸಂತ, ೨) ಮಹಾದೇವ (ರೂಪಣ್ಣ) ೩) ಚಂದ್ರಶೇಖರ

ಇವರು ೫೦೨ ರೂಪಾಯಿ ದೇಣಿಗೆ ಸಲ್ಲಿಸಿದರು. ನಾಲ್ಕನೆಯವರಾಗಿ, ಶ್ರೀ ನಾರಾಯಣ ಬನಂಭಟ್ಟ ಪೂಜಾರ ಚೊಳಚಗುಡ್ಡ (ಬೋರಿವಿಲಿ, ಮುಂಬೈ) ಇವರು ತಮ್ಮ ಚಿರಂಜೀವನಾದ "ಚಿದಂಬರ ಪ್ರಸನ್ನ" ನ ಹುಟ್ಟು ಹಬ್ಬದ ಕಾಣಿಕೆಯೆಂದು, ೨೦೧ ರೂಪಾಯಿ ಸಲ್ಲಿಸಿದರು. ಐದನೆಯ ದಾನ, ಬೆಡಸೂರ ಜಕ್ಕಣಗೌಡರ (ಮಹಾಸ್ವಾಮಿಯ ತಾಯಿಯ ತವರುಮನೆತನದ ವರು) ವಂಶಜರಾದ ಶ್ರೀ ಟಿ. ಸೀ. ಪಾಟೀಲ, ಎಲ್. ಎಲ್. ಬೀ. ಧಾರ ವಾಡ ಅವರು ೧೦೧ ರೂ. ಸಲ್ಲಿಸಿದರು. ತಮ್ಮ ಪರಿಚಿತರಿಂದ ಇನ್ನೂ ಹೆಚ್ಚಿನ ಸಹಾಯ ಮಾಡಿಸುವದಾಗಿ ಆಶ್ವಾಸನವಿತ್ತಿದ್ದಾರೆ. ಆನಂತರ ಶ್ರೀ ಎಚ್. ಜೀ. ಜೋಶಿ, ಬಿ. ಎ. ಎಮ್. ಇಡಿ. ಸರಕಾರೀ ಟ್ರೇನಿಂಗ ಕಾಲೇಜದ ನಿವೃತ್ತ ಪ್ರಿನ್ಸಿಪಾಲರು (ದಿ. ಪಂಡಿತ ಕೇಶವ ಶರ್ಮಾ ಗಲಗಲಿಯವರ ಮಕ್ಕಳು) ೧೦೧ ರೂ. ಸಲ್ಲಿಸಿದರು. ಬೆಳಗಾವಿಯಲ್ಲಿ ಶ್ರೀ ವಸಂತರಾವ ಕುಲಕರ್ಣಿ (ಕೇಳಕರ ಬಾಗ) ಇವರು ನನ್ನನ್ನು ಆದರದಿಂದ ಬರಮಾಡಿಕೊಂಡು, ಸತ್ಯ ಚಿದಂಬರ ಪೂಜೆ, ಮಹಾಸ್ವಾಮಿಯ ಅಕ್ಷಯ್ಯ ಕಲಶ (ಗುಂಡಿಯ) ಪೂಜೆ, ಬಿಲ್ವಾರ್ಚನ, ಮೊದಲಾದವುಗಳನ್ನು ಮಾಡಿಸಿ ಸ್ವತಃ ೫೧ ರೂಪಾಯಿಗಳನ್ನು ಕೊಟ್ಟು, ತಮ್ಮ ಪರಿಚಿತರಿಂದ ಆರ್ಥಿಕ ಸಹಾಯ ಮಾಡಿಸಿ ಕೊಟ್ಟರು. ಮುಂಬಯಿಯ ಡಾ. ಚಿದಂಬರ ಕುಲಕರ್ಣಿ, ಧಾರವಾಡದ ಶ್ರೀ ಬಾಬೂರಾವ ಹಣಮಂತರಾವ ಕುಲಕರ್ಣಿ ಅವರು ಪ್ರತಿಯೊಬ್ಬರು ೫೦ ರೂಪಾಯಿಗಳನ್ನು ಸಲ್ಲಿಸಿದರು. ಇದರಂತೆ ೧೧, ೫, ೩, ೨, ರೂ. ಹೀಗೆ ಅನೇಕ ಭಕ್ತರು ಸಹಾಯ ಮಾಡಿದ್ದಾರೆ. ಅವರೆಲ್ಲರ ಉಪಕಾರ ಸ್ಮರಿಸಿ, ಚಿದಂಬರನು ಸಕಲರಿಗೂ ಕಲ್ಯಾಣ ಮಾಡಲೆಂದು ಬೇಡಿಕೊಳ್ಳುವೆ.

ಈ ಮುದ್ರಣ ಕಾರ್ಯಕ್ಕಾಗಿ ನನ್ನ ಬೆಳಗಾಂವಿಯ ವಾಸ್ತವ್ಯದಲ್ಲಿ ನನಗೆ ಎಲ್ಲ ಬಗೆಯ ಅನುಕೂಲತೆಯನ್ನು ಮಾಡಿ ಕೊಟ್ಟ, ಶ್ರೀ. ಚಿದಂಬರ ಪಾಟೀಲ ಹಾಗೂ ಸೌ. ಸುಚೇತಾ ಪಾಟೀಲ ಇವರಿಗೂ, ಕೇಳಕರ ಬಾಗದಲ್ಲಿದ್ದ ನನ್ನ ಕಕ್ಕಂದಿರಾದ ಶ್ರೀ ಮಾರ್ತಂಡ ಮಾಸ್ತರ ಹಾಗೂ ಅವರ ಧರ್ಮಪತ್ನಿಗೂ ನಾನು ಋಣಿಯಾಗಿದ್ದೇನೆ. ವರಕವಿಗಳಾದ ಪದ್ಮಶ್ರೀ ಬೇಂದ್ರೆಯವರು, ಇದೇ ವಿಜಯದಶಮಿ (ದಿ. ೨–೧೧–೭೬) ಮುಂಜಾನೆ ೯–೩೦ಕ್ಕೆ ಸಂದರ್ಶನ ಕೊಟ್ಟು, ಮುತ್ತಿನಂತಹ ಹತ್ತು ಮಾತುಗಳನ್ನು ಹೇಳಿ, ಶ್ರೀ ಚಿದಂಬರ ಪ್ರಕಾ

ಶನಕ್ಕೆ ತಮ್ಮ ಕೊಡುಗೆಯನ್ನು ನೀಡಿ, ಮಾರ್ಗದರ್ಶನ ಮಾಡಿ, ಆಶೀರ್ವದಿಸಿದರು. "ಗುರುಭಕ್ತೀಚೆ ಅಭಂಗ" ಎಂಬ ರಾಜಾರಾಮವಿರಚಿತ ೧೨ ಅಭಂಗಗಳನ್ನು ಕನ್ನಡದಲ್ಲಿ ಅನುವಾದಿಸಿ ಕೊಟ್ಟಿದ್ದಾರೆ. ನಾನು ಅವರಿಗೆ ಚಿರಋಣಿ. ಆನಂದವನದ ಮಾನ್ಯ ಚಿದಂಬರ ಮೂರ್ತಿಗಳು ಮಹಾಸ್ವಾಮಿಯ ಹಾಗೂ ಶೇಷಾಚಲೇಶ್ವರರ ಬ್ಲಾಕುಗಳನ್ನು ಕೊಟ್ಟದ್ದಕ್ಕಾಗಿ, ಹಾಗೂ ಶ್ರೀ ಚಿದಂಬರ ವಾಙ್ಮಯ ಪ್ರಕಾಶನದಲ್ಲಿ ಸಂಪೂರ್ಣ ಸಹಕಾರ ನೀಡುವದಾಗಿ, ಆಶ್ವಾಸನ ಕೊಟ್ಟದ್ದಕ್ಕಾಗಿಯೂ ಅವರಿಗೆ ಕೃತಜ್ಞತೆ ಸಲ್ಲಿಸುತ್ತೇನೆ. ನ್ಯಾಯ, ಮೀಮಾಂಸಾ-ವಿದ್ವಾನ್ ಪಂಡಿತ ಮಾರ್ತಂಡದೀಕ್ಷಿತರು, ಕರ್ನಾಟಕ ಯುನಿವ್ಹರ್ಸಿಟಿ ( ಸಂಸ್ಕೃತ ಡಿ. ) ಅವರೂ, ವಿದ್ವನ್ಮಣಿ ದಿ. ನಾಗೇಶ ಶಾಸ್ತ್ರಿಗಳು ಉಪ್ಪಿನ ಬೆಟಗೇರಿ ಅವರ ಮಕ್ಕಳಾದ ಪಂಡಿತಪ್ರಕಾಂಡ ಭಾಲಚಂದ್ರ ಶಾಸ್ತ್ರಿಗಳೂ, ( ಶಂ. ಸಂ. ಪಾ. ಶಾಲೆ ಧಾರವಾಡ ) ಸೂಕ್ತ ಸಲಹೆಗಳನ್ನು ಕೊಟ್ಟು ನನ್ನನ್ನು ಉಪಕೃತನನ್ನಾಗಿ ಮಾಡಿದ್ದಾರೆ. ತರ್ಕ, ವೇದಾಂತ ವಿದ್ವಾನ್ ಪಂಡಿತ ಯಜ್ಞೇಶ್ವರ ಶಾಸ್ತ್ರಿ ಬಂಕಾಪೂರ (ಶಿವಮೊಗ್ಗ), ಡಾಕ್ಟರ, ಚಿದಂಬರ ಕುಲಕರ್ಣಿ, ಮುಂಬೈ, ಪೂಜ್ಯ ಚಿದಂಬರ ಯಜ್ಞೇಶ್ವರ ದೀಕ್ಷಿತ ಮಾಸ್ತರರು, ಶ್ರೀ. ಎಲ್. ಸಿ. ಪಾಟೀಲ, ಪ್ರೊಫೆಸರ. ಆರ್. ಪಿ. ಡಿ. ಕಾಲೇಜ ಹಾಗೂ ಶ್ರೀ ಗೋವಿಂದ ಮೂರ್ತಿ ದೇಸಾಯಿ, ಮ್ಯಾನೇಜರ, ಸ್ಟೇ. ಬ್ಯಾ. ಬೆಳಗಾಂವ. ಹಾಗೂ ಶ್ರೀ ಗೋವರ್ಧನಾಚಾರ್ಯ ಗಲಗಲಿ ಎಂ. ಎ. ಬಿ. ಟಿ. ಅವರು ಗ್ರಂಥವನ್ನು ಮೆಚ್ಚಿ ಅಭಿಪ್ರಾಯ ಬರೆದು ನನ್ನನ್ನು ಉಪಕೃತನನ್ನಾಗಿ ಮಾಡಿದ್ದಾರೆ. ಎಲ್ಲರಿಗೂ ಅಭಿವಂದನೆಗಳು. ಧಾರವಾಡ ಶ್ರೀ ಹಣಮಂತರಾವ ಉಣಕಲ್‌ಕರ ಅವರು ಶ್ರೀಮಚ್ಚರಿತ್ರ ಗ್ರಂಥದ ತಿರುಳನ್ನು ತಿಳಿಸಿಕೊಟ್ಟ ಬಗ್ಗೆ. ಶ್ರೀ ಬಂಡೋಪಂತ ಉಗರಗೋಳಕರ ಅವರು, ರಾಜಾರಾಮ, ವಿಠಾಬಾಯಿ ಅವರ ಬಗ್ಗೆ ಅಭಂಗಗಳನ್ನು ಹೇಳಿದ್ದಕ್ಕೆ, ಸೌ. ನಿರ್ಮಲಾ ಶ್ರೀಮತಿ ಸರಸ್ವತೀಬಾಯಿ ಯಾರ್ದೀ ಅವರು ಶ್ರೀಮಚ್ಚರಿತ್ರದ ನಕಲನ್ನು, ನಿತ್ಯದ ತಪಶ್ಚರ್ಯವೆಂದು ತಿಳಿದು ಮಾಡಿಕೊಟ್ಟದ್ದಕ್ಕೆ, ಅವರಿಗೆ ಕೃತಜ್ಞತೆ ಸಲ್ಲಿಸುವದು ನನ್ನ ಕರ್ತವ್ಯ. ಬ್ಲಾಕುಗಳನ್ನು ಕೊಟ್ಟ, ಶ್ರೀ ಚಿ. ಸೇ. ಮಂಡಲ ಮುಂಬೈ, ಅವರಿಗೆ ಕೃತಜ್ಞ. ವಿಜಯಲಕ್ಷ್ಮಿ ಆರ್ಟ್ಸ ಪ್ರಿಂಟರ್ಸ, ಶ್ರೀ ಮೋಹನರಾವ ಚಿದಂಬರ ಕುಲಕರ್ಣಿ ಅವರು ಗ್ರಂಥವನ್ನು ಸುಂದರವಾಗುವಂತೆ ಮುದ್ರಿಸಿ ಕೊಟ್ಟದ್ದಕ್ಕೂ, ಹಸನ್ಮುಖಿ

ಗಳಾದ ಕಂಪೋಜಿಟರ್ಸ ಚಂದ್ರು, ಪಾಯಪ್ಪಾ, ಕು. ಲೀಲಾ, ಅವರಿಗೂ (ಅಕ್ಷರಗಳನ್ನು ಜೋಡಿಸುವವರು), ಪ್ರತ್ಯಕ್ಷ ಅಪ್ರತ್ಯಕ್ಷರೀತಿಯಿಂದ ಸಹಾಯ ಸಲ್ಲಿಸಿದ ಯಾವತ್ತೂ ಮಹನೀಯರಿಗೂ ನಾನು ಉಪಕೃತ. ಮುಖಪುಟದ ಸುಂದರಚಿತ್ರವನ್ನು ತೆಗೆದುಕೊಟ್ಟ ಶ್ರೀ. ಎಸ್. ಎ. ಕುಲಕರ್ಣಿ, ಹುಬ್ಬಳ್ಳಿ ಅವರಿಗೆ ನಾನು ಋಣಿ. ಭಕ್ತರನೇಕರು ಬಿಲ್ವಾರ್ಚನೆಯಕಾರ್ಯಕ್ಕೆ, ಗುಂಡಿಯ ಪೂಜೆಯ ಕಾಲಕ್ಕೆ, ಅಭಿಷೇಕ ಕಾಲಕ್ಕೆ. ಸತ್ಯಚಿದಂಬರ ಪೂಜೆಯ ಕಾಲಕ್ಕೆ ಮಂಗಲ ಕಾಣಿಕೆಯನ್ನು ಸಮರ್ಪಿಸಿದ್ದಾರೆ. ಅಂತಹ ಮಂಗಲ ಕಾಣಿಕೆಯನ್ನೂ ಈ ಗ್ರಂಥ ಮುದ್ರಣಕ್ಕೆ ಉಪಯೋಗ ಮಾಡಿಕೊಂಡಿದ್ದೇನೆ. ಮುದ್ರಣದಲ್ಲಿ ಅಜಾಗರೂಕತೆಯಿಂದ, ಅಥವಾ ಮಾಹಿತಿ ಸಂಗ್ರಹಿಸುವಲ್ಲಿ ಉಂಟಾದ ಕೆಲದೋಷಗಳು ಉಳಿಯುವದು ಅನಿವಾರ್ಯ. ಶುದ್ಧಿ ಪತ್ರದಲ್ಲಿ ಕೊಟ್ಟಂತೆ, ಸಹೃದಯಿಗಳಾದ ವಾಚಕರು, ಸರಿಪಡಿಸಿಕೊಳ್ಳಬೇಕಾಗಿ ಬಿನ್ನಹ. ಭಕ್ತವೃಂದಕ್ಕೆಲ್ಲ ಚಿದಂಬರನು ಕಲ್ಯಾಣ ಮಾಡಲೆಂದು ಇನ್ನೊಮ್ಮೆ ಪ್ರಭುಚರಣದಲ್ಲಿ ಪ್ರಾರ್ಥಿಸಿ, ಈ ನಿವೇದನೆಯನ್ನು ಮುಗಿಸುತ್ತೇನೆ.

"ಸರ್ವೇ ಭದ್ರಾಣಿ ಪಶ್ಯಂತು ಸರ್ವೇಸಂತು ನಿರಾಮಯಾಃ ।
ಸರ್ವೇ ಚ ಸುಖಿನಃ ಸಂತು ಮಾ ಕಶ್ಚಿತ್ ದುಃಖಮಾಪ್ನುಯಾತ್" ॥
ಓಂ ಸಹನಾವವತು । ಸಹನೌ ಭುನಕ್ತು । ಸಹ ವೀರ್ಯಂ ಕರವಾವಹೈ ।
ತೇಜಸ್ವಿ ನಾವಧೀತಮಸ್ತು । ಮಾ ವಿದ್ವಿಷಾವಹೈ ॥

ಓಂ ಶಾಂತಿಃ ಶಾಂತಿಃ ಶಾಂತಿಃ ಶಿವ ಚಿದಂಬರ



॥ ಶ್ರೀ ಚಿದಂಬರೋ ವಿಜಯತೆ ॥

# ಸಹಾಯ ಸಲ್ಲಿಸಿದ ಮಹನೀಯರ ವಿವರಗಳು

| ಅ. ನಂ. | ಹೆಸರು ಮತ್ತು ಊರು | ರಕಂ ರೂ. |
|---|---|---|
| | ಶ್ರೀ ಸ್ವಾಮಿಯ ಕಲಶದಿಂದ, (ಗುಂಡಿಯಿಂದ) ಧಾರವಾಡ | ೧೧ |
| ೧ | ” ದತ್ತಾತ್ರಯ ರಾಮಚಂದ್ರ ಬೇಂದ್ರೆ, ಧಾರವಾಡ | ೧೧ |
| | ” ವಸಂತ ಪಾಟೀಲ, ೧೬೮ ರೂ, ಧಾರವಾಡ | |
| ೨ | ” ಮಹಾದೇವ ಪಾಟೀಲ, ೧೬೭ ರೂ, ದಾಂಡೇಲಿ | ೫೦೨ |
| | ” ಚಂದ್ರಶೇಖರ ಪಾಟೀಲ ೧೬೭ ರೂ, ಬಾಗಲಕೋಟ | |
| ೩ | ” ನಾನಾಸಾಹೇಬ ಕುಲಕರ್ಣಿ, ಎಮ್. ಎ.,ಕಮಡೊಳ್ಳಿ | ೫೦೧ |
| ೪ | ” ಆರ್. ಕೆ. ತಿಮ್ಮಾಪೂರ, ಬಿ. ಇ., ಡೊಂಬಿವಲಿ | ೫೦೧ |
| ೫ | ” ನಾರಾಯಣರಾವ ಬಿ. ಪೂಜಾರ, ಬೋರಿವಲಿ | ೨೦೧ |
| ೬ | ” ಟಿ. ಸಿ. ಪಾಟೀಲ, ಎಲ್, ಎಲ್. ಬಿ., ಧಾರವಾಡ | ೧೦೧ |
| ೭ | ” ಎಚ್. ಜಿ. ಜೋಶಿ ತೇಜಸ್ವಿನಗರ, ಧಾರವಾಡ | ೧೦೧ |
| ೮ | ” ಬೋರಿವಲಿಯ ಭಕ್ತರಿಂದ ಸಾಮೂಹಿಕ ಕಾಣಿಕೆ | ೫೧ |
| ೯ | ” ವಸಂತರಾವ ವಾಮನರಾವ ಕುಲಕರ್ಣಿ, ಬೆಳಗಾಂವ | ೫೧ |
| ೧೦ | ” ಆನಂದ ಶ್ರೀಪಾದರಾವ ಪದಕಿ,ಹುಬ್ಬಳ್ಳಿ | ೫೧ |
| ೧೧ | ” ಬಾಬುರಾವ ಹಣಮಂತರಾವ ಕುಲಕರ್ಣಿ, | ೫೦ |
| ೧೨ | ಡಾ. ಚಿದಂಬರ ಕುಲಕರ್ಣಿ, ಜೋಗೇಶ್ವರಿ | ೫೦ |
| ೧೩ | ಶ್ರೀ ಜಿ. ಸಿ. ಇನಾಮದಾರ, ಧಾರವಾಡ | ೩೬ |
| ೧೪ | ” ಎಮ್. ಸಿ. ದೀಕ್ಷಿತ, ಹುಬ್ಬಳ್ಳಿ | ೩೬ |
| ೧೫ | ” ಎಸ್. ಸಿ. ದೀಕ್ಷಿತ, ಪುಣೆ | ೩೬ |
| ೧೬ | ” ಎಚ್. ಎಸ್. ದೊಡವಾಡ, ಹುಬ್ಬಳ್ಳಿ | ೩೧ |
| ೧೭ | ” ಶಂಕರ ಸ್ವಾಮಿಗಳು ಚಕ್ರವರ್ತಿ, ಆನಂದವನ | ೨೭ |
| ೧೮ | ” ಬಿ. ಜಿ. ಹರಿದಾಸ, ದೊಂಬಿವಲಿ | ೨೫ |

೧೯ " ಸಿದ್ಧಲಿಂಗಯ್ಯ ಮೂರ್ತಿ, ಬೆಳಗಾಂವ ೨೫
೨೦ ಶ್ರೀ ಟಿ. ಎನ್. ಜೋಶಿ ಸಿಗ್ನಲರ, ಭಾಂಡೂಪ ೨೫
೨೧ " ವೆಂಕಟೇಶ ಕೊಂಡಜ್ಜಿ, ದಾವಣಗೇರಿ ೨೫
೨೨ " ಎಮ್. ಬಿ. ಬಂಕಾಪುರ, ಬೆಂಗಳೂರ ೨೫
೨೩ " ವಸಂತರಾವ ವ್ಹಿ. ಕುಲಕರ್ಣಿ, ಕಾರ್ಲಕೊಪ್ಪ ೨೫
೨೪ " ರಾಜಣ್ಣಾ ಪಟವಾರಿ, ಗುಲಬುರ್ಗಾ ೨೫
೨೫ " ಕೃಷ್ಣರಾವ ದ. ಶಿರಾಳಕ ಹಾಗೂ ಇತರ ಭಕ್ತರು
ಸಮರ್ಪಿಸಿದ್ದು, ಬೆಳಗಾಂವ ೨೨ ೪೪
೨೬ ಶ್ರೀಮತಿ ಶ್ವೇತಾ ಎಸ್. ಕುಲಕರ್ಣಿ, ಬೆಳಗಾಂವ ೨೧
೨೭ ಶ್ರೀ ಎನ್. ಕೆ. ಜೋಶಿಯವರ ಮಿತ್ರರಿಂದ, ಧಾರವಾಡ ೧೯
೨೮ " ಗಣಪತಿ ಹೆಗಡೆ, (ಟಿಳಕವಾಡಿ) ಬೆಳಗಾಂವ ೨೧
೨೯ " ಕೆ. ಎಸ್. ಕುಲಕರ್ಣಿ, ಆಡೂರ ೧೧
೩೦ " ಡಾ. ಶಿವ. ಎಸ್., ಹುಬ್ಬಳ್ಳಿ "
೩೧ " ತಾರಾಚಂದ ಶಂಕರಲಾಲ, ಹುಬ್ಬಳ್ಳಿ "
೩೨ " ಹಣಮಂತರಾವ ವ್ಹಿ. ಇಂಗಳಗಿ, ಧಾರವಾಡ "
೩೩ " ಸೀತಾರಾಮ ಕಾಶೀನಾಥ ರಾಠೆ, ಔರಂಗಾಬಾದ "
೩೪ " ವ್ಹಿ. ವ್ಹಿ. ಕುರವಿನಕೊಪ್ಪ ಮಹಾದೇವರ ರೋಡ, ಬೆಳಗಾಂವ "
೩೫ " ಜಿ. ಕೆ, ಮೊಗಲೇ, (ಪಾಂಗುಳಗಲ್ಲಿ) ಬೆಳಗಾಂವ "
೩೬ " ಎಸ್. ಟಿ. ಅಪ್ಪುಗೋಳ, ಕಾಕತಿವೇಸ, ಬೆಳಗಾಂವ "
೩೭ " ಎಸ್. ಟಿ. ಕಟನೂರ, ಬೆಳಗಾಂವ "
೩೮ " ಬಿ. ಟಿ. ನಾರಿಯರ್, " "
೩೯ " ಅಚ್ಯುತಕುಮಾರ " "
೪೦ " ಎಫ್. ಕೆ. ಮುಲ್ಲಾ " "
೪೧ " ಆರ್. ಪೀ. ದೀಕ್ಷಿತ, ದೊಂಬಿವಲಿ "
೪೨ " ಎನ್. ವ್ಹಿ. ದೇಶಪಾಂಡೆ, ರಿಸಬೂಡವಾಡಾ, ಧಾರವಾಡ "
೪೩ " ಸಾಂಬಣ್ಣಾ ದೇಶಪಾಂಡೆ, ಹಾಸನ್ "
೪೪ " ಬಿ. ಸಿ. ಕಾಲಕುಂದ್ರಿ, ಬೆಳಗಾಂವ "

| | | | |
|---|---|---|---|
| ೪೫ | ಶ್ರೀ | ಆರ್. ಬಿ. ಯಳಕೋಟಿ, ಬೆಳಗಾಂವ | ೧೧ |
| ೪೬ | ,, | ಆಯ್. ಬಿ. ಮೇಂಡರೆ ,, | ,, |
| ೪೭ | ,, | ಎನ್. ವ್ಹಿ. ಕುಲಕರ್ಣಿ, ಬಸವನ ಬೀದಿ, ಬೆಳಗಾಂವ | ,, |
| ೪೮ | ,, | ಆರ್. ಎಚ್. ದೇಶಪಾಂಡೆ ,, | ,, |
| ೪೯ | ,, | ಶಾಮರಾವ ಎಚ್. ಕುಲಕರ್ಣಿ, ಹುಬ್ಬಳ್ಳಿ | ,, |
| ೫೦ | ,, | ಆರ್. ಕೆ. ಬಹದ್ದೂರ ದೇಸಾಯಿ, ಬೆಳಗಾಂವ | ,, |
| ೫೧ | ,, | ಎಲ್. ಕೆ. ಪಾಟೀಲ ಸೆಂ. ಬ್ಯಾಂಕ, ಹುಬ್ಬಳ್ಳಿ | ,, |
| ೫೨ | ,, | ಎಲ್. ಜಿ. ಪೂಜಾರ, ಲಕ್ಷ್ಮೇಶ್ವರ | ,, |
| ೫೩ | ,, | ಚಿದಂಬರ ಕೆ. ಪಾಟೀಲ (ಎಮ್. ಎ.) ಬೆಳಗಾಂವ | ,, |
| ೫೪ | ,, | ಅಶ್ವತ್ಥಭಟ್ಟ ಹಾವನೂರ, ಹಾವನೂರ | ,, |
| ೫೫ | ,, | ಎಚ್. ಎಚ್. ಕುಲಕರ್ಣಿ ವರ್ತಕವಾಡಾ, ದೊಂಬಿವಲಿ | ,, |
| ೫೬ | ,, | ಬಿ. ಎನ್. ಕುಲಕರ್ಣಿ, ಅಥಣಿ | ,, |
| ೫೭ | ,, | ಟಿ. ಎಲ್. ಕುಲಕರ್ಣಿ, ಪುಣೆ | ,, |
| ೫೮ | ,, | ಭೂಪ. ರಂ. ಯಾದಣ್ಣವರ, ಭಂಡಿವಾಡ | ,, |
| ೫೯ | ,, | ದುಂಡಪ್ಪಾ ಮಡಿವಾಳರ, ಬಡ್ಲಿ | ,, |
| ೬೦ | ,, | ಮಹಾದೇವ ಸಿದ್ದಪ್ಪಾ ಯಡವಣ್ಣವರ, ಭಂಡಿವಾಡ | ,, |
| ೬೧ | ,, | ದಿವಾಕರ ಗೋಪಾಳಭಟ್ಟ ಜೋಶಿ, ಪುಣೆ | ,, |
| ೬೨ | ,, | ಮುರಗೆಪ್ಪಾ ಸವದತ್ತಿ, ಧಾರವಾಡ | ,, |
| ೬೩ | ,, | ಚಂದ್ರಶೇಖರ ಮಾರ್ತಾಂಡ ಪಾಟೀಲ, ತಾಳೀಕೋಟಿ | ೧೦ |
| ೬೪ | ,, | ಎನ್. ಎ. ಪಾಟೀಲ, ಡಾ. ಧಾರವಾಡ | ೧೦ |
| ೬೫ | ,, | ಕೃಷ್ಣಾಚಾರ್ಯ ರಾಜಪುರೋಹಿತ, ಅಗಡಿ | ೬–೯೦ |
| ೬೬ | ,, | ಗರ್ದೆ, ಬೆಳಗಾಂವ | ೬ |
| ೬೭ | ,, | ಎನ್. ಕೆ. ಕುಲಕರ್ಣಿ, ಬೆಳಗಾಂವ | ೬ |
| ೬೮ | ,, | ಎಮ್. ಎಸ್. ಕುಲಕರ್ಣಿ ೪೦೨/೧ ಕುಲಕರ್ಣಿ ಗಲ್ಲಿ ಬೆ. | ೬ |
| ೬೯ | ,, | ಚನ್ನಪ್ಪಾ ತೊರಗಲ್, ಧಾರವಾಡ | ೫ |
| ೭೦ | ,, | ಧರ್ಮಸಿಂಗ ನರಗುಂದಕರ, ಧಾರವಾಡ | ೫ |
| ೭೧ | ,, | ಜಿ. ಜಿ. ದೇಸಾಯಿ, ಹುಬ್ಬಳ್ಳಿ | ೫ |

| | | |
|---|---|---|
| ೭೨ | ,, ವ್ಹಿ. ಜಿ. ಉಕ್ಕಲಿ, ಹುಬ್ಬಳ್ಳಿ | ೫ |
| ೭೩ | ,, ಕೆ. ನರಗುಂದ, ಧಾರವಾಡ | ೫ |
| ೭೪ | ,, ಚ. ಫ. ಹಿರೇಮಠ, ಹುಬ್ಬಳ್ಳಿ | ೫ |
| ೭೫ | ಶ್ರೀ ಸುಧೀಂದ್ರ ಸು. ಕೋಟಿ, ಹುಬ್ಬಳ್ಳಿ | ೫ |
| ೭೬ | ,, ರಾಮಚಂದ್ರ ಪಾಟೀಲ, ,, | ,, |
| ೭೭ | ,, ಮಹಾದೇವ ಮಾರ್ತಾಂಡ ಪಾಟೀಲ, ಬಾಗಲಕೋಟಿ | ,, |
| ೭೮ | ,, ಎ. ಎಸ್. ಶಹಾರೆ, ಅಥಣಿ | ,, |
| ೭೯ | ,, ಎಸ್. ಕೆ. ದ್ಯಾಮಣ್ಣವರ, ಬೆಳಗಾಂವ | ,, |
| ೮೦ | ,, ಎಮ್. ಎಫ್. ಜಾಡೇಕರ ,, | ,, |
| ೮೧ | ,, ಅರ್. ಎಸ್. ಲಿಂಗಣ್ಣವರ ,, | ,, |
| ೮೨ | ,, ಜಿ. ಆರ್. ಇಜೇರಿ ,, | ,, |
| ೮೩ | ,, ಬಿ. ಆರ್. ಕುಲಕರ್ಣಿ ,, | ,, |
| ೮೪ | ,, ಎಫ್. ಬಿ. ಉಪ್ಪಾರ ,, | ,, |
| ೮೫ | ,, ಎಸ್. ಸಿ. ಕಾಲಕುಂದ್ರಿ ,, | ,, |
| ೮೬ | ಶ್ರೀಮತಿ ಸರೋಜಾ ಕುಲಕರ್ಣಿ, ಧಾರವಾಡ | ,, |
| ೮೭ | ಶ್ರೀ ಎನ್. ಕೆ. ಜೋಶಿ, ತೇಜಸ್ವಿನಗರ, ಧಾರವಾಡ | ,, |
| ೮೮ | ,, ಎ. ಆಯ್. ದೊಡವಾಡ, ಧಾರವಾಡ | ,, |
| ೮೯ | ,, ರಾಮಣ್ಣಾ ಶಹಾರೇ, ವಡಗಾಂವ, ಬೆಳಗಾಂವ | ೧೦ |
| | | ೩೧೨೬=೩೪ |
| ೯೦ | ಶ್ರೀ ಗುಂಡಿಯಲ್ಲಿ ಬಂದ ಕಾಣಿಕೆ | ೧೨೧=೦೫ |
| ೯೧ | ಬ್ಯಾಂಕಿನಿಂದ ಬಡ್ಡಿ ಬಂದದ್ದು | ೧೪೨=೨೫ |
| | | ೩೩೮೯=೬೪ |



# ಆಧಾರ ಗ್ರಂಥಗಳು Bibliography


ಶ್ರೀಮಚ್ಚರಿತ್ರ ಮರಾಠಿ. ಸಖಾರಾಮ ಗರ್ದೇ

ಅಭಂಗ ಸಂಗ್ರಹ " ರಾಜಾರಾಮ ಮಹಾರಾಜ

ಅಭಂಗ ಸಂಗ್ರಹ " ವಿಠಾಬಾಯಿ ನಾಯಿಕ

ಶ್ರೀ ಚಿದಂಬರ ವಿಜಯ. ಕನ್ನಡ ಕಲ್ಲೋ ಗಣೇಶ ವಿಜಾಪೂರ

ಶ್ರೀ ಚಿದಂಬರ ಚರಿತ್ರ. ಸಂಸ್ಕೃತ ಸಾಂಬ ದೀಕ್ಷಿತರು

ಶ್ರೀ ಚಿದಂಬರ ಗುರು ಮಹಾತ್ಮ್ಯಂ. ಸಂಸ್ಕೃತ ರಾಮಚಂದ್ರ ದೇಶಪಾಂಡೆ

ಶ್ರೀ ಚಿದಂಬರ ಮಹಾಗುರು ಚರಿತ್ರ. ಮರಾಠಿ ಸಾಂಬ ದೀಕ್ಷಿತರು

ಶ್ರೀ ಚಿದಂಬರ ಲಘು ಚರಿತ್ರ ಮರಾಠಿ ರಾಜಾರಾಮ ಮಹಾರಾಜ

ಅಭಂಗರೂಪ ಚರಿತ್ರ " ಸಖಾರಾಮ ಗರ್ದೇ

ಗೋಮಾಂತಕ ಶುದ್ಧೀಚಾ ಇತಿಹಾಸ. ಮರಾಠಿ

Advanced History of India, By Ray Choudhari, Shri Mujumdar, and Kali Kinkar Dutt.

Tourist Guide to Chidambarm– C. P. Masilmamami B. A.

ಶ್ರೀ ಕೃಷ್ಣೇಂದ್ರ ಗುರು ಚರಿತ್ರ. ಕನ್ನಡ ವ್ಹಿ. ಬಿ. ದೇಸಾಯಿ

ಶ್ರೀ ಮಡಿವಾಳೇಶ್ವರ ಚರಿತ್ರ ಎಲಿಗಾರ

ಶ್ರೀ ಅವರಾದಿ ಫಲಾಹಾರೇಶ ಚರಿತ್ರ. ಕನ್ನಡ

Shri Chidambar Charitra. Review by Pandit Avalikar. M. A. K. C. Dharwar

ಮಹಾರಾಷ್ಟ್ರ ಕವಿ ಚರಿತ ಭಾಗ ೨. ಜ. ರ. ಅಜಗಾಂವಕರ

ಭಕ್ತಲೀಲಾಮೃತ. ಮರಾಠಿ ದಾಸ ಗಣೂ

ದಾಸಬೋಧ ಕನ್ನಡ ಶ್ರೀ ಗಣಪತ ಮಹಾರಾಜ, ಕನ್ನೂರ ಬಿ. ಎಸ್. ಸಿ.

ಬಾಪೂಗೋಖಲೇ ಪತ್ರ ವ್ಯವಹಾರ. ಮರಾಠೀ, ರಾಜವಾಡೆ ಇ. ಸಂ. ಧುಳೆ,

ಜಮಾನಮರ್ದ ಬಾಪೂ. ಮರಾಠೀ, ಮೋ. ಸಿ. ಗೋಖಲೇ

ಐತಿಹಾಸಿಕ ಲೇಖ ಸಂಗ್ರಹ, ಭಾಗ ೮ ರಿಂದ ೧೪, ಭಾ. ಇ. ಸಂ. ಮಂಡಲ ಪ್ರಕಾ

## —ವಿಷಯಾನುಕ್ರಮಣಿಕೆ—

## ಉಪಾಸನಾ ವಿಭಾಗ ೧-೬೪



**ಶ್ರೀ ಚಿದಂಬರಾರ್ಪಣಮಸ್ತು ।**

# ತಪ್ಪು–ಒಪ್ಪು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧ | ೧೬ | ಇತ್ಮಾದಿ | ಇತ್ಯಾದಿ |
| ೧೯ | ೨೬ | ಬರುವಮ | ಬರುವದು |
| ೨೧ | ೧೪ | ವಿಜ್ಞಾರೂಪಿಯಾದ | ವಿಜ್ಞಾನರೂಪಿಯಾದ |
| ೩೬ | ೭ | ಸ್ಥಃ | ತ್ರ । |
| ೫೧ | ೩ | ಘೇವುನ | ಘೇವುನ ದೀಕ್ಷೇಸ |
| ೫೩ | ೯ | ನಖಪರ | ನಖಪುರ |
| ೫೩ | ೨೩ | ಮಗ್ನಂ | ಮಗ್ನಃ । |
| ೫೫ | ೭ | ತಡಕೂಡಿಗೆ | ತಡಕೋಡಿಗೆ |
| ೫೬ | ೩ | ಬೇಡಿಕೋಡ | ಬೇಡಿಕೊಂಡ |
| ೯೨ | ೬ | ಜಾ | ಜಾಣ |
| ೯೨ | ೧೦ | ಅಕ್ಷವಮ್ಯಾಚೇ | ಅಕ್ಷಯ್ಯೀಚೆ |
| ೯೨ | ೧೩ | ೧೮೧ | ೧೦೧ |
| ೯೨ | ೨೩ | ಕಾಂತಾಹೇ | ಕಾಂತೇಚೆ |
| ೯೪ | ೧೧ | ವಿಜಯದಾಸ | ವಿಜಯೀದಾಸ |
| ೯೫ | ೨೭ | ಬ್ರಹ್ಮಯಾಗ | ಬ್ರಹ್ಮಯೋಗ |
| ೯೬ | ೯ | ಎನ್ನುತ್ತ | ಎನ್ನುತ್ತ ಪ್ರಸಾದ |
| ೧೧೭ | ೪ | ಖರ್ಟಾಗುತ್ತದೆ. | ಖರ್ಚಾಗುತ್ತದೆ. |
| ೧೧೯ | ೧೬ | ಚಿದಂಜರ | ಚಿದಂಬರ |
| ೧೨೩ | ೧೯ | ಆನಂದವದಲ್ಲಿ | ಆನಂದವನದಲ್ಲಿ |
| ೧೨೫ | ೧೬ | imporant | important |
| ೧೨೬ | ೧೯ | beisides | besides |
| ೧೩೩ | ೭ | ಮಾರ್ತಡ | ಮಾರ್ತಾಂಡ |
| ೦೩೪ | ೧೬ | ರೇಣೂಬಾಯಿ | ರಾಣೂಬಾಯಿ |

| | | | |
|---|---|---|---|
| ೧೩೯ | ೨೪ | ಸುಂರವಾವಾತ್ತು | ಸುಂದರವಾಗಿತ್ತು |
| ೧೪೮ | ೨೫ | ಇ. ಸ. ೧೮೭ | ಇ. ಸ. ೧೮೦೭ |
| ೧೫೦ | ೨ | ಲಿಂಬೆಣಂಣುಗಳು | ಲಿಂಬೇಹಂಣುಗಳು |
| ೧೬೦ | ೫ | ತಗ್ಬಿ | ತಪ್ಪಿ |
| ೧೬೦ | ೧೯ | ಕುಂವಗೋಳ | ಕುಂದಗೋಳ |
| ೧೬೯ | ೪ | ಪೌಢಾರ್ಥಂ | ಪ್ರೌಢಾರ್ಥಂ |

ಪುಟ ೧೩೧ ರಲ್ಲಿ, ಮುರಗೋಡದ ಬಳಿ (ತಲ್ಲೂರ ಗ್ರಾಮದಲ್ಲಿ) ಸ್ವಾಮಿನಿಷ್ಠ ಸೇವಕನ ಕೊಲೆಯಾಗಿತ್ತು ಎಂಬುವದು ತಪ್ಪು. ಮುರಗೋಡದಲ್ಲಿಯೇ ಕೊಲೆಯಾಗಿತ್ತು. ಒಪ್ಪು.

ಪುಟ ೧೪೫, ರಲ್ಲಿ ಚಿಕ್ಕೋಡಿ ಅಣ್ಣಂಭಟ್ಟರ ವಂಶಾವಳಿಯಲ್ಲಿ, ನೀಲಕಂಠಭಟ್ಟರ ಮಕ್ಕಳು ಚಿದಂಬರ, ಅನಂತ, ತಮ್ಮಣ್ಣ ಎಂದು ಮುದ್ರಿತವಾಗಿದ್ದು ತಪ್ಪು. ನೀಲಕಂಠಭಟ್ಟರ ಮಕ್ಕಳು, ೧) ಅಣ್ಣಭಟ್ಟ, ೨) ಬಾಳಂಭಟ್ಟ. ೩) ಭುಜಂಗಭಟ್ಟ

ಅಣ್ಣಭಟ್ಟರ ಮಕ್ಕಳು, ೧) ಚಿದಂಬರರಾವ ೨) ಅನಂತರಾವ, ೩) ತಮ್ಮಣರಾವ ಹೀಗೆ ಇರಬೇಕು.



# ಅಭಿಪ್ರಾಯಗಳು

೧) ಡಾ. ಚಿದಂಬರ ಕುಲಕರ್ಣಿ, M. A. Ph. D. Bombay

ಶ್ರೀ ಗಣೇಶ ದೀಕ್ಷಿತರ ಹೊಸ ಗ್ರಂಥ "ಶ್ರೀ ಚಿದಂಬರ ಪ್ರಕಾಶ ಭಾಗ ೧, ಮಹಾಸ್ವಾಮಿಯ ಭಕ್ತರಿಗೆಲ್ಲ ಅತ್ಯಂತ ಸಹಾಯಕವಾದುದು. ಆದರ ವಿಷಯ ವೈವಿಧ್ಯ, ಸರಳ ನಿರೂಪಣೆ, ಹಾಗೂ ಸಾಧಕರಿಗಾಗಿ ನೀಡಿದ ಸ್ಪಷ್ಟ ಸಲಹೆಗಳು, ಈ ಪುಸ್ತಕದ ಮಹತ್ತ್ವವನ್ನು ಹೆಚ್ಚಿಸಿವೆ. ಮಹಾಸ್ವಾಮಿಗಳ ವಂಶಜರಾದ ಲೇಖಕರು ಅಧಿಕಾರಯುಕ್ತವಾಗಿ ಹಾಗೂ ಶ್ರದ್ಧಾಪೂರ್ವಕವಾಗಿ ವಿವರಿಸಿದ ಅನೇಕ ವಿಷಯಗಳು, ಭಕ್ತರ ಹೃದಯದಲ್ಲಿಯ ಜ್ಯೋತಿಯನ್ನು ಪ್ರಜ್ವಲಿಸುವದರಲ್ಲಿ ಸಂಶಯವಿಲ್ಲ."

ಜೋಗೇಶ್ವರೀ, ಮುಂಬೈ

೨೪-೧೦-೭೬

—o—

೨) "ಶ್ರೀ ಚಿದಂಬರ ಪ್ರಕಾಶ" ಗ್ರಂಥದ ಮೊದಲನೆಯ ಭಾಗವನ್ನು ಶ್ರೀ ಜಿ. ಸಿ. ಇನಾಮದಾರರು (ಶ್ರೀ ಬಾಪೂದಾದಾ ಅವರು) ಬರೆದು ಪ್ರಕಟಿಸಿದ್ದು ಸಂತೋಷದ ಸಂಗತಿ. ಈ ಭಾಗದಲ್ಲಿ ಸಾಕಷ್ಟು ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಿರುವರು. ಲೇಖಕರು ಶ್ರೀ ಮಹಾಸ್ವಾಮಿಯ ವಂಶಜರಿದ್ದು ಅವರಲ್ಲಿ ಸಾಕಷ್ಟು ಆಧಾರಭೂತ ಸಾಹಿತ್ಯವಿದೆ. ಉಪಾಸನಾ ವಿಭಾಗದಲ್ಲಿ, ಸಂತರ ಅಭಂಗಗಳಿದ್ದು ಭಕ್ತರ ಉಪಾಸನೆಗೆ ಅನುಕೂಲವಾಗಿದೆ. ಹಲ ಕೆಲವು ದ್ವಿರುಕ್ತಿಗಳಾಗಿವೆ. ಮಹಾಸ್ವಾಮಿಯ, ಹಾಗೂ ಶಿಷ್ಯರ ವಂಶಾವಳಿಗಳನ್ನು ಕೊಟ್ಟದ್ದರಿಂದ ಗ್ರಂಥ ಹೆಚ್ಚು ವಿಸ್ತೃತವಾಗಿದೆ. ಇಡಿಯಾಗಿ ಪ್ರಕಟವಾಗತಕ್ಕ ಈ ಗ್ರಂಥವು ಭಕ್ತರ ಸಂಗ್ರಾಹ್ಯವಾಗಿರುವದು.

ಕೇಳಕರ ಬಾಗ, ಬೆಳಗಾಂವ ಚಿ. ಯ. ದೀಕ್ಷಿತ.

೨೫-೧೧-೭೬

—o—

ಶ್ರೀ ಗಣೇಶ ದೀಕ್ಷಿತರು ಬರೆದ ಶ್ರೀ ಚಿದಂಬರ ಪ್ರಕಾಶ, ಭಾಗ ೧. ಇದನ್ನು ಓದಿದೆನು. ಶ್ರೀ ಚಿದಂಬರ ಮಹಾಸ್ವಾಮಿಗಳ ಸರ್ವತೋಮುಖ ದಿವ್ಯ ಸ್ವರೂಪವನ್ನು ತಿಳಿಯಲು ಗ್ರಂಥವು ಅತ್ಯಂತ ಉಪಕಾರಿಯಾಗಿದೆ. ಉಪಾಸನಾ ವಿಭಾಗವನ್ನು ಸೇರಿಸಿದ್ದರಿಂದ ಸಾಧಕರಿಗೆ ಉಪಯುಕ್ತವಾಗಿದೆ. ಶ್ರೀ ಚಿದಂಬರ ಕೃಪೆಗೆ ಪಾತ್ರವಾದ ಕೆಲವು ಮನೆತನಗಳ ಸಂಕ್ಷಿಪ್ತ ವಿವರಣೆಯೂ ಕೂಡ, ಆ ಆ ಮನೆತನಗಳಲ್ಲಿ ಚಿದಂಬರ ಸಂಪ್ರದಾಯವು, ಇದುವರೆಗೆ ನಡೆದು ಬಂದಿದೆ ಎಂಬುದನ್ನು ತೋರಿಸುತ್ತದೆ. ಕರ್ಮಾನುಗುಣವಾಗಿ ಸುಖದುಃಖಗಳು ಮಾನವನನ್ನು ಸುತ್ತುವರಿಯುತ್ತಲೇ ಇರುತ್ತವೆ. ಆದರೆ ಎಂಥ ಸಂದರ್ಭಗಳಲ್ಲಿಯೂ ವಿಕಾರಕ್ಕೊಳಗಾಗದಂತೆ, ಮನಸ್ಸನ್ನು ಅಣಿಗೊಳಿಸುವದೇ ಜೀವನದ ಪ್ರಗತಿಯ ಹೆಗ್ಗುರುತು. ಅದು ಭಕ್ತಿ ಉಪಾಸನಾ ಮಾರ್ಗದಿಂದ ಕ್ರಮೇಣ ಸಿದ್ಧಿಸುವದು. ಆ ಕ್ರಮವನ್ನನುಸರಿಸಲು, ಈ ಗ್ರಂಥ ಸ್ವಲ್ಪಾದರೂ ಸಹಾಯಕವಾಗಲೆಂಬುದೇ ಲೇಖಕರ ಉದ್ದೇಶ. ಅದು ಸಫಲವಾಗಲೆಂದು, ಶ್ರೀ ಚಿದಂಬರ ಮಹಾಪ್ರಭುವಿನ ಅಡಿದಾವರೆಗಳಲ್ಲಿ ಬೇಡಿಕೊಳ್ಳುವೆ.

ಶಿವಮೊಗ್ಗಾ
೩೦–೧೧–೭೬

ಬಿ. ಎಸ್. ಯಜ್ಞೇಶ್ವರ ಶಾಸ್ತ್ರಿಗಳು,
ನ್ಯಾಯ, ವೇದಾಂತ ವಿದ್ವಾನ್

—o—

ಈ ಗ್ರಂಥವು, ಲೇಖಕರು ತಮ್ಮ ನಿವೇದನೆಯಲ್ಲಿ ಸೂಚಿಸಿದಂತೆ, ನಾಲ್ಕು ಭಾಗಗಳಲ್ಲಿ ಮುದ್ರಿತವಾಗಲಿರುವ ಬೃಹದ್‌ಗ್ರಂಥದ ಪ್ರಥಮ ಭಾಗವಾಗಿದೆ. ಅನೇಕ ವರುಷಗಳ ಸಂಶೋಧನೆ ಹಾಗೂ ಸತತಾಭ್ಯಾಸದ ಫಲವಾಗಿ ಶ್ರೀ ಚಿದಂಬರ ಮಹಾಸ್ವಾಮಿಗಳ ಸಾಕ್ಷಿಚಿತ್ರವನ್ನು ಯಥಾವತ್ತಾಗಿ, ಆಧುನಿಕ ಶಾಸ್ತ್ರೀಯ ದೃಷ್ಟಿಯನ್ನಿಟ್ಟುಕೊಂಡು, ಬರೆದ ಶ್ರೀ ಜಿ. ಸಿ. ಇನಾಮದಾರರು ನಿಜವಾಗಿ ಅಭಿನಂದನಾರ್ಹರು. ಶ್ರೀ ಚಿದಂಬರ ಮಹಾಸ್ವಾಮಿಗಳ ಬಗ್ಗೆ ಈ ವರೆಗೂ ಅಸ್ತಿತ್ವದಲ್ಲಿರುವ ವಾಙ್ಮಯದ ಸೂಕ್ಷ್ಮಪರಿಚಯ ಮಾಡಿ ಕೊಟ್ಟಿರುವದಲ್ಲದೇ, ಕೆಲ ಪ್ರಮುಖ ಭಕ್ತರ ವ್ಯಕ್ತಿ ಪರಿಚಯವನ್ನೂ ಮಾಡಿಕೊಟ್ಟಿದ್ದಾರೆ.

ಶ್ರೀ ಚಿದಂಬರ ವಾಙ್ಮಯದ ಬಗ್ಗೆ ಇನ್ನೂ ಸಂಶೋಧನೆ ಮಾಡಬೇಕೆಂಬುವ ವರಿಗೆ ಈ ಕೃತಿ ಮಾರ್ಗದರ್ಶಕವಾಗಿದೆ.

ಈ ಗ್ರಂಥದಲ್ಲಿ ಎರಡು ವಿಭಾಗಗಳಿವೆ. ಪ್ರಥಮ ವಿಭಾಗದ ಹನ್ನೆರಡು ಕಿರಣಗಳು, ಶ್ರೀ ಚಿದಂಬರ ಮಹಾರಾಜರ ಕಾಲದ ಹಿನ್ನೆಲೆ, ಅವರ ಪೂರ್ವಜರ ಇತಿಹಾಸ, ಅವತಾರದ ಹಿನ್ನೆಲೆ ಮೊದಲಾದ ವಿವರಗಳನ್ನು ಐತಿಹಾಸಿಕ ತಳ ಹದಿಯ ಮೇಲೆ ವಿವರಿಸಿವೆ. ಹನ್ನೆರಡನೆಯ ಕಿರಣ ಶ್ರೀ ಮಹಾಸ್ವಾಮಿಗಳ ಜೀವನದ ತಿರುಳು, ಸ್ವಭಾವ ಇತ್ಯಾದಿ ವಿಷಯಗಳ ಬಗ್ಗೆ ಬಹಳೇ ಉಪಯುಕ್ತ ವಿವರಗಳನ್ನು ಕೊಟ್ಟಿದೆ. ಎರಡನೆಯ ವಿಭಾಗವು ಉಪಾಸನಾ ವಿಭಾಗ ವಾಗಿದ್ದು, ಚಿದಂಬರ ಭಕ್ತರಿಗೆ ಪ್ರತಿನಿತ್ಯ ಉಪಯೋಗವಾಗಬಲ್ಲ ವಿವರ ಗಳನ್ನೊಳಗೊಂಡಿದೆ.

ಒಟ್ಟಿಗೆ ಈ ಗ್ರಂಥವು ಚಿದಂಬರ ಭಕ್ತರೆಲ್ಲರೂ ಅತ್ಯಾವಶ್ಯಕವಾಗಿ ಪಡೆ ಯಲೇ ಬೇಕಾದ ಕೃತಿಯಾಗಿದೆ.

ಪ್ರೊ. ಎಲ್. ಸಿ. ಪಾಟೀಲ

ಬೆಳಗಾಂವಿ — ಆರ್. ಪಿ. ಡಿ. ಸ್ಟಾಫ ಕ್ವಾರ್ಟರ್ಸ

೧-೧೨-೭೭ — ಟಿಳಕವಾಡಿ, ಬೆಳಗಾಂವಿ

—o—

ಶ್ರೀಮಚ್ಚಿದಂಬರ ವಿಭುಂ ಮನಸಾ ಸ್ಮರಾಮಿ ।

"ಶ್ರೀ ಚಿದಂಬರ ಪ್ರಕಾಶ"ದ ಲೇಖಕರು ಶ್ರೀ ಚಿದಂಬರೇಶ್ವರರ ವ್ಯಕ್ತಿಮತ್ತೆಯ ವಸ್ತುಸ್ಥಿತಿಯನ್ನು ಅನೇಕ ಅನುಭವಿಕ ಭಕ್ತರ ಗಾಥಾಗಳಿಂದ ಸಂಗ್ರಹಿಸಿ ತೋರಿಸಿದ್ದು, ಕನ್ನಡಿಯಲ್ಲಿ ಪರ್ವತವನ್ನು ತೋರಿಸಿದಂತೆ ಆಗಿದೆ. ಇವರ ಪರಮಪೂಜ್ಯ ತಂದೆಯವರಾದ ತಪಸ್ವೀ ಬ್ರಹ್ಮಶ್ರೀ ಪಂಡಿತಪ್ರವರ ಶ್ರೀ ಚಿದಂಬರ ದೀಕ್ಷಿತರವರ ಮುಖದಿಂದ, ಅತ್ಯಂತ ವಿಶ್ವಸನೀಯವಾದ ಇದ ರಲ್ಲಿಯ ಕೆಲವು ವಿಷಯಗಳನ್ನು, ನಾವೂ ಪ್ರತ್ಯಕ್ಷವಾಗಿ ಕೇಳಿ ಭಾವಬದ್ಧ ರಾದುದು ಅನುಭವ ಸಿದ್ಧವಾಗಿದೆ. ಈ ಪುಸ್ತಕದಿಂದ ಗುರುಭಕ್ತಿಯು ಹೆಚ್ಚಾಗಿ,

ಆಸ್ತಿಕ ಜನರಿಗೆ ಮಾರ್ಗದರ್ಶನವಾಗುವದರಲ್ಲಿ ಯಾವ ಸಂದೇಹವೂ ಇಲ್ಲ. ಶ್ರೀ ಮಹಾಸ್ವಾಮಿಯು ಇವರಿಗೆ ಅಧಿಕ ಸೇವಾವಕಾಶವನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

ಪಂಡಿತಪ್ರಕಾಂಡ ಶ್ರೀ ಭಾಲಚಂದ್ರ ಶಾಸ್ತ್ರಿಗಳು.
ಪ್ರಾ. ಜ. ಸಂ. ಪಾಠಶಾಲಾ, ಧಾರವಾಡ

—o—

ಸದ್ಗುರುಗಳ ಬಾಹ್ಯ ಮತ್ತು ಆಂತರಿಕ ಲಕ್ಷಣಗಳ ವಿವರಗಳಿಂದ ಪ್ರಾರಂಭವಾಗುವ ಶ್ರೀಯುತ, ಗಣೇಶ ಚಿದಂಬರ ದೀಕ್ಷಿತ ಇನಾಮದಾರರ, “ಚಿದಂಬರ ಪ್ರಕಾಶ” ಗ್ರಂಥವು ಹದಿನೆಂಟನೆಯ ಶತಮಾನದ ಮಧ್ಯದಲ್ಲಿ, ಕರ್ನಾಟಕದಲ್ಲಿ ಜನ್ಮವೆತ್ತಿ, ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಧರ್ಮಗ್ಲಾನಿಯಾದಾಗ, ನಾಡನ್ನು ಶ್ರೀಮಂತವನ್ನಾಗಿ ಮಾಡಿದ ಚಿದಂಬರ-ಮಹಾಸ್ವಾಮಿಗಳ ಅವತಾರದ ಪೂರ್ವಭಾಗವನ್ನು ಹೃದಯಂಗಮವಾಗಿ ಚಿತ್ರಿಸುವ ಒಂದು ಸುಗ್ರಂಥ. ಐತಿಹಾಸಿಕ ಮತ್ತು ಪೌರಾಣಿಕ ಹಿನ್ನಲೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡು ಚಿದಂಬರ ಮಹಾಸ್ವಾಮಿಗಳ ಬೋಧನೆಯನ್ನು ಚನ್ನಾಗಿ ಅಭ್ಯಾಸು ಮಾಡಿಕೊಂಡು, ಸಾಮಾನ್ಯರಿಗೂ ಸ್ವಾಮಿಗಳ ಅವತಾರ ಮತ್ತು ಉಪದೇಶವು ತಿಳಿಯುವಂತೆ, ಬರೆದ ಈ ಗ್ರಂಥವು ಭಕ್ತವೃಂದಕ್ಕೊಂದು ಸುಗ್ರಾಸ ಭೋಜನವಿದ್ದಂತೆ. ಇದರಲ್ಲಿ ಆರತಿ, ಸ್ತೋತ್ರ, ಭಜನ, ಮಂಗಲಾಷ್ಟಕಗಳಿವೆ. ಚಿದಂಬರ ಪ್ರಕಾಶದ ಕಿರಣಗಳಷ್ಟೇ ಈ ಭಾಗದಲ್ಲಿ ಮೂಡಹತ್ತಿವೆ. ಮುಂಬರುವ ಭಾಗಗಳಲ್ಲಿ, ಶ್ರೀ ಚಿದಂಬರ ಮಹಾಸ್ವಾಮಿಗಳ ಪೂರ್ಣ ಜೀವನ, ತತ್ವಜ್ಞಾನ, ಬೋಧನೆಗಳು ಬರಲಿವೆ. ಮರಾಠಿಯಲ್ಲಿ ವಿಪುಲವಾಗಿರುವ ಶ್ರೀ ಚಿದಂಬರ ಸಾಹಿತ್ಯವು ಕನ್ನಡದಲ್ಲಿ ಇನ್ನೂ ಬರಬೇಕಷ್ಟೆ! ಅಂತಹ ಒಂದು ಮಹತ್ಸಾಧನೆಯನ್ನು, ಶ್ರೀಮಾನ್ ಇನಾಮದಾರರು, ಇಲ್ಲಿ ಮಾಡಿದ್ದರಿಂದ ಭಕ್ತವೃಂದದವರು, ಅವರನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ !

ಗೋವಿಂದಮೂರ್ತಿ ದೇಸಾಯಿ
೭–೧೨–೭೬ ಬಿ. ಎ. ಆನರ್ಸ
ಬೆಳಗಾಂವ ಮ್ಯಾನೇಜರ, ಸ್ಟೇಟ ಬ್ಯಾಂಕ ಅಫ್ ಇಂಡಿಯಾ

ಶ್ರೀ ಚಿದಂಬರ ಮಹಾಸ್ವಾಮಿಗಳ ಬಗೆಗಿದ್ದ ವಿಪುಲ ಸಾಹಿತ್ಯವನ್ನೆಲ್ಲ ಆಕಲನ ಮಾಡಿ ಅರಗಿಸಿಕೊಂಡು, ಕನ್ನಡದ ಸದ್ಭಕ್ತರಿಗೆ, ಆ ಸದ್ಗುರುಗಳ ಸಮ್ಯಗ್ದರ್ಶನವಾಗಲೆಂದು, ತಿಳಿಯಾದ ಕನ್ನಡದಲ್ಲಿ ಎರಕಹೊಯ್ದಿದ್ದಾರೆ ಅವರ ವಂಶಜರೇ, ಆದ ಶ್ರೀ ಗಣೇಶ ಚಿದಂಬರ ಇನಾಮದಾರರು. ಇದು ಸ್ತುತ್ಯ; ಸಕಾಲಿಕ. ಪ್ರಸ್ತುತ ಭಾಗದಲ್ಲಿ ಶ್ರೀ ಚಿದಂಬರ ಸಾಹಿತ್ಯ ಅದೆಷ್ಟು ಬೃಹತ್ತಾಗಿದೆ ಎಂಬುದರ ಕಲ್ಪನೆ ಬರುವದು. ಚರಿತ್ರನಾಯಕರ ಅದರಂತೆ ಅವರ ಚರಿತ್ರ ಬರೆದ ಅನೇಕ ಭಕ್ತರ ಉಪಲಬ್ಧವಿರುವ ವಂಶಾವಳಿಯನ್ನೂ ಕೊಟ್ಟಿದ್ದಾರೆ. ಅನುಗ್ರಹ ವಸ್ತುಗಳ ಪರಿಚಯವನ್ನು ಮಾಡಿದ್ದಾರೆ ಇವೆಲ್ಲ ಸ್ಮೃತಿ ಪಥದಿಂದ ಮಸಕಾಗುವ ಮೊದಲು ಸ್ಥಿರೀಕೃತವಾದುದು ಶ್ರೇಯಸ್ಕರ. ಇನ್ನು ಮುಂದಿನ ಭಾಗಗಳಲ್ಲಿ ಈ ಮಹಾಪುರುಷರ, ಜೀವನ ಚರಿತ್ರ, ಲೀಲಾಮೃತ, ತತ್ತ್ವಜ್ಞಾನ, ಇತ್ಯಾದಿಗಳು ಪ್ರಕಟವಾಗುವವು. ಸದ್ಭಕ್ತರೂ ಅವನ್ನು ಹೃತ್ಪೂರ್ವಕ ಸ್ವಾಗತಿಸುವರೆಂದು ನಂಬಿದ್ದೇನೆ.

ಬೆಳಗಾಂವಿ. ಗೋವರ್ಧನಾಚಾರ್ಯ ಗಲಗಲಿ

೧೦-೧೨-೭೬ ಎಮ್. ಎ., ಬಿ. ಟಿ.

—o—

ಭಾರತವು ಪುಣ್ಯಭೂಮಿ. ಧರ್ಮದ ಬೆಳಕು ಚೆಲ್ಲುವರಿದ ಸುಂದರ ನಾಡು. ಸಾಧು ಸಂತರ ನೆಲವೀಡು. ಸತ್ಪುರುಷರ ತವರೂರು. ಕಾಲಕಾಲಕ್ಕೆ ಸತ್ಪುರುಷರು ಉದಯಿಸಿ ಗ್ಲಾನಿಯಾಗುತ್ತಿದ್ದ ಧರ್ಮವನ್ನು ಎತ್ತಿ ಹಿಡಿದಿದ್ದಾರೆ. ಬೀಳುತ್ತಿದ್ದ ಮಾನವರನ್ನು ಎತ್ತಿ ಹಿಡಿದಿರುವರು. ಯಾವ ದಿಕ್ಕಿಗೋ ಹೊರಳಿ ಹೋಗುತ್ತಿದ್ದ ಸಂಸ್ಕೃತಿಯನ್ನು ಭಾರತದ ಗಂಗೆಗೆ ತಿರುಗಿಸಿದ್ದಾರೆ. ಜನತೆಯ ಕಲ್ಯಾಣವನ್ನು ಮಾಡಿದ್ದಾರೆ. ಅಂಥವರಲ್ಲಿ ಚಿದಂಬರ ಸ್ವಾಮಿಗಳು ಅಗ್ರಗಣ್ಯರು.

ಆ ಮಹಾಸ್ವಾಮಿಗಳ ಸಾದ್ಯಂತವಾದ ಚರಿತ್ರೆಯು ಆಧುನಿಕ ಜನಾಂಗಕ್ಕೆ ಒಪ್ಪಿಗೆಯಾಗುವ ರೀತಿಯಲ್ಲಿ ಅಗತ್ಯವಿತ್ತು. ಅಂಥ ಒಂದು ಬೃಹತ್ ಚರಿತ್ರೆಯನ್ನು ಬರೆಯುವ ಸಂಕಲ್ಪವನ್ನು ಆ ವಂಶದವರೇ ಆದ ಶ್ರೀ. ಜಿ. ಸಿ.

ಇನಾಮದಾರರು ಮಾಡಿದ್ದು; ಅದರ ಪ್ರಥಮ ಭಾಗವು ಈಗ ಸಿದ್ಧವಾಗಿ ಹೊರಬರುತ್ತಿದೆ.

ಒಟ್ಟು ಈ ಗ್ರಂಥದಲ್ಲಿ ದ್ವಾದಶ ಕಿರಣಗಳ ಉದಯವಿದೆ. ಪ್ರಥಮ ಕಿರಣದಲ್ಲಿ ಸದ್ಗುರುವಿನ ಲಕ್ಷಣಗಳು ವಿವರವಾಗಿ ಬಂದಿದ್ದರೆ, ದ್ವಾದಶದಲ್ಲಿ ಶ್ರೀ ಚಿದಂಬರ ಜೀವನದ ತಿರುಳು ತೋರಿದೆ.

ಗ್ರಂಥದಲ್ಲಿ ಉಪಾಸನಾ ವಿಭಾಗವೂ ಸೇರಿಕೊಂಡಿದ್ದು ಉಪಾಸನೆ ಮಾಡ ಬೇಕೆನ್ನುವ ಸಾಧಕರಿಗೆ ಕೈದೀವಿಗೆಯಾಗಿದೆ.

ಇತಿಹಾಸಜ್ಞರ ಉದ್ಧರಣೆಗಳು ಷಡ್ಭಕ್ತರ ಪರಿಚಯಗಳು ಚರಿತ್ರೆಗೆ ಬೆನ್ನಲುಬಾಗಿ ನಿಲ್ಲಬಲ್ಲವು.

ಒಟ್ಟಿನಲ್ಲಿ ಶ್ರೀ ಇನಾಮದಾರರ ಪ್ರಯತ್ನವು ಸ್ತುತ್ಯರ್ಹವಾಗಿದ್ದು ಅವರಿಂದ ಮುಂದಿನ ಭಾಗಗಳೂ ತೀವ್ರದಲ್ಲಿ ಬೆಳಕಿಗೆ ಬರುವಂತಾಗಲೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

ತೇಜಸ್ವಿನಗರ
೨೭-೧೧-೭೭
ಚಂಪಾಷಷ್ಠಿ

ಎಚ್. ಜಿ. ಜೋಶಿ
ಬಿ. ಎ., ಎಮ್. ಇ. ಡಿ.
ನಿವೃತ್ತ ಪ್ರಿನ್ಸಿಪಾಲ, ಸರಕಾರೀ, ಗಂ. ಮು.
ಟ್ರೇ. ಕಾಲೇಜ, ಧಾರವಾಡ





ಶ್ರೀಮತ್ಪೂಜ್ಯ, ದಿ. ಚಿದಂಬರ ದೀಕ್ಷಿತರು. ಬಡಲಿ. ವಿದ್ಯಾದಾನ, ಅನ್ನದಾನ, ಅತಿಥಿ ಸತ್ಕಾರ, ತಪೋನುಷ್ಠಾನಗಳಿಂದ ಚಿದಂಬರ ಸಂಪ್ರದಾಯ ಪಾಲಿಸಿ, ಪುಣ್ಯದ ಫಲವನ್ನು ನೀಡಿ, ಮಾರ್ಗದರ್ಶನ ಮಾಡಿದ ಪೂಜ್ಯ ತೀರ್ಥರೂಪರಿಗೆ ಈ ಗ್ರಂಥ ಸಮರ್ಪಿತ.

ಪೂಜ್ಯರ ಕೊನೆಯ ಸಂದೇಶ–

"ಚಿದಂಬರಸೇವೆ ಕಲ್ಯಾಣಕಾರಕ; ಅದನ್ನು ಸದೈವ ಮಾಡಿರಿ".

* ಶ್ರೀ ಚಿದಂಬರೋ ವಿಜಯತೇ *



ಶ್ರೀಮಾನ್, ನಾನಾಸಾಹೇಬ, ಕುಲಕರ್ಣಿ

(ಕಮಡೊಳ್ಳಿ. ತಾ–ಕುಂದಗೋಳ)

ಇವರು ಶ್ರೀ ಚಿದಂಬರ ಪ್ರಕಾಶ ಭಾಗ ೧ ಈ ಗ್ರಂಥಮುದ್ರಣಕ್ಕೆ ೫೦೧ ರೂಪಾಯಿಗಳನ್ನು ಸಮರ್ಪಿಸಿದ್ದಾರೆ. ಇವರದೇ ಮಾತೃಭಿಕ್ಷೆ ಪ್ರಭು ಚಿದಂಬರನು ಅವರಿಗೆ ಕಲ್ಯಾಣ ಮಾಡಲೆಂದು ಪ್ರಾರ್ಥಿಸುವೆ.

ಶ್ರೀ ಚಿದಂಬರೋ ವಿಜಯತೇ

卐

असतो मा सद्गमय । तमसो मा
ज्योतिर्गमय । मृत्योर्मा अमृत गमय





ಚಿ. ಶ್ರೀಧರ                    ಚಿ. ವಿನಾಯಕ

ಇವರೀರ್ವರ ಉಪನಯನವು ಶ್ರೀ ಕ್ಷೇತ್ರವಾಡಿಯಲ್ಲಿ ಜರುಗಿದಾಗ್ಗೆ,

೧) ಶ್ರೀಮತೀ ನಂದಾ ರಾಮಚಂದ್ರ ತಿಮ್ಮಾಪೂರ

೨) ಶ್ರೀಮತೀ ಗಿರಿಜಾಬಾಯಿ ಮೃತ್ಯುಂಜಯ ಬಂಕಾಪೂರ,

ಇವರೀರ್ವರು, ತಮ್ಮ ಚಿರಂಜೀವಿಗಳ ಉಪನಯನದಲ್ಲಿ ಮಂಗಲ ಕಾಣಿಕೆಯೆಂದು, ಗ್ರಂಥ ಮುದ್ರಣಕ್ಕೆ ೫೨೬ ರೂ ಸಮರ್ಪಿಸಿದರು. ಚಿದಂಬರನು ಅವರಿಗೆ ಸಕಲ ಸೌಭಾಗ್ಯವನ್ನು ದಯಪಾಲಿಸಲೆಂದು ಪ್ರಾರ್ಥಿಸುವೆ.

ಶ್ರೀ





ಶ್ರೀ. ನಾರಾಯಣ ಪೂಜಾರ
ಚೊಳಚಗುಡ್ಡ (ಬೋರಿವಲಿ)
ಇವರು ಗ್ರಂಥಮುದ್ರಣಕ್ಕೆ
೨೦೧ ರೂ. ಸಮರ್ಪಿಸಿದ್ದಾರೆ.

ಶ್ರೀ. ಟಿ. ಸಿ. ಪಾಟೀಲ
ಎಲ್. ಎಲ್. ಬಿ. ಧಾರವಾಡ
ಇವರು ಗ್ರಂಥಮುದ್ರಣಕ್ಕೆ
೧೦೧ ರೂ. ಸಮರ್ಪಿಸಿದ್ದಾರೆ.

**श्री चिदंबरो विजयते ।**

## ಶ್ರೀ ಚಿದಂಬರಶರಣಾಷ್ಟಕಮ್

ಸದ್ಗುರುನಾಥಾ ತವಶರಣಂ । ಚಿನ್ಮಯಮೂರ್ತೆ ತವಶರಣಂ ॥
ಮಾರ್ತಂಡಾತ್ಮಜ ತವಶರಣಂ । ಲಕ್ಷ್ಮೀನಂದನ ತವಶರಣಂ ॥ ೧ ॥
ಶಿಷ್ಟರಕ್ಷಕಾ ತವಶರಣಂ । ದುಷ್ಟದಂಡಕಾ ತವಶರಣಂ ॥
ಕೃಷ್ಣಾವತಾರಾ ತವಶರಣಂ । ದೇವಪೂಜಿತಾ ತವಶರಣಂ ॥ ೨ ॥
ದತ್ತಾವತಾರಾ ತವಶರಣಂ । ದೀನದಯಾಲೋ ತವಶರಣಂ ॥
ಚಿದಾನಂದಾ ತವಶರಣಂ । ಪೂರ್ಣಬ್ರಹ್ಮಾ ತವಶರಣಂ ॥ ೩ ॥
ಕರುಣಾಸಿಂಧೋ ತವಶರಣಂ । ಸಚ್ಚಿದಾನಂದಾ ತವಶರಣಂ ॥
ಶಾಮಸುಂದರಾ ತವಶರಣಂ । ಪೂರ್ಣಮನೋರಥ ತವಶರಣಂ ॥೪॥
ಮುರಗೋಡವಾಸಾ ತವಶರಣಂ । ಕೆಂಗೆರಿವಾಸಾ ತವಶರಣಂ ॥
ಗುರುನವಪುರವರ ತವಶರಣಂ । ಬದರೀವಾಸಾ ತವಶರಣಂ ॥ ೫ ॥
ರಾಜಾರಾಮಾ ತವಶರಣಂ । ಶಿವಶಾಸ್ತ್ರಿವಂದಿತಾ ತವಶರಣಂ ॥
ಸಾಂಬಪೂಜಿತಾ ತವಶರಣಂ ।:ವಿಠಾಯಿವಂದಿತಾ ತವಶರಣಂ ॥ ೬ ॥
ಧರ್ಮಸ್ಥಾಪಕಾ ತವಶರಣಂ । ದೀನೋದ್ಧಾರಾ ತವಶರಣಂ ॥
ನಿತ್ಯನಿರಂಜನ ತವಶರಣಂ । ವಿಶ್ವರಕ್ಷಕಾ ತವಶರಣಂ ॥ ೭ ॥
ದಾರಿದ್ರ್ಯನಾಶಕಾ ತವಶರಣಂ । ಸಂತತಿದಾಯಕ: ತವಶರಣಂ ॥
ಚಿದಂಬರಾ ತವಶರಣಂ । ಭಕ್ತರಕ್ಷಕಾ ತವಶರಣಂ ॥ ೮ ॥
ಮಂಗಲಮೂರ್ತೇ ತವಶರಣಂ । ಮಂಗಲದಾಯಕ ತವಶರಣಂ ॥
ಮಂಗಲಕೀರ್ತೇ ತವಶರಣಂ । ಮಂಗಲಮಹಿಮಾ ತವಶರಣಂ ॥೯॥



ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥ ೧ ॥

ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ ।
ದ್ವಂದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್ ॥
ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಂ ।
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥ ೨ ॥

## ಶ್ರೀ ಚಿದಂಬರ ಉವಾಚ

ಮಾಝಾ ಥಾಕ ಮಾನೀ ತ್ರಿಭುವನೀ ಲೋಕ ।
ಯಮಕುಂಭ ಪಾಕ ಥಾಕ ಮಾಝಾ ॥ ೧ ॥
ಮಾಝಾ ಥಾಕ ಮಾನೀ ವ್ಯಾಘ್ರಸಿಂಹಸರ್ಪ ।
ತೀಹೀ ಲೋಕೀ ದರ್ಪ ಮಾಝಾ ಅಸೇ ॥ ೨ ॥
ಮಾಝಾ ಥಾಕ ಅಸೇ ಜಲಸ್ಥಳ ಅಗ್ನಿ ।
ಆಕಾಶ ಪವನೀ ಥಾಕ ಮಾಝಾ ॥ ೩ ॥
ಮಾಝಾ ಥಾಕ ಅಸೇ ರಾಕ್ಷಸ ದೇವಾಸೀ ।
ನಾಮ ಮ್ಹಣೇ ತ್ಯಾಸೀ ಉದ್ಧರೀತೋ ॥ ೪ ॥

## ಶ್ರೀ ಚಿದಂಬರ ಪ್ರಾರ್ಥನಾ

ಸದಾ ಎನ್ನ ಹೃದಯದಲ್ಲಿ ವಾಸಿಸೋ ಚಿದಂಬರಾ ।
ನಾಟ್ಯ-ಮೂರ್ತಿ ನಿನ್ನ ಪಾದ, ಭಕ್ತಿಯಿಂದ ಭಜಿಸುವೆ ॥ ಪ ॥

(೧)

ಧರ್ಮಗ್ಲಾನಿಯನ್ನು ಕಂಡು ಲಕ್ಷ್ಮಿಯುದರದಲ್ಲಿ ಜನಿಸಿ ।
ಭಕ್ತರನ್ನು ಬಿಡದೆ ಕಾಯ್ದಿ ಸತ್ಯ ಮಾರ್ಗ ತೋರುತ ॥ ೧ ॥ ಸದಾ....

(೨)

ಎಲ್ಲಿ ನಿನ್ನ ಪಾದವೋ ಅಲ್ಲಿ ನನ್ನ ಹಣೆಯು ಇರಲಿ ।
ಎಲ್ಲಿ ನಿನ್ನ ನಾಮಘೋಷ ಅಲ್ಲಿ ನನಗೆ ಸಂತಸ ॥ ೨ ॥ ಸದಾ....

(೩)

ಭವದತಾಪ ದೂರ ಮಾಡು ಭುವನಪಾಲ ಚಿನ್ಮಯಾ ।
ಕೈಯ ಪಿಡಿದು ನಡೆಸು ಎನ್ನ ಕರುಣಾನಿಧಿಯೆ,
ಶಂಕರಾ ॥ ೩ ॥ ಸದಾ....

ಕೃಪಾಸಮುದ್ರಂ ಸುಮುಖಂ ತ್ರಿನೇತ್ರಂ ।
ಜಟಾಧರಂ ಪಾರ್ವತಿವಾಮಭಾಗಂ ॥
ಸದಾಶಿವಂ ರುದ್ರಮನಂತರೂಪಂ ।
ಚಿದಂಬರೇಶಂ ಹೃದಿಭಾವಯಾಮಿ ॥

# ಶ್ರೀ ಚಿದಂಬರ ಪ್ರಕಾಶ, ಭಾಗ ೧

## [ಮೊದಲನೆಯ ಕಿರಣ]

## ಸದ್ಗುರುಗಳು

**ಸದ್ಗುರುಗಳ ಬಾಹ್ಯ ಮತ್ತು ಆಂತರಿಕ ಲಕ್ಷಣಗಳು.**
**ಶ್ರೀ ಚಿದಂಬರ ಮಹಾಸ್ವಾಮಿಗಳಿಗೆ "ಸದ್ಗುರು" ಏಕೆ ಅನ್ನಬೇಕು.**

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಃಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ॥
ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ ।
ದ್ವಂದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್ ॥
ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಂ ।
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥

ಈ ಜಗತ್ತಿನಲ್ಲಿ ಗುರುಗಳಿಗೆ ಇರುವ ಮಹತ್ತ್ವವು ಬೇರೆ ಇನ್ನಾವ ವ್ಯಕ್ತಿಗೂ ಇಲ್ಲವೆಂದು, ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಾದಿಗಳು ಸಾರಿ ಸಾರಿ ಹೇಳಿವೆ. ಸೃಷ್ಟಿ, ಸ್ಥಿತಿ, ಪ್ರಲಯಗಳಿಗೆ ಅಧಿಕಾರಿಗಳಾದ ಬ್ರಹ್ಮಾ, ವಿಷ್ಣು, ಮಹೇಶ್ವರರ ಯೋಗ್ಯತೆ ಗುರುಗಳಲ್ಲಿ ಇದೆ. ಸ್ಕಂದ ಪುರಾಣದ ಉತ್ತರಕಾಂಡದಲ್ಲಿ, ಶಿವ–ಪಾರ್ವತಿಯರ ಸಂವಾದರೂಪವಾದ "ಗುರುಗೀತೆ" ಯಲ್ಲಿ, ಗುರುಗಳಿಂತ ಹೆಚ್ಚಿನವರು ಯಾರೂ ಇಲ್ಲವೆಂದು ಹೇಳಿದೆ.

"ನ ಗುರೋರಧಿಕಂ ತತ್ತ್ವಂ ನ ಗುರೋರಧಿಕಂ ತಪಃ ।
ನ ಗುರೋರಧಿಕಂ ಜ್ಞಾನಂ ತಸ್ಮೈ ಶ್ರೀಗುರವೇ ನಮ: ॥

ಗುರುಗಳು ಸಾಕ್ಷಾತ್ ಪರಬ್ರಹ್ಮ ಸ್ವರೂಪರೆಂದು ಎಲ್ಲರೂ ಅವರ ಅಡಿಯಾಳಾಗಲೇ ಬೇಕು. ಅಲ್ಲಿಯವರೆಗೆ ಮಾನವನಿಗೆ ಮುಕುತಿ ದೊರೆಯಲಾರದು. "ಗುರುವಿನ ಗುಲಾಮನಾಗುವ ತನಕ, ದೊರೆಯದಣ್ಣಾ ಮುಕುತಿ" ಎಂದು ಪುರಂದರದಾಸರು ಸ್ಪಷ್ಟವಾಗಿ ಹೇಳಿದ್ದಾರೆ. ಇಂತಹ ಗುರುಗಳು ದೊರೆಯುವದು ದುರ್ಲಭ.

"ಗುರವೋ ಬಹವಃ ಸಂತಿ ಶಿಷ್ಯ ವಿತ್ತಾಪಹಾರಕಾಃ ।
ವಿರಲಾ ಗುರವೋ ಲೋಕೇ ಶಿಷ್ಯ ಚಿತ್ತಾಪಹಾರಕಾಃ ॥"

ಈ ಜಗತ್ತಿನಲ್ಲಿ ಒಂದಿಲ್ಲೊಂದು ಬಗೆಯಿಂದ ಶಿಷ್ಯರ ಧನವನ್ನು ಅಪಹರಣ ಮಾಡುವ (ವಿತ್ತಾಪಹಾರಕಾಃ) ಗುರುಗಳೇ ಈಗಿನ ಕಾಲದಲ್ಲಿ ಹೇರಳವಾಗಿ ದೊರಕುತ್ತಾರೆ. ಆದರೆ ಶಿಷ್ಯರ ಮನಸ್ಸಿನ ದುಃಖವನ್ನು ದೂರ ಮಾಡುವ (ಚಿತ್ತಾಪಹಾರಕಾಃ) ಗುರುಗಳು ಮಾತ್ರ ತೀರ ವಿರಳ.

## "ಗುರು" ಶಬ್ದದ ಅರ್ಥವೇನು

ಶ್ರೀ ಯಾಸ್ಕಾಚಾರ್ಯರು ನಿರುಕ್ತದಲ್ಲಿ, "ಸಗುರುಃ ಯಃ ಕ್ರಿಯಾಃ ಕೃತ್ವಾ ವೇದಮಸ್ಮೈ ಪ್ರಯಚ್ಛತಿ" ಎಂದು ಹೇಳಿದ್ದಾರೆ. ಉಪನಯನಾದಿ ಸಂಸ್ಕಾರಗಳನ್ನು ಮಾಡಿ ಶಿಷ್ಯನಿಗೆ ವೇದಾಧ್ಯಯನವನ್ನು ಮಾಡಿಸುವವನೇ ಗುರು. ಗುರು ಶಬ್ದದ ಅರ್ಥವು ಇದಕ್ಕೂ ಹೆಚ್ಚು ವ್ಯಾಪಕವಿದೆ. ಗುಕಾರವೆಂದರೆ ಅಜ್ಞಾನರೂಪವಾದ ಕತ್ತಲೆಯು; "ರು" ಕಾರವೆಂದರೆ ಜ್ಞಾನರೂಪವಾದ ಬೆಳಕು. ಆದ್ದರಿಂದ, ಅಜ್ಞಾನವನ್ನು ನಾಶ ಮಾಡಿ ಮುಕ್ತಿಯನ್ನು ಕೊಡುವವನೇ ನಿಜವಾದ ಗುರು. ಇಲ್ಲಿ ಗುರುಗೀತೆಯಲ್ಲಿಯ ಶ್ಲೋಕವನ್ನು ಪರಿಶೀಲಿಸಬಹುದು.

"ಗುಕಾರಸ್ತ್ವಂಧಕಾರಃ ಸ್ಯಾತ್ ರುಕಾರಸ್ತೇಜ ಉಚ್ಯತೇ ।
ಅಂಧಃಕಾರವಿನಾಶಿತ್ವಾತ್ ಗುರುರಿತ್ಯಭಿಧೀಯತೇ ॥"

ಮೊದಲನೆಯ ಅಕ್ಷರವಾದ "ಗು" ಕಾರವು ಮಾಯಾದಿಗುಣ ಭಾಸಕವು. ಎರಡನೆಯ ಅಕ್ಷರವಾದ "ರು" ಕಾರವು ಮಾಯಾ ಅಥವಾ ಅಜ್ಞಾನ ವಿಮೋಚಕವು. ವಿದ್ಯಾರ್ಥಿಗಳು ಗುರುಗಳಿಂದ ಶಿಕ್ಷಣವನ್ನು ಪಡೆದ ಮೇಲೆ,

"ಅಸತೋಮಾ ಸದ್ಗಮಯ । ತಮಸೋಮಾ ಜ್ಯೋತಿರ್ಗಮಯ ।
ಮೃತ್ಯೋರ್ಮಾ ಅಮೃತಂಗಮಯ"

"ಗುರುದೇವಾ, ನನ್ನನ್ನು ಅಸತ್ಯದಿಂದ ಸತ್ಯದೆಡೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ, ಮೃತ್ಯುವಿನಿಂದ ಅಮರತ್ವದ ಕಡೆಗೆ ಕರೆದೊಯ್ಯು" ಎಂದು ಬೇಡಿಕೊಳ್ಳುತ್ತಿದ್ದರು. ಅವಿನಾಶಿ, ತೇಜೋಮಯ, ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನ ಜ್ಞಾನ ಮಾಡಿ ಕೊಡುವವರೇ ನಿಜವಾದ ಗುರುಗಳು. ಅವರೇ ನಮ್ಮನ್ನು ಜನ್ಮ-ಮರಣ ಬಂಧನದಿಂದ ಮುಕ್ತರನ್ನಾಗಿ ಮಾಡುವರು.

## ವಿವಿಧ ವಿಷಯುಗಳನ್ನು ಕಲಿಸುವವರೂ ಗುರುಗಳು

ನಮಗೆ, ಸಂಸ್ಕೃತ, ಹಿಂದೀ, ಇಂಗ್ಲಿಷು, ಕನ್ನಡ, ಗಣಿತ, ಸಾಮಾನ್ಯ ಜ್ಞಾನ, ಇತಿಹಾಸು, ಭೂಗೋಲು ಮೊದಲಾದ ವಿವಿಧ ವಿಷಯುಗಳನ್ನು ಕಲಿಸುವವರೂ ಗುರುಗಳೇ ಸರಿ; ನಮಗೆ ಜನ್ಮ ಕೊಟ್ಟು ಲಾಲನೆಪಾಲನೆ ಮಾಡಿದ ತಾಯಿಯು ಕೂಡ ಗುರುವೇ ಅಹುದು: ಉಪನಯುನ ಸಮಾರಂಭ ದಲ್ಲಿ ಗಾಯತ್ರೀ ಮಂತ್ರೋಪದೇಶ ಮಾಡಿ, ನಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುವ ತಂದೆಯೂ ಕೂಡ ಗುರುವೇ; ಯಂತ್ರ, ತಂತ್ರ, ಮಂತ್ರ, ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿಸಿ, ನಮ್ಮನ್ನು ಹೊಟ್ಟೆ ತುಂಬಿಕೊಳ್ಳಲು ಸಮರ್ಥ ರನ್ನಾಗಿ ಮಾಡಲು ಕಲಿಸುವವರೂ ಗುರುಗಳೇ ಸರಿ; ನಾನಾ ಚಮತ್ಕಾರ ಗಳನ್ನು ಮಾಡಿ ಜನರನ್ನು ಮರಳುಗೊಳಿಸುವ ವಿದ್ಯೆಯನ್ನು ಕಲಿಸುವವನೂ ಗುರುವೇ ಸರಿ; ಹೆಚ್ಚೇನು ಒಂದಕ್ಕರವನ್ನು ಕಲಿಸಿದವನೂ ಗುರುವೇ. ಆದರೆ ಇವರಾರೂ ಸದ್ಗುರುಗಳಲ್ಲ: ಜನ್ಮ–ಮರಣ, ಸುಖ–ದುಃಖ, ಸತ್ಯ–ಅಸತ್ಯ ಮೊದಲಾದ ದ್ವಂದ್ವಗಳ ಚಕ್ರದಲ್ಲಿ ನಮ್ಮನ್ನು ಸಿಲುಕಿಸಿ, ಶಾಶ್ವತವಾದ ಸುಖದಿಂದ ಇವರು ನಮ್ಮನ್ನು ಬಹು ದೂರ ಇಡುವರು. ಹುಟ್ಟು–ಸಾವುಗಳ ಗುಟ್ಟನ್ನು ತಿಳಿಸಿ, ಪ್ರಪಂಚದ ಯಥಾರ್ಥ ಜ್ಞಾನವನ್ನು ಮಾಡಿ ಕೊಟ್ಟು, ನಮ್ಮನ್ನು ಸ್ವಾನಂದ ಸಾಮ್ರಾಜ್ಯದಲ್ಲಿ ನಲಿದಾಡುವಂತೆ ಮಾಡುವವನೇ ಸದ್ಗುರುವು. ಶ್ರೀ ರಾಮದಾಸರು ದಾಸಬೋಧದಲ್ಲಿ ಇದೇ ಮಾತನ್ನು ಹೇಳಿದ್ದಾರೆ.

**"जे करामता दाखविती । ते हि गुरु म्हणिजे ती ।।**
**परंतु सद्गुरु नव्हे ती मोक्षदाते ।।१।।**
**जे यातीचा जो व्यापार । शिकविती भरावया उदर ।**
**ते ही गुरु परी साचार । सद्गुरु नव्हें ती ।।२।।**
**आपली माता आणि पिता । ते ही गुरुचि तत्वता ।।**
**परी पैलपार पाववित। । तो सद्गुरु वेगळा ।।३।।**

ಶಿಷ್ಯನಿಗೆ ಇಂದ್ರಿಯ ದಮನವನ್ನು ಮಾಡಲು ಯಾವನು ಉಪದೇಶಿ ಸುವದಿಲ್ಲವೋ, ಯಾವನು ಶಮ, ದಮ, ನಿಗ್ರಹಾದಿಗಳನ್ನು ಉಪದೇಶಿಸುವ

ದಿಲ್ಲವೋ, ಅವನು ಸದ್ಗುರು ಅಲ್ಲ; ಸದ್ಗುರು ಮೋಹಾತೀತನಾಗಿರುತ್ತಾನೆ. ಧನ ಕನಕ ಐಶ್ವರ್ಯಾದಿಗಳ ಮೋಹವು, ಅವನಿಗೆ ಎಳ್ಳಷ್ಟೂ ಇರುವದಿಲ್ಲ; ಸ್ವಪ್ರತಿಷ್ಠೆಯ ಮೋಹವಂತೂ ಅವನ ಬಳಿಯಲ್ಲಿ ಕೂಡ ಸುಳಿದಾಡುವದಿಲ್ಲ. "ಕರತಲಭಿಕ್ಷಾ, ತರುತಲವಾಸಃ" ಎಂಬ ಉಕ್ತಿಯಂತೆ, ಭಿಕ್ಷಾನ್ನದಿಂದ ಸಂತುಷ್ಟರಾಗಿ, ಗಿಡದಡಿಯಲ್ಲಿ ವಿಶ್ರಾಂತಿ ಪಡೆದು, ಜೀವನದ ಯಾತ್ರೆಯನ್ನು ಸಮಾಧಾನದಿಂದ ಸಾಗಿಸಿ, ಶಿಷ್ಯರಿಗೆ ಪ್ರಪಂಚದ ಅಸಾರತೆಯನ್ನು ತೋರಿಸಿ ಕೊಟ್ಟು, ಅವರನ್ನು ಬಂಧನದಿಂದ ಮುಕ್ತ ಮಾಡುವದೇ ಸದ್ಗುರುವಿನ ಪರಮ ಧ್ಯೇಯವಾಗಿರುವದು. ಇಂತಹ ಸದ್ಗುರುಗಳನ್ನು ಹುಡುಕಿಕೊಂಡು, ಅವರಿಗೆ ಶರಣು ಹೋಗಿ ಮಾನವನು ತನ್ನ ಜೀವನದ ಸಾರ್ಥಕತೆಯನ್ನು ಮಾಡಿ ಕೊಳ್ಳಬೇಕು.

## ಗುರುಗಳ ಅನುಗ್ರಹವಿಲ್ಲದೆ ಯಾರಿಗೂ ಮೋಕ್ಷವಿಲ್ಲ

ಸಕಲೈಶ್ವರ್ಯ ಸಂಪನ್ನನಾದ, ಸಾರ್ವಭೌಮ ಜನಕಮಹಾರಾಜನು, ಚತುರ್ವೇದ ಪಂಡಿತರಾದ, ಸಕಲಾಗಮಜ್ಞರಾದ, ದಯಾಸಮುದ್ರರಾದ ಯೋಗೀಶ್ವರ ಯಾಜ್ಞವಲ್ಕ್ಯ ಮಹರ್ಷಿಗಳನ್ನು ಗುರುಗಳನ್ನಾಗಿ ಮಾಡಿ ಕೊಂಡು, ಧರ್ಮಾರ್ಥಕಾಮಮೋಕ್ಷಗಳೆಂಬ, ಚತುರ್ವಿಧ ಪುರುಷಾರ್ಥ ಗಳನ್ನು ಸಾಧಿಸಿಕೊಂಡನು. ಇಂದ್ರಾದಿ ದೇವತೆಗಳೂ ಕೂಡ, ಬೃಹಸ್ಪತಿ ಯನ್ನು ಗುರುಗಳನ್ನಾಗಿ ಮಾಡಿಕೊಂಡು ಸಕಲ ಸಂಪತ್ತನ್ನು ಪಡೆದುಕೊಂಡರು; ಪರಬ್ರಹ್ಮ ಸ್ವರೂಪನಾದ ಶ್ರೀರಾಮಚಂದ್ರನೂ ಕೂಡ, ವಶಿಷ್ಠ ಋಷಿ ಗಳನ್ನು ಗುರುಗಳನ್ನಾಗಿ ಮಾಡಿಕೊಂಡನು: ಭಗವಾನ್ ಶ್ರೀಕೃಷ್ಣನೂ ಕೂಡ ಸಾಂದೀಪನಿ ಮುನಿಗಳನ್ನು ಗುರುಗಳನ್ನಾಗಿ ಮಾಡಿಕೊಂಡನು; ಹೀಗೆ ದೇವತೆ ಗಳೂ, ರಾಜಾಧಿರಾಜರೂ, ಮುನಿಗಳೂ, ಋಷಿಗಳೂ, ರಾಮಕೃಷ್ಣಾದಿ ಅವತಾರಿಗಳೂ ಕೂಡ ಗುರುಗಳನ್ನು ಮಾಡಿಕೊಂಡರೆಂದ ಮೇಲೆ, ಮಾನವ ನಿಗೆ ಗುರುವಿನ ಅವಶ್ಯಕತೆ ಎಷ್ಟಿದೆ ಎಂಬುದನ್ನು ಬೇರೆ ಹೇಳಬೇಕೆ? "ಗುರು ವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ" ಎಂದು ಪುರಂದರ ದಾಸರು ಹೇಳಿದ್ದಾರೆ. "ದೇವ ಮುನಿದೊಡೆ ಗುರು ಕಾಯ್ವನು: ಗುರು ಮುನಿ ದರೆ ಯಾರು ಕಾಯ್ವರು?" "ಶಿವೇ ರುಷ್ಟೇ ಗುರುಸ್ತ್ರಾತಾ, ಗುರೌ ರುಷ್ಟೇ ನ ಕಶ್ಚನ" ಎಂಬ ಉಕ್ತಿಗಳಿಂದ ಗುರುವಿನ ಮಹತ್ತ್ವವು ದೇವಾಧಿದೇವತೆಗಳಿಗಿಂತ

ಹೆಚ್ಚು ಎಂಬುವದು ವ್ಯಕ್ತವಾಗುತ್ತದೆ. ಏಕನಾಥರ ವಚನವನ್ನೂ ಕೂಡ ನೋಡಿರಿ.

श्रीगुरुच्या पायीं ठेवी तू विश्वास ।
दासाचा तू दास होइ त्याचा ॥१॥
राम हा परब्रह्म वशिष्ठा शरण ।
कृष्णें सांदीपनी गुरु केला ॥२॥
वाल्मीकी ऋषी नारदें उपदेशीं ।
त्रिभुवनी धन्य वाल्या झाल्या ॥३॥
एका जनार्दनीं गुरुमज भेटला ।
मोकळा दाविला मार्ग तेणें ॥४॥

ಸಂತರತ್ನ ರಾಜಾರಾಮನೂ ಕೂಡ ತನ್ನ ಅಭಂಗಗಳಲ್ಲಿ ಸದ್ಗುರುವಿನ ಮಹತಿಯನ್ನು, ಹೀಗೆ ವರ್ಣಿಸಿದ್ದಾನೆ.

"यावीण (गुरुविण) जे कोणी साधनकरिती ।
त्यासी नसे गती कल्पांतीं पैं ॥१॥
जपतपतीर्थ करिता अनुष्ठान ।
स्वर्ग सुखजाण प्राप्तत्यासी ॥२॥
पुण्य हो सरता पुनः जन्म त्यासी ।
लक्ष हे चौर्यांशीं न चुके भोग ॥३॥
दास म्हणे पुण्य पापाची राहाटी ।
नसे सुख गोष्टी सद्गुरु विण ॥४॥

वरद अभंग २३५ राजाराम

## ಸದ್ಗುರುಗಳಿಗೆ ಸಮಾನರು ಯಾರೂ ಇಲ್ಲ

"ದೃಷ್ಟಾಂತೋ ನೈವ ದೃಷ್ಟಃ ತ್ರಿಭುವನಜಠರೇ
ಸದ್ಗುರೋರ್ಜ್ಞಾನದಾತುಃ ।
ಸ್ಪರ್ಶಶ್ಚೇತ್ ತತ್ರ ಕಲ್ಪ್ಯಃ ಸ ನಯತಿ ಯದಹೋ
ಸ್ವರ್ಣತಾಮಶ್ಮಸಾರವ್ ॥
ನ ಸ್ಪರ್ಶತ್ವಂ ತಥಾಪಿ ಶ್ರಿತಚರಣಯುಗೇ ಸದ್ಗುರುಃ ಸ್ವೀಯಶಿಷ್ಯೇ ।
ಸ್ವೀಯಂ ಸಾಮ್ಯಂ ವಿಧತ್ತೇ ಭವತಿ ನಿರುಪಮಸ್ತೇನವಾಽಲೌಕಿಕೋಽಪಿ ॥
(ಶ್ರೀ ಶಂಕರ ಭಗವತ್ಪಾದರ ಶತಶ್ಲೋಕಿಯಿಂದ)

ಮೂಲೋಕದಲ್ಲಿ ಯಾವ ವಸ್ತುವನ್ನೂ ಸದ್ಗುರುವಿಗೆ ಹೋಲಿಸುವದು ಸಾಧ್ಯವಿಲ್ಲ. ಕೆಲವು ವಸ್ತುಗಳಿಗೆ ಬೇರೊಂದು ವಸ್ತುವಿನ ಉಪಮಾನವನ್ನು ಕೊಡಲು ಸಾಧ್ಯವೇ ಇಲ್ಲ.

"ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ।
ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ॥'

ಆಕಾಶವು ಆಕಾಶದಷ್ಟೇ ವಿಶಾಲವಾದದ್ದು: ಸಮುದ್ರವು ಸಮುದ್ರದಷ್ಟೇ ಆಳವಾದುದು; ರಾಮರಾವಣರಲ್ಲಿಯ ಯುದ್ಧವು, ರಾಮರಾವಣರ ಯುದ್ಧದಷ್ಟೇ ಭಯಂಕರವೆಂದು ಹೇಳಬೇಕಾಗುವದು. ಇವುಗಳಿಗೆ ಬೇರೆ ಉಪಮಾನಗಳನ್ನು ಕೊಡಲು ಸಾಧ್ಯವಿಲ್ಲ. ಅದರಂತೆ, ಸದ್ಗುರುವು ಉಪಮಾತೀತನು ಎಂದೇ ಹೇಳಬೇಕಾಗುವದು.

## ಸದ್ಗುರುಗಳನ್ನು ಸ್ಪರ್ಶಮಣಿಗೆ ಹೋಲಿಸುವದು ಸರಿಯಾಗಲಾರದು

ಸ್ಪರ್ಶಮಣಿಯು ಕಬ್ಬಿಣದ ತುಂಡನ್ನು ಮುಟ್ಟಿದರೆ, ಆ ಕಬ್ಬಿಣದ ತುಂಡು ಬಂಗಾರವಾಗುವದು. ಆದ್ದರಿಂದ ಸದ್ಗುರುಗಳನ್ನು ಸ್ಪರ್ಶಮಣಿಗೆ ಏಕೆ ಹೋಲಿಸಬಾರದು ? ಅದು ಸದ್ಗುರುಗಳಿಗಿಂತ ಹೆಚ್ಚಿನದೇಕಲ್ಲ ? ಎಂದು ಪ್ರಶ್ನಿಸಬಹುದು. ಈ ಹೋಲಿಕೆಯು ಸರಿಯಾಗಲಾರದು. ಯಾಕಂದರೆ ಸ್ಪರ್ಶಮಣಿಯು ಕಬ್ಬಿಣದ ತುಂಡನ್ನು ಮುಟ್ಟಿದರೆ, ಅದು ಬಂಗಾರವಾಗುವದು ನಿಜ. ಬಂಗಾರ ರೂಪ ತಾಳಿದ ಈ ಕಬ್ಬಿಣದ ತುಂಡು, ಇನ್ನೊಂದು ಕಬ್ಬಿಣದ ತುಂಡನ್ನು ಮುಟ್ಟಿದರೆ, ಅದು ಬಂಗಾರವಾಗಲಾರದು. ಸ್ಪರ್ಶಮಣಿಯ ಯೋಗ್ಯತೆಯು ಅದರಲ್ಲಿ ಬರುವದಿಲ್ಲ. ಆದರೆ ಸದ್ಗುರುವು ಹಾಗಲ್ಲ. ಸದ್ಗು

ರುವು ಶಿಷ್ಯನಲ್ಲಿ ತನ್ನ ಸಂಪೂರ್ಣ ಯೋಗ್ಯತೆಯನ್ನೇ ಇಡಬಲ್ಲ. ಸದ್ಗುರುವಿನ ಅನುಗ್ರಹ ಪಡೆದ ಶಿಷ್ಯನು ತಾನೂ ಸದ್ಗುರುವಾಗಬಲ್ಲನಲ್ಲದೇ, ಇನ್ನೊಬ್ಬ ಶಿಷ್ಯನನ್ನೂ ಸದ್ಗುರುವನ್ನಾಗಿ ಮಾಡಬಲ್ಲ. ಇಂತಹ ಶಕ್ತಿಯು ಸ್ಪರ್ಶಮಣಿಯಲ್ಲಿ ಇಲ್ಲ, ಆದ್ದರಿಂದ ಈ ಹೋಲಿಕೆಯು ಸಮಂಜಸವಾಗಲಾರದು.

## ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳ ಉಪಮಾನವೂ ಸರಿಯಲ್ಲ.

ಕಾಮಧೇನುವು ನಮ್ಮ ಬಯಕೆಗಳನ್ನು ಪೂರ್ಣ ಮಾಡುವದು. ಕಲ್ಪವೃಕ್ಷವು ನಾವು ಬೇಡಿದ್ದನ್ನು ಕೊಡುವದು. ಚಿಂತಾಮಣಿಯು ನಮ್ಮ ಚಿಂತೆಯನ್ನು ದೂರ ಮಾಡಬಲ್ಲದು. ಆದ್ದರಿಂದ ಸದ್ಗುರುಗಳನ್ನು ಈ ವಸ್ತುಗಳಿಗೆ ಏಕೆ ಹೋಲಿಸಬಾರದು? ಎಂದು ಕೆಲವರು ಕೇಳಬಹುದು. ಆದರೆ ಈ ಹೋಲಿಕೆಯು ಸರಿಯಲ್ಲ. ಕಾಮಧೇನು ಮತ್ತು ಕಲ್ಪವೃಕ್ಷಗಳು ನಾವು ಬೇಡದ ಹೊರ್ತು ಏನನ್ನೂ ಕೊಡಲಾರವು ಅವುಗಳ ಎದುರಿಗೆ ನಾವು ಸುಮ್ಮನೆ ಕುಳಿತರೆ, ಅವು ನಮಗೆ ಏನನ್ನೂ ಕೊಡಲಾರವು; ಆದರೆ ಸದ್ಗುರುಗಳು ಹಾಗಲ್ಲ. ಅವರು ದಯಾಘನರು; ಕೃಪಾಸಾಗರರು. ನಾವು ಬೇಡಿಕೊಳ್ಳದಿದ್ದರೂ ನಮ್ಮ ದುಃಖಗಳನ್ನು ದೂರ ಮಾಡುವರು. ಕಲ್ಪವೃಕ್ಷಕ್ಕೆ ಅಥವಾ ಕಾಮಧೇನುವಿಗೆ ಬೇಡಿಕೊಳ್ಳುವಂತೆ, ದೈನ್ಯದಿಂದ ಸದ್ಗುರುಗಳನ್ನು ಬೇಡಿಕೊಳ್ಳುವ ಅವಶ್ಯಕತೆ ಇಲ್ಲ. ಶಿಷ್ಯನ ದುಃಖವನ್ನು ಅರಿತು, ಅವನ ಪಾಪರಾಶಿಯನ್ನೇ ಸುಟ್ಟು, ಅನುಗ್ರಹ ಮಾಡುವ ಶಕ್ತಿಯು ಸದ್ಗುರುವಿನಲ್ಲಿ ಅಲ್ಲದೇ ಬೇರೆ ಇನ್ನಾರಲ್ಲಿಯೂ ಇಲ್ಲ. ಬೇಡದಿದ್ದರೂ ಶಿಷ್ಯನಿಗೆ ಅನುಗ್ರಹ ಮಾಡುವ ಸದ್ಗುರುಗಳು, ಬೇಡಿದ ಮೇಲೆ ಪ್ರತಿಫಲವನ್ನು ಕೊಡುವ, ಕಾಮಧೇನು, ಕಲ್ಪವೃಕ್ಷಗಳಿಗಿಂತ ಶ್ರೇಷ್ಠ. ಚಿಂತಾಮಣಿಯು ನಮ್ಮ ಚಿಂತೆಯನ್ನು ಮಾತ್ರ ದೂರ ಮಾಡಬಲ್ಲದು. ಅದರಿಂದ ನಮ್ಮ ಪ್ರಾಪಂಚಿಕ ದುಃಖಗಳು ದೂರವಾಗಬಹುದು. ಆದರೆ ಅದು ಸದ್ಗುರುಗಳಂತೆ, ಆತ್ಮಜ್ಞಾನ ಮಾಡಿ ಕೊಡಲಾರದು. ಈ ಸಾಮರ್ಥ್ಯ ಸದ್ಗುರುವಿನಲ್ಲಿ ಮಾತ್ರ ಇದೆ.

## ಪ್ರಚಂಡ ಶಕ್ತಿಯುಳ್ಳ ಸೂರ್ಯನೂ ಕೂಡ ಸದ್ಗುರುವಿಗೆ ಸರಿಯಾಗಲಾರನು.

ಸೂರ್ಯನು ತನ್ನ ಪ್ರಕಾಶದಿಂದ ಜಗತ್ತಿನ ಕತ್ತಲೆಯನ್ನು ನಾಶ

ಮಾಡಬಲ್ಲನು: ಸಕಲ ಚರಾಚರ ವಸ್ತುಗಳಿಗೆ ಸೂರ್ಯ ಪೋಷಕನು; ಜಗತ್ತಿಗೆ ಅವನು ಕಣ್ಣಿದ್ದಂತೆ. "ಸೂರ್ಯ ಆತ್ಮಾ ಜಗತಃ ತಸ್ಥುಷಶ್ಚ ತಚ್ಚಕ್ಷುರ್ದೇವಹೀತಂ" ಎಂದು ಶ್ರುತಿ ಇದೆ. ಇಂತಹ ಪ್ರಚಂಡ ಶಕ್ತಿಯುಳ್ಳ ಸೂರ್ಯನಿಗೆ ಸದ್ಗುರುಗಳನ್ನು ಏಕೆ ಹೋಲಿಸಬಾರದು? ಎಂದು ಕೆಲವರ ಪ್ರಶ್ನೆ. ಸೂರ್ಯೋದಯದಿಂದ ಕತ್ತಲೆ ನಾಶವಾಗುವದು. ಆದರೆ ಸೂರ್ಯಾಸ್ತವಾದ ಕೂಡಲೇ ಪುನಃ ಕತ್ತಲೆಯು ಮುಸುಕುವದು. ಕತ್ತಲೆಯು ಶಾಶ್ವತವಾಗಿ ನಾಶವಾಗುವದಿಲ್ಲ. ಆದರೆ ಸದ್ಗುರುಗಳು ದಯಪಾಲಿಸಿದ ಜ್ಞಾನೋದಯದಿಂದ ನಮ್ಮ ಅಜ್ಞಾನ ಕತ್ತಲೆಯು ಶಾಶ್ವತವಾಗಿ ನಾಶವಾಗುವದು. ಅಜ್ಞಾನವು ಪುನಃ ನಮ್ಮನ್ನು ಆವರಿಸಲಾರದು. ಆದ್ದರಿಂದ ಗುರುಗಳು ಸೂರ್ಯನಿಗಿಂತ ಹೆಚ್ಚು. ಸೂರ್ಯ ಪ್ರಕಾಶಕ್ಕೂ ಕೂಡ ಒಂದು ಮಿತಿ ಇದೆ. ಒಂದಿಲ್ಲೊಂದು ದಿನ ಸೂರ್ಯನೂ ನಾಶವಾಗುವನು. ಆದರೆ ಸದ್ಗುರು ನೀಡುವ ಜ್ಞಾನ ಮಾತ್ರ ಅವಿನಾಶಿ.

## ಸದ್ಗುರುಗಳನ್ನು ಆಳವಾದ, ವಿಶಾಲವಾದ ಸಾಗರಕ್ಕೆ ಏಕೆ ಹೋಲಿಸಬಾರದು?

ಸಮುದ್ರ, ಗಂಭೀರ ಮತ್ತು ಪ್ರಶಾಂತವಾಗಿದೆ; ಸಾಕಷ್ಟು ಆಳವೂ ಇದೆ. ಆದರೂ ಸಮುದ್ರ ಸದ್ಗುರುಗಳಿಗೆ ಸರಿಯಾಗಲಾರದು. ಸಮುದ್ರವೆತ್ತ? ಸದ್ಗುರುಗಳೆತ್ತ? ಸಮುದ್ರದ ನೀರು ಉಪ್ಪು; ಕುಡಿಯಲು ಬಾರದು. ಸಮುದ್ರದ ಹೃದಯ ಆಳವಾಗಿದ್ದರೂ ಅದರಲ್ಲಿ ಭೀಕರ ಜಲಚರ ಪ್ರಾಣಿಗಳಿವೆ. ಯಾವವೇ ಪ್ರಾಣಿಯನ್ನು ಸಲೀಲವಾಗಿ ನುಂಗಿ ಬಿಡುವ ದೊಡ್ಡ ದೊಡ್ಡ ಮೀನುಗಳೂ, ಹಡಗಗಳನ್ನೂ ಕೂಡ ಹೊಡೆದು ಛಿದ್ರವಿಚ್ಛಿದ್ರವಾಗುವಂತೆ ಮಾಡಿ ಮುಳುಗಿಸಿ ಬಿಡುವ ಸಾಮರ್ಥ್ಯವುಳ್ಳ ತಿಮಿಂಗಿಲುಗಳೂ, ಭಯಂಕರ ಸರ್ಪಾದಿಗಳೂ, ನೀರಾನೆಗಳೂ, ಸಮುದ್ರದ ಹೃದಯದಲ್ಲಿ ವಾಸವಾಗಿರುತ್ತವೆ. ಆದರೆ ಸದ್ಗುರುವಿನ ಹೃದಯ ಅಖಂಡ ಕರುಣಾರಸದಿಂದ ತುಂಬಿರುತ್ತದೆ. ಅವನ ಹೃದಯದಲ್ಲಿ ಎಳ್ಳಷ್ಟೂ ಭೀಕರತೆ ಇಲ್ಲ. ಅವನು ಯಾರಿಗೂ ಹಿಂಸೆಯನ್ನು ಕೊಡುವದಿಲ್ಲ. ದುಷ್ಟರನ್ನು ಕೂಡ ಸನ್ಮಾರ್ಗಕ್ಕೆ ಹಚ್ಚುವ ಸಾಮರ್ಥ್ಯ ಅವನಲ್ಲಿ ಇರುವದು. ಸಾಗರದ ಹೃದಯಕ್ಕೂ, ಸದ್ಗುರು

ವಿನ ಹೃದಯಕ್ಕೂ ಅಜಗಜಾಂತರವಿದೆ. ಅದ್ದರಿಂದ ಈ ಉಪಮಾನವೂ ಕೂಡ ಸರಿಯಲ್ಲ.

## ಸದ್ಗುರುಗಳನ್ನು ಸರ್ವವ್ಯಾಪಿಯಾದ ಅನಂತ ಆಕಾಶಕ್ಕೆ ಏಕೆ ಹೋಲಿಸಬಾರದು?

ಆಕಾಶವು ಅತ್ಯಂತ ವಿಶಾಲವಾಗಿದೆ; ವಿಶ್ವವ್ಯಾಪಿಯಾಗಿದೆ. ವಿಶಾಲ ಹೃದಯಿಗಳಾದ ಸದ್ಗುರುಗಳನ್ನು ಆಕಾಶಕ್ಕೆ ಏಕೆ ಹೋಲಿಸಬಾರದೆಂದು ಕೆಲವರ ಆಶಂಕೆ. ಆದರೆ ಆಕಾಶಕ್ಕೆ ಏಕರೂಪತೆ ಇಲ್ಲ; ಅದು ಘಟಾಕಾಶ, ಮಠಾಕಾಶ ಮೊದಲಾದ ರೂಪಗಳನ್ನು ತಾಳುವದು. ಪಂಚ ಮಹಾಭೂತಗಳಲ್ಲಿ ಒಂದಾದ ಆಕಾಶಕ್ಕೂ ಕೂಡ ನಾಶವಿದ್ದೇ ಇದೆ. ಆದರೆ ಸದ್ಗುರುಗಳು ದಯಪಾಲಿಸುವ ಜ್ಞಾನಕ್ಕೆ ಮಾತ್ರ (ಆತ್ಮಜ್ಞಾನ–ಬ್ರಹ್ಮಜ್ಞಾನ) ಎಂದಿಗೂ ನಾಶವಿಲ್ಲ. ಇದರಂತೆ, ಪೃಥ್ವೀ, ಆಪ, (ನೀರು) ತೇಜ, ವಾಯುಗಳಾದರೂ ಸದ್ಗುರುಗಳ ಯೋಗ್ಯತೆಯನ್ನು ಪಡೆಯಲಾರವು. ಇವೆಲ್ಲವೂ ಅಪೂರ್ಣ; ಅನಿತ್ಯ; ಸದ್ಗುರು ಪರಿಪೂರ್ಣ, ನಿತ್ಯ.

"ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ ॥"

"ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕದಾಚನ" ಇತ್ಯಾದಿ ಶ್ರುತಿ ವಾಕ್ಯಗಳು, ಪರಬ್ರಹ್ಮ ಸ್ವರೂಪಿಯಾದ ಸದ್ಗುರುವಿನ ಪರಿಪೂರ್ಣತೆಯನ್ನೂ, ಅವಿನಾಶಿತ್ವವನ್ನೂ ಬೋಧಿಸುತ್ತವೆ.

ಅದ್ದರಿಂದ ಸದ್ಗುರುವಿಗೆ ಯಾವ ದೃಷ್ಟಾಂತವನ್ನೂ ಕೊಡಲು ಸಾಧ್ಯವಿಲ್ಲವೆಂದು ಶ್ರೀಮತ್ ಶಂಕರ ಭಗವತ್ಪಾದರು, "ದೃಷ್ಟಾಂತೋ ನೈವ ದೃಷ್ಟಃ ತ್ರಿಭುವನಜಠರೆ ಸದ್ಗುರೋರ್ಜ್ಞಾನದಾತುಃ" ಎಂದು ಪ್ರತಿಪಾದಿಸಿದ್ದಾರೆ.

ಇಲ್ಲಿಯವರೆಗೆ, ಮೇಲೆ ನಿರ್ದೇಶಿಸಿದ ಉಪಮಾನಗಳು ಸರಿಯಾಗದಿದ್ದರೂ, ಅವುಗಳಲ್ಲಿರುವ ವಿವಿಧ ಗುಣಗಳು ಸದ್ಗುರುವಿನಲ್ಲಿ ಅಡಕವಾಗಿವೆ. ಕಾಮಧೇನು ಕಲ್ಪವೃಕ್ಷಗಳಲ್ಲಿರುವ ಸಕಲ ಇಚ್ಛೆಗಳನ್ನು ಪೂರ್ಣ ಮಾಡುವ ಶಕ್ತಿಯೂ, ಚಿಂತಾಮಣಿಯಲ್ಲಿರುವ ಚಿಂತಿತಾರ್ಥವನ್ನು ಕೊಡುವ ಶಕ್ತಿಯೂ, ಸ್ಪರ್ಶಮಣಿಯಲ್ಲಿರುವ ಸ್ಪರ್ಶೋದ್ಧಾರ ಶಕ್ತಿಯೂ, ಮಹಾಸಾಗರದ ಪ್ರಶಾಂತತೆ, ಗಾಂಭೀರ್ಯ, ಆಳ ಮೊದಲಾದವುಗಳೂ, ಆಕಾಶದ ವೈಶಾಲ್ಯ

ತೆಯೂ, ಪೃಥ್ವಿಯಲ್ಲಿರುವ ಸಹನಶೀಲತೆಯೂ, ಸೂರ್ಯನ ಪ್ರಚಂಡ ಶಕ್ತಿಯೂ, ಮೇರು ಪರ್ವತದ ಮಹಾನತೆಯೂ, ಎಲ್ಲವೂ ಸದ್ಗುರುವಿನಲ್ಲಿ ಇರುತ್ತವೆ. ಸದ್ಗುರುವಿನಲ್ಲಿರುವ ಅವಿನಾಶತೆಯು ಮಾತ್ರ ಈ ಯಾವ ವಸ್ತುವಿನಲ್ಲಿಯೂ ಇಲ್ಲ. ವೇದಗಳೂ ಕೂಡ ಆತನ ಆಳವನ್ನು ತಿಳಿಯದೆ, "ನೇತಿ, ನೇತಿ," ಇದುವೂ ಅಲ್ಲ; ಅದುವೂ ಅಲ್ಲ; ಎಂದು ನಿಷೇಧಾತ್ಮಕವಾಗಿ ವರ್ಣಿಸಿವೆ.

"ಸಮುದ್ರವನ್ನೇ ಮಸಿಯ ಪಾತ್ರೆಯನ್ನು ಮಾಡಿಕೊಂಡು, ಕಲ್ಪವೃಕ್ಷದ ಟೊಂಗೆಯನ್ನು ಲೆಕ್ಕಣಿಕೆಯನ್ನಾಗಿ ಮಾಡಿಕೊಂಡು, ಸಕಲ ಭೂಮಂಡಲವನ್ನೇ ಹಾಳಿಯನ್ನಾಗಿ ಮಾಡಿಕೊಂಡು, ಸಾಕ್ಷಾತ್ ಶಾರದಾಂಬೆಯೇ ನಿನ್ನ ಗುಣಗಳನ್ನು ವರ್ಣಿಸಲು ಉಪಕ್ರಮಿಸಿದರೂ, ನಿನ್ನ ಗುಣಗಾನವು ಎಂದೂ ಮುಗಿಯಲಾರದು" ಎಂದು ಸುಭಾಷಿತಕಾರರು ಹೇಳಿದ್ದಾರೆ.

"ಆಸಿತಗಿರಿನಿಭಂ ಸ್ಯಾತ್ ಕಜ್ಜಲಂ ಸಿಂಧುಪಾತ್ರಂ ।
ಸುರತರುವರಶಾಖಾ ಲೇಖನೀ ಪತ್ರಮುರ್ವೀ ॥
ಲಿಖತಿ ಯದಿ ಗೃಹೀತ್ವಾ ಶಾರದಾ ವಕ್ತುಕಾಮಾ ।
ತದಪಿ ತವ ಗುಣಾನಾಮೀಶ ಪಾರಂ ನ ಯಾತಿ ]"

ಹಾಗಾದರೆ ಸದ್ಗುರುಗಳನ್ನು ವರ್ಣಿಸುವು ಸಾಧ್ಯವಿಲ್ಲವೆಂದ ಮೇಲೆ, ಅವರನ್ನು ತಿಳಿಯುವ ಬಗೆ ಹೇಗೆ? ತಿಳಿದುಕೊಳ್ಳಲು ಸಾಧ್ಯವಿಲ್ಲವೋ ಹೇಗೆ? ಎಂದು ಸಂಶಯಕ್ಕೊಳಗಾಗಬಾರದು. ಸದ್ಗುರುಗಳನ್ನು ತಿಳಿದುಕೊಳ್ಳಲು ಸಾಧ್ಯವಿದೆ. ಅದು ಹೇಗೆ ಎಂಬುದನ್ನು ನೋಡೋಣ.

## ಸದ್ಗುರುಗಳ ಲಕ್ಷಣಗಳು ಯಾವವು?
## ಅವರನ್ನು ತಿಳಿಯುವ ಬಗೆ ಹೇಗೆ?

ಭಾರತದ ಪಂಚರಾತ್ರ ಪ್ರಕರಣದಲ್ಲಿ "ವಿಷ್ಣುಧ್ಯಾನಂ" ಎಂಬ ಅಧ್ಯಾಯದಲ್ಲಿ ಸದ್ಗುರುವಿನ ಲಕ್ಷಣಗಳನ್ನು ಈ ರೀತಿ ವರ್ಣಿಸಲಾಗಿದೆ. "ಬಾಹ್ಯ" ಮತ್ತು "ಆಂತರಿಕ" ಎಂಬ ಎರಡು ಪ್ರಕಾರದ ಲಕ್ಷಣಗಳಿಂದ ಸದ್ಗುರುಗಳನ್ನು ಕಂಡು ಹಿಡಿಯಬೇಕೆಂದು ಹೇಳಿದೆ. ಬಾಹ್ಯ ಲಕ್ಷಣಗಳು ಅವನ ಅವಯವಗಳನ್ನು (ದೇಹ) ವರ್ಣಿಸುತ್ತವೆ. ಆಂತರಿಕ ಲಕ್ಷಣಗಳು ಅವನ ಹೃದಯ, ಮನಸ್ಸು, ಬುದ್ಧಿ ಮೊದಲಾದವುಗಳನ್ನು ವರ್ಣಿಸುತ್ತವೆ.

## ಬಾಹ್ಯ ಲಕ್ಷಣಗಳು

ಬಾಹ್ಯ ಲಕ್ಷಣಗಳು ೩೨ ಇವೆ.

"ಪಂಚ ದೀರ್ಘಃ ಪಂಚ ಸೂಕ್ಷ್ಮಃ ಸಪ್ತ ರಕ್ತಃ ಷಡುನ್ನತಃ ।
ತ್ರಿಪೃಥುರ್ಲಘುಗಂಭೀರೋ ದ್ವಾತ್ರಿಂಶತ್ ಲಕ್ಷಣಾನಿ ತು ।"

**೫ ಅವಯುವಗಳು ದೀರ್ಘವಾಗಿರಬೇಕು**—(೧) ನಾಸಾ–ಮೂಗು, (೨) ಹನು-ಗದ್ದ, (೩) ನೇತ್ರ–ಕಂಣುಗಳು, (೪) ಜಾನು–ಮೊಣ ಕಾಲು. (೫) ಭುಜ–ಹೆಗಲು.

**೫ ಪಂಚಸೂಕ್ಷ್ಮ**

ಐದು ಅವಯುವಗಳು ಸೂಕ್ಷ್ಮವಾಗಿರಬೇಕು. ತ್ವಕ್, (ಚರ್ಮ) ೨ ಕೇಶ, (ಕೂದಲು) (೩) ಅಂಗುಲ್ಯ, ಕೈಬೆರಳುಗಳು, (೪) ಪರ್ವಗಳು, (ಕೈಬೆರಳುಗಳ ಗಣ್ಣುಗಳು,) (೫) ದಂತಾಃ ಹಲ್ಲುಗಳು.

**೭ ಸಪ್ತರಕ್ತಃ (ಏಳು ಅವಯುವಗಳು ಕೆಂಪು ಇರಬೇಕು)**

(೧) ಜಿಹ್ವಾ–ನಾಲಗೆ, (೨) ತಾಲುಃ–ಅಂಗಳು, (೩) ಪಾಣಿಃ–ಕೈಗಳು, (೪) ಪಾದಾಃ–ಕಾಲುಗಳು, (೫) ನಖಾಃ- ಉಗುರು, (೬) ನೇತ್ರ–ಕಂಣುಗಳು, (೭) ಅಧರೋಷ್ಠ–ಕೆಳದುಟಿ.

**೬ ಷಡುನ್ನತಃ (ಆರು ಅವಯುವಗಳು ಎತ್ತರವಾಗಿರಬೇಕು)**

(೧) ಕಕ್ಷಾ–ಬಗಲು, (೨) ಕುಕ್ಷಿ–ಹೊಟ್ಟೆ, (೩) ವಕ್ಷಸ್–ಎದೆ, (೪) ಲಲಾಟ-ಹಣೆ, (೫) ಘ್ರಾಣ–ಮೂಗು, (೬) ಸ್ಕಂದ–ಹೆಗಲು.

**೩ ತ್ರಿಪೃಥುಃ (ಮೂರು ಅವಯುವಗಳು ವಿಶಾಲವಾಗಿರಬೇಕು)**

(೧) ಲಲಾಟ–ಹಣೆ, (೨) ಕಟಿ–ಟೊಂಕ, (೩) ವಕ್ಷಸ್–ಎದೆ.

**೩ ತ್ರಿಲಘುಃ (ಮೂರು ಅವಯುವಗಳು ಗಿಡ್ಡವಾಗಿರಬೇಕು)**

(೧) ಪ್ರಜನನಂ–ಜನನೇಂದ್ರಿಯ, (೨) ಗ್ರೀವಾ–ಕುತ್ತಿಗೆ, (೩) ಜಂಘಾ–ತೊಡೆಗಳು.

**೩ ತ್ರಿಗಂಭೀರ (ಮೂರು ಅವಯುವಗಳು ಆಳವಾಗಿರಬೇಕು)**

(೧) ಕರತಲ–ಅಂಗೈ, (೨) ಹೃದಯ–ಎದೆ, (೩) ನಾಭಿಃ–ಹೊಕ್ಕಳು.

ಈ ರೀತಿಯಾಗಿ, ಮೇಲೆ ವಿವರಿಸಿದ ೩೨ ಬಾಹ್ಯ ಲಕ್ಷಣಗಳಿಂದ ಸದ್ಗುರುವಿನ ದೇಹವು ಶೋಭಿಸುತ್ತಿರಬೇಕು. ಸರ್ವಾಂಗಸೌಂದರ್ಯ ಪಡೆಯು

ವದೂ ಕೂಡ ಪರಮಾತ್ಮನ ಅನುಗ್ರಹವೆಂದೇ ತಿಳಿಯಬೇಕು. ಭಾರತೀಯ ಧರ್ಮದ ವಿಜಯಪತಾಕೆಯನ್ನು, ವಿಶ್ವದಲ್ಲಿಯೇ ಉನ್ನತವಾಗಿ ಹಾರಾಡುವಂತೆ ಮಾಡಿದ ವೇದಾಂತ ಕೇಸರಿ, ಶ್ರೀ ಸ್ವಾಮಿ ವಿವೇಕಾನಂದರ ದೇಹವು ಎಷ್ಟು ಸುಂದರವಾಗಿತ್ತು ! ಜ್ಞಾನದೇವ, ತುಕಾರಾಮ, ಬಸವೇಶ್ವರ, ಪುರಂದರ ದಾಸರು, ಮಾಣಿಕ ಪ್ರಭುಗಳು, ದತ್ತಾತ್ರೇಯ, ರಾಮ–ಕೃಷ್ಣಾದಿಗಳು, ಶ್ರೀ ಚಿದಂಬರ ಮಹಾಸ್ವಾಮಿಗಳು, ರಾಜಾರಾಮ ಮೊದಲಾದವರು ಸುಂದರ ರಾಗಿದ್ದರು. ಇಂತಹ ಸುಂದರವಾದ ಅವಯವಗಳನ್ನು ಪಡೆದವರಲ್ಲಿ ಯಾವ ಯಾವ ಯೋಗ್ಯತೆ ಇರುವದೆಂಬುದನ್ನು ಶ್ರೀಮಚ್ಚರಿತ್ರಕಾರ ಸಖಾರಾಮ ತ್ರ್ಯಂಬಕ ಗರ್ದೆಯವರು, ಈ ರೀತಿಯಾಗಿ ವಿವರಿಸಿದ್ದಾರೆ.

ಪಂಚದೀರ್ಘ ಅವಯವಗಳಿದ್ದವರು, ಅಷ್ಟದಿಕ್ಪಾಲರಿಗೆ ಸಮಾನರಾಗಿರುತ್ತಾರೆ.

| | | |
|---|---|---|
| ಪಂಚಸೂಕ್ಷ್ಮ | ,, | ದೀರ್ಘಾಯುಷಿಗಳಾಗಿರುತ್ತಾರೆ. |
| ಸಪ್ತರಕ್ತ | ,, | ಐಶ್ವರ್ಯವಂತರಿರುತ್ತಾರೆ. |
| ಷಡುನ್ನತ | ,, | ಸರ್ವ ಶಾಸ್ತ್ರ ಬಲ್ಲವರು ಇರುತ್ತಾರೆ. |
| ತ್ರಿಪೃಥು | ,, | ನಿತ್ಯಮಂಗಲ, ನಿತ್ಯ ಶ್ರೀಯುಳ್ಳವರು. |
| ತ್ರಿಲಘು | ,, | ಪವಿತ್ರರೂ, ಪ್ರಾಮಾಣಿಕರೂ. ದಕ್ಷರೂ ಇರುತ್ತಾರೆ. |
| ತ್ರಿಗಂಭೀರ | ,, | ಧೀರೋದಾತ್ತ ಸ್ವಭಾವದವರು ಇರುತ್ತಾರೆ. |

ಸಾಧಕರು ಸದ್ಗುರುಗಳ ಇಂತಹ ಸಗುಣ ಸುಂದರ ಮೂರ್ತಿಯ ಧ್ಯಾನವನ್ನು ಮಾಡಬೇಕು. ಇವೆಲ್ಲ ದೈಹಿಕ ಲಕ್ಷಣಗಳು. ಆದರೆ ಇವುಗಳಿಗೇ ಸಂಪೂರ್ಣ ಪ್ರಾಧಾನ್ಯವಿಲ್ಲ. ಕೇವಲ ಸರ್ವಾಂಗ ಸುಂದರವಾದ ಒಂದು ವ್ಯಕ್ತಿಗೆ, ಸದ್ಗುರು ಎನ್ನುವದು ಸಮಂಜಸವಲ್ಲ. ಸದ್ಗುರುವಿನ ದೇಹವು ಎಷ್ಟು ಸುಂದರವಾಗಿರಬೇಕೋ ಅದಕ್ಕೂ ಹೆಚ್ಚು ಅವನ ಹೃದಯ, ಮನಸ್ಸು ಸುಂದರ ವಾಗಿರಬೇಕು; ಪರಿಶುದ್ಧವಾಗಿರಬೇಕು; ಸುಪ್ರಸನ್ನವಾಗಿರಬೇಕು. ಇಂತಹ ೧೨ ಆಂತರಿಕ (ಹೃದಯಕ್ಕೆ ಮತ್ತು ಮನಸ್ಸಿಗೆ ಸಂಬಂಧಿಸಿದ) ಲಕ್ಷಣಗಳು ಸದ್ಗುರುವಿನಲ್ಲಿರಬೇಕು. ತನ್ನ ಶಿಷ್ಯರನ್ನು ೧೨ ರೀತಿಯಿಂದ ಉದ್ಧಾರ ಮಾಡುವ ಶಕ್ತಿಯು ಸದ್ಗುರುವಿನಲ್ಲಿ ಇರುತ್ತದೆ. ಆ ಆ ಶಕ್ತಿಗನುಗುಣವಾಗಿ ೧೨ ಪ್ರಕಾರ ದಿಂದ ಶಿಷ್ಯರನ್ನು ಉದ್ಧಾರ ಮಾಡುವ ಶಕ್ತಿಯುಳ್ಳ ಗುರುಗಳು ಇರುತ್ತಾರೆ.

ಅವರು ಯಾರು? ಅವರ ಆಂತರಿಕ ಲಕ್ಷಣಗಳು ಯಾವವು, ಎಂಬುವದನ್ನು ನೋಡುವಾ.

**ಧಾತುರ್ವಾದಿ ವಿವೇಕ ಚಂದನಗುರುಃ**
**ಸ್ಪರ್ಶಸ್ತಥಾಽನುಗ್ರಹಃ ।**
**ಕೂರ್ಮಃ ಕ್ರೌಂಚ ವಿಹಂಗದರ್ಪಣಗುರುಃ**
**ಛಾಯಾನಿಧಿರ್ನಾದಧೀಃ ॥**
**ಚಂದ್ರದ್ಯೋತರವಿದ್ಯುತಸ್ತ್ವಯಿ ಸದಾ**
**ಎತೇಽರ್ಕಸಂಖ್ಯಾ ಗುಣಾಃ ।**
**ಸಂತಿ ಜ್ಞಾನಮಯೇ ಚಿದಂಬರಗುರೌ ತಸ್ಮಾದಹಂ**
**ತ್ವಾಂ ಭಜೇ ॥"**
**"ಶ್ರೀಮಚ್ಚರಿತ್ರ"**

## (೧) ಧಾತುರ್ವಾದಿ ಗುರುಃ

ತನ್ನ ಶಿಷ್ಯರಿಂದ ಹಗಲಿರುಳು ಸೇವೆಯನ್ನು ಅಪೇಕ್ಷಿಸಿ, ಅವರಿಂದ ತೀರ್ಥಯಾತ್ರಾ ಜಪ-ತಪಾದಿಗಳನ್ನು ಮಾಡಿಸಿ, ಗಂಧದ ಕೊರಡಿನಂತೆ ದೇಹ ವನ್ನು ಸವಿಸಿ ಕೊನೆಗೆ ಆತ್ಮಜ್ಞಾನವನ್ನು ಮಾಡಿ ಕೊಡುವವರು, ಧಾತು ರ್ವಾದಿ ಗುರುಗಳು. (ಧಾತಾ–ಬ್ರಹ್ಮಾ; ವಾದೀ–ವಿವರಿಸುವವನು. ಬ್ರಹ್ಮ ಜ್ಞಾನವನ್ನು ಪ್ರಾಪ್ತ ಮಾಡಿ ಕೊಡುವವರು,) ಇಂಥವರು ಮೊದಲನೆಯ ಪ್ರಕಾರದ ಗುರುಗಳು.

## (೨) ವಿವೇಕ ಗುರುಗಳು

ಶಿಷ್ಯನಿಗೆ ವಿವೇಕ ಬುದ್ಧಿಯನ್ನು ಕೊಟ್ಟು ಆತನ ಕಲ್ಯಾಣ ಮಾಡುವವರು. ಸತ್ಯ–ಅಸತ್ಯ, ನ್ಯಾಯ–ಅನ್ಯಾಯ, ಧರ್ಮ–ಅಧರ್ಮ, ಸುಖ–ದುಃಖ, ಬಂಧನ–ಮುಕ್ತಿ ಮುಂತಾದ ದ್ವಂದ್ವಗಳ ನಿಜವಾದ ಸ್ವರೂಪ ತಿಳಿಸಿ ಕೊಟ್ಟು, ಸರಿಯಾದದ್ದನ್ನು ಗ್ರಹಣ ಮಾಡಿ, ಸರಿಯಾದುದಲ್ಲವನ್ನು ಬಿಟ್ಟು ಬಿಡುವ ಶಕ್ತಿಯನ್ನು ಸದ್ಗುರುಗಳು ತಮ್ಮ ಶಿಷ್ಯನಿಗೆ ದಯಪಾಲಿಸುತ್ತಾರೆ. ಹಂಸಪಕ್ಷಿಯು ಹಾಲು ಮತ್ತು ನೀರಿನ ಮಿಶ್ರಣದಿಂದ ಹಾಲನ್ನಷ್ಟೇ ಸ್ವೀಕ ರಿಸಿ, ನೀರನ್ನು ಬಿಟ್ಟುಬಿಡುತ್ತದೆ. ಅಂತಹ ವಿಲಕ್ಷಣ ಶಕ್ತಿಯು ಹಂಸದ ಚುಂಚುವಿನಲ್ಲಿ ಇರುವದು. ಜಲತರಂಗ ಬುದ್ಬುದಗಳಂತೆ, (ನೀರಮೇಲಿನ

ಗುಳ್ಳಿಯಂತೆ) ಅಸ್ಥಿರವಾದ ಈ ಪ್ರಪಂಚದ ತಿರುಳನ್ನು ತಿಳಿಸಿ, ಸ್ಥಿರವಾದ ಆತ್ಮಜ್ಞಾನವನ್ನು ಮಾಡಿ ಕೊಡುವವರು ವಿವೇಕ ಗುರುಗಳು ಅಥವಾ ಹಂಸ ಗುರುಗಳು, ಇವರು ಎರಡನೆಯ ಪ್ರಕಾರದ ಗುರುಗಳು.

### (೩) ಚಂದನ ಗುರುಗಳು

ಗಂಧದ ಮರವು, ತನ್ನ ಸುವಾಸನೆಯಿಂದ ಸುತ್ತುಮುತ್ತಲಿನ ಪ್ರಾಣಿಗಳನ್ನು ಆಕರ್ಷಿಸಿ, ಆಲ್ಹಾದವನ್ನು ಕೊಡುವಂತೆ, ತಮ್ಮ ಶಿಷ್ಯರನ್ನು ತಪೋಬಲದಿಂದ ಆಕರ್ಷಿಸಿ, ಅವರಿಗೆ ಶಾಶ್ವತವಾದ ಆನಂದವನ್ನು ಕೊಡುವವರು, ಚಂದನ ಗುರುಗಳು. ಇವರು ಮೂರನೆಯ ಪ್ರಕಾರದವರು.

### (೪) ಸ್ಪರ್ಶ ಗುರುಗಳು

ಸ್ಪರ್ಶಮಣಿಯು ಕಬ್ಬಿಣದ ತುಂಡನ್ನು ತನ್ನ ಸ್ಪರ್ಶದಿಂದ ಬಂಗಾರದ್ದನ್ನಾಗಿ ಮಾಡುತ್ತದೆ. ಅದರಂತೆ, ಸದ್ಗುರುಗಳು. ತಮ್ಮ ಸ್ಪರ್ಶದಿಂದ ಶಿಷ್ಯರಲ್ಲಿದ್ದ ಅಜ್ಞಾನವನ್ನು ದೂರ ಮಾಡುವರು. ಸದ್ಗುರುಗಳ ವರದ ಹಸ್ತವು ತನ್ನ ಸ್ಪರ್ಶದಿಂದ. ಶಿಷ್ಯನ ಪಾಪರಾಶಿಯನ್ನು ಸುಟ್ಟು, ಆತ್ಮಜ್ಞಾನ ಮಾಡಿ ಕೊಡಬಲ್ಲದು. ವಿದ್ಯುಚ್ಛಕ್ತಿನಂತೆ, ಸದ್ಗುರುಗಳ ಸ್ಪರ್ಶ ಶಿಷ್ಯನಲ್ಲಿ ರೋಮಾಂಚನವನ್ನು ಉಂಟು ಮಾಡುತ್ತದೆ. ಅಂತೆಯೇ ಸದ್ಗುರುಗಳ ಪಾದಗಳನ್ನು ಪ್ರತ್ಯಕ್ಷ ಸ್ಪರ್ಶ ಮಾಡಿ ನಮಸ್ಕಾರ ಮಾಡುವ ರೂಢಿಯು ಈಗಲೂ ಇದೆ. "ಗುರುಗಳೇ ನಮ್ಮ ಹುಡುಗನ ತಲೆಯ ಮೇಲೆ ಕೈ–ಇಟ್ಟು ಆಶೀರ್ವಾದ ಮಾಡಿರಿ; ನಿಮ್ಮ ಪಾದ ಧೂಳಿಯಿಂದ ನನ್ನ ಮನೆಯನ್ನು ಪವಿತ್ರ ಮಾಡಿರಿ" ಎಂದು ಭಕ್ತರು ಬೇಡಿಕೊಳ್ಳುವಲ್ಲಿ ಔಚಿತ್ಯವಿದೆ, ಸಾರ್ಥಕತೆ ಇದೆ. ಕೇವಲ ಸ್ಪರ್ಶದಿಂದ ಎಷ್ಟೋ ರೋಗಗಳನ್ನು ನಿವಾರಣೆ ಮಾಡುವ ಸಾಮರ್ಥ್ಯವು ಸದ್ಗುರುಗಳಲ್ಲಿ ಇರುತ್ತದೆ. ತಾಯಿ–ಮಗು, ಸತಿ–ಪತಿ, ಭಕ್ತ–ಸದ್ಗುರು ಮೊದಲಾದವರಲ್ಲಿ ಪರಸ್ಪರ ಸ್ಪರ್ಶದಿಂದ ಅವರ್ಣನೀಯವಾದ ಆನಂದವು ಲಭಿಸುವದೆಂಬುದನ್ನು ಕಣ್ಣಾರೆ ಕಾಣುತ್ತೇವೆ. ಈ ರೀತಿ ಸ್ಪರ್ಶದಿಂದ ಉದ್ಧಾರ ಮಾಡುವವರು ಸ್ಪರ್ಶ ಗುರುಗಳು, ಇವರು ನಾಲ್ಕನೆಯ ಪ್ರಕಾರದವರು.

### (೫) ಅನುಗ್ರಹ ಗುರುಗಳು

ಸದ್ಗುರುಗಳ ಹೃದಯವು ಕೃಪೆಯ ಸಾಗರ. ಶಿಷ್ಯನ ಕಲ್ಯಾಣಕ್ಕಾಗಿ ಅವರ ಹೃದಯವು ಸದೈವ ಹಾತೊರೆಯುತ್ತದೆ. ಶಿಷ್ಯನು ಅಪರಾಧ ಬಗೆ

ದರೂ ಕೂಡ, ಅವನಿಗೆ ಪ್ರಾಯಶ್ಚಿತ್ತವಾದೊಡನೆ, ಅವನ ಅಪರಾಧಗಳನ್ನು ಕ್ಷಮಿಸಿ, ಅನುಗ್ರಹಿಸುತ್ತಾರೆ. ಸಾಧು-ಸಂತರು, ದೀನದಲಿತರ ದೋಷಗಳನ್ನು ಕ್ಷಮಿಸಿ, ಅವರನ್ನು ಸನ್ಮಾರ್ಗಕ್ಕೆ ಹಚ್ಚಿ ಅನುಗ್ರಹಿಸಿದ್ದಾರೆ. ಇಂಥವರು ಅನುಗ್ರಹ ಗುರುಗಳು, ಇವರು ಐದನೆಯ ಪ್ರಕಾರದ ಗುರುಗಳು.

## (೬) ಕೂರ್ಮ ಗುರುಗಳು

ಕೂರ್ಮವು (ಆವೆಯು) ತನ್ನ ಮರಿಗಳನ್ನು ಪ್ರೇಮಪೂರ್ಣ ದೃಷ್ಟಿಯಿಂದ ನೋಡಿದ ಕೂಡಲೇ, ಅವುಗಳಿಗೆ (ಮರಿಗಳಿಗೆ) ಹೊಟ್ಟೆ ತುಂಬುತ್ತದಂತೆ. ಆವೆಯು ತನ್ನ ಮರಿಗಳಿಗೆ ಆಹಾರವನ್ನು ಹೇಗೆ ಕೊಡುವದೆಂಬುದು ವೈಜ್ಞಾನಿಕರಿಗೂ ಕೂಡ ಇನ್ನೂ ತಿಳಿದು ಬಂದಿಲ್ಲ. ಅದರ ನೋಟದಲ್ಲಿಯೇ ಒಂದು ವಿಶೇಷ ಸಾಮರ್ಥ್ಯವಿರುವದು. ಕೃಪಾಪೂರ್ಣ ದೃಷ್ಟಿಯಿಂದ ಸದ್ಗುರುಗಳು ಶಿಷ್ಯನನ್ನು ನೋಡಿದರೆ ಸಾಕು; ಅವನ (ಶಿಷ್ಯನ) ಕಲ್ಯಾಣವಾಗುವದು. ದೃಷ್ಟಿಯಲ್ಲಿ ಎರಡು ಪ್ರಕಾರಗಳಿವೆ.

(೧) ಸುವರ್ಣದೃಷ್ಟಿ—ಉತ್ತಮ ಫಲವನ್ನು ಕೊಡುವದು.

(೨) ಕಾಕದೃಷ್ಟಿ—ಕೆಟ್ಟ ಫಲವನ್ನು ಕೊಡುವದು.

ದುಷ್ಟ ಜನರ ಕಾಕದೃಷ್ಟಿಯಿಂದ ಅನೇಕ ದುಷ್ಟ ಪರಿಣಾಮಗಳಾಗುವವು. ಅಂತಹ ದೃಷ್ಟಿಯಿಂದ ಸುಂದರವಾದ ಮಂದಿರದ ಗೋಡೆಯಲ್ಲಿ ಬಿರುಕು ಬೀಳಬಹುದು; ಕಾಕದೃಷ್ಟಿಯು ನಾವು ಉಣ್ಣುವ ಆಹಾರವನ್ನು ಕೂಡ ದೂಷಿಸಬಹುದು; ಇದು ದುಷ್ಟರ ದೃಷ್ಟಿಯ ಪರಿಣಾಮ. ಸಜ್ಜನರ ಸುವರ್ಣ ದೃಷ್ಟಿಯು ಸತ್‌ಫಲವನ್ನು ಕೊಡುವದು. ಮಾತೆಯ ವಾತ್ಸಲ್ಯ ಪೂರಿತ ದೃಷ್ಟಿಯಿಂದ, ಮಗುವಿಗೆ ಸಮಾಧಾನ; ರಾಜನ ಕೃಪಾದೃಷ್ಟಿಯಿಂದ ಪ್ರಜೆಗಳ ಕಲ್ಯಾಣ; ದೇವರ ಕೃಪಾದೃಷ್ಟಿಯಿಂದ ಭಕ್ತನ ಕಲ್ಯಾಣವಾಗುವದು; ಅದರಂತೆ ಗುರುಗಳ ಅನುಗ್ರಹ ದೃಷ್ಟಿಯಿಂದ ಶಿಷ್ಯನ ಕಲ್ಯಾಣವಾಗುವದು. ಹೀಗೆ ಕೃಪಾದೃಷ್ಟಿಯಿಂದ ಶಿಷ್ಯನ ಉದ್ಧಾರ ಮಾಡುವವರು ಕೂರ್ಮ ಗುರುಗಳು. ಇವರು ಆರನೆಯ ಪ್ರಕಾರದ ಗುರುಗಳು.

## (೭) ಕ್ರೌಂಚ ಗುರುಗಳು

ಕ್ರೌಂಚಪಕ್ಷಿಯು ಸಮುದ್ರ ತೀರದಲ್ಲಿ ತನ್ನ ಮರಿಗಳನ್ನು ಬಿಟ್ಟು ಆಹಾರ ಶೋಧನೆಗಾಗಿ ದೂರ ಸಂಚರಿಸುವದು. ತನ್ನ ಮರಿಗಳ ನೆನಪಾದ

ಕೂಡಲೇ, ಆಕಾಶದ ಕಡೆಗೆ ಮುಖ ಮಾಡಿ ಕೂಗಿತೆಂದರೆ ದೂರದಲ್ಲಿದ್ದ ಮರಿಗಳಿಗೆ ಹೊಟ್ಟೆ ತುಂಬಿ ಸಮಾಧಾನವಾಗುತ್ತದೆ. ಶಿಷ್ಯರು ಎಷ್ಟೇ ದೂರ ವಿದ್ದರೂ ಕೂಡ, ಸ್ಮರಣ ಮಾತ್ರದಿಂದಲೇ ಸದ್ಗುರುಗಳು ಅವರ ಕಲ್ಯಾಣ ಮಾಡಬಲ್ಲರು. ಇಂಥವರು ಕ್ರೌಂಚ ಗುರುಗಳು; ಇವರು ಏಳನೆಯ ಪ್ರಕಾರದ ಗುರುಗಳು.

## (೮) ದರ್ಪಣ ಗುರುಗಳು

ದರ್ಪಣ ಎಂದರೆ ಕನ್ನಡಿ. ಮುಖಕ್ಕೆ ಕನ್ನಡಿ ಹಿಡಿದರೆ, ನಮ್ಮ ನಿಜರೂಪವು ನಮಗೆ ಕಾಣಿಸುವದು. ಸದ್ಗುರುಗಳು ಜ್ಞಾನರೂಪವಾದ ಕನ್ನಡಿಯನ್ನು ಶಿಷ್ಯನ ಅಜ್ಞಾನವೆಂಬ ಮುಖಕ್ಕೆ ಹಿಡಿದೊಡೆ, ಅವನಿಗೆ ಯಥಾರ್ಥ ಜ್ಞಾನವಾಗುವದು. ಈ ಜ್ಞಾನರೂಪ ಕನ್ನಡಿಯು ಆತ್ಮಜ್ಞಾನ ಮಾಡಿ ಕೊಡಲು ಸಹಾಯಕವಾಗುತ್ತದೆ. ಈ ರೀತಿ ಶಿಷ್ಯನ ಅಜ್ಞಾನ ಕತ್ತಲೆಯನ್ನು ನಾಶ ಮಾಡಿ, ಜ್ಞಾನಪ್ರಕಾಶದ ಕಡೆಗೆ ಸದ್ಗುರುಗಳು ಶಿಷ್ಯನನ್ನು ಕರೆದೊಯ್ಯುವರು. ಇದರಿಂದ ಮುಂದೆ ಪ್ರಪಂಚ ಬಂಧನದಿಂದ ಮುಕ್ತಿಯು ಸಿಗುವದು. ಈ ರೀತಿ ಶಿಷ್ಯನ ಉದ್ಧಾರ ಮಾಡುವವರು ದರ್ಪಣ ಗುರುಗಳು. ಇವರು ಎಂಟನೆಯ ಪ್ರಕಾರದ ಗುರುಗಳು.

## (೯) ಛಾಯಾನಿಧಿ ಗುರುಗಳು

"ಛಾಯಾ" ಎಂಬ ಒಂದು ಬಗೆಯ ವಿಲಕ್ಷಣ ಪಕ್ಷಿ ಇರುತ್ತದೆ. ಇದು ತನ್ನ ಆಯುಷ್ಯದ ಬಹು ಭಾಗವನ್ನು ಆಕಾಶದಲ್ಲಿಯೇ ಕಳೆಯುತ್ತದೆ. ಕ್ವಚಿತ್ತಾಗಿ ಧರೆಗೆ ಇಳಿಯುವದು.. ಯಾವನ ಮೇಲೆ ಈ ಪಕ್ಷಿಯ ನೆರಳು ಬೀಳುವದೋ ಅವನು ಸಕಲ ರಾಜೈಶ್ವರ್ಯವನ್ನು ಭೋಗಿಸುವನಂತೆ. ಇದರಂತೆ, ಸದ್ಗುರುಗಳ ನೆರಳು ಯಾರ ಮೇಲೆ ಬೀಳುವದೋ ಅವರ ಕಲ್ಯಾಣವಾಗುವವು. ಸದ್ಗುರುಗಳ ನೆರಳಿನಲ್ಲಿಯೂ ಕೂಡ ಒಂದು ವಿಶಿಷ್ಟ ಶಕ್ತಿ ಇರುತ್ತದೆ. ಆದುದರಿಂದಲೆ, ದೇವತೆಗಳ, ಗುರುಗಳ ಹಾಗೂ ದ್ವಿಜರ ನೆರಳನ್ನು ದಾಟಬಾರದೆಂದು "ಶೈವಾಗಮು"ಗಳಲ್ಲಿ ಹೇಳಿದೆ.

"ದೇವದ್ವಿಜಗುರುಚ್ಛಾಯಾಂ ನಾಕ್ರಮೇತ್ ನ ತುಲಂಘಯೇತ್"

ಗುರುಗಳ ಕೃಪಾಛತ್ರ ಶಿಷ್ಯನ ಕಲ್ಯಾಣಕ್ಕೆ ಅತ್ಯಾವಶ್ಯಕ. ಅವರ ನೆರಳನ್ನು ಆಕ್ರಮಿಸತಕ್ಕದ್ದಲ್ಲ; ಅದನ್ನು ತುಳಿಯತಕ್ಕದಲ್ಲ ಹಾಗೂ ಅದನ್ನು

ದಾಟಿ ಹೋಗತಕ್ಕದ್ದಲ್ಲ. ಗುರುಗಳ ಕೃಪಾಛತ್ರವೇ ಶಿಷ್ಯನಿಗೆ ಆಶ್ರಯು, ಮುಕ್ತಿಯು ಮಾರ್ಗದರ್ಶಕ. ಹಾಗಿದ್ದರೆ, ಇಲ್ಲಿ ಸಹಜವಾಗಿ ಒಂದು ಸಂಶಯವು ತಲೆದೋರುವದು. ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡುವಾಗ್ಗೆ, ದೇವತೆಗಳ ಅಥವಾ ಗುರುಗಳ ನೆರಳನ್ನು ದಾಟಲೇಬೇಕಾಗುವದು. ಎಂದಮೇಲೆ ಪ್ರದಕ್ಷಿಣೆ ಹಾಕುವದು ದೋಷಯುಕ್ತವೇ ? ಇಲ್ಲ; ಪ್ರದಕ್ಷಿಣೆ ಹಾಕುವಾಗ್ಗೆ ದೋಷವಿಲ್ಲೆಂದು, ಅದೇ ಶೈವಾಗಮದಲ್ಲಿ ಸ್ಪಷ್ಟಪಡಿಸಲಾಗಿದೆ.

"ಪ್ರದಕ್ಷಿಣಾರ್ಥಂ ಛಾಯಾಯಾಃ ಲಂಘನೇ ನ ತು ದೋಷಭಾಕ್"

"ಪ್ರದಕ್ಷಿಣೆ ಹಾಕುವಾಗ್ಗೆ ನೆರಳನ್ನು ದಾಟುವದರಲ್ಲಿ ದೋಷವಿಲ್ಲ;" ಹೀಗೆ ತಮ್ಮ ಆಶ್ರಯದಿಂದ ಶಿಷ್ಯರ ಕಲ್ಯಾಣ ಮಾಡುವವರು, "ಛಾಯಾನಿಧಿ" ಗುರುಗಳು; ಇವರು ಒಂಭತ್ತನೆಯ ಪ್ರಕಾರದವರು.

## (೧೦) ನಾದನಿಧಿ ಗುರುಗಳು

ಸದ್ಗುರುಗಳ ಶಬ್ದಗಳಲ್ಲಿ ಅಮೃತ ಸಮಾನವಾದ ಮಾಧುರ್ಯ ತುಂಬಿರುತ್ತದೆ. ಅಂತಹ ಮಧುರ ಶಬ್ದಗಳು ಶಿಷ್ಯನ ಕಿವಿಗೆ ಬಿದ್ದರೆ, ಅವರಿಗೆ ಅಪರಿಮಿತವಾದ ಆನಂದವಾಗುತ್ತದೆ. ಸದ್ಗುರುಗಳ ಉಪದೇಶದಿಂದ ಶಿಷ್ಯನ ತಾಪತ್ರಯಗಳು ದೂರಾಗುತ್ತವೆ. ಎಂತಹ ಆಪತ್ತಿನಲ್ಲಿ ಸಿಲುಕಿದ್ದರೂ ಕೂಡ ಸದ್ಗುರುಗಳ ಮಧುರ ಮತ್ತು ಹಿತಕರ ನುಡಿಗಳು, ಶಿಷ್ಯನ ಹೃದಯಕ್ಕೆ ಆನಂದವನ್ನು ಉಂಟು ಮಾಡುತ್ತವೆ. ಇದು, ಗುರುಗಳ ಅಮೃತಮಯ ಉಪದೇಶದಲ್ಲಿ ಅಡಗಿದ ತಪಸ್ಸಿನ ಶಕ್ತಿಯೆಂದೇ ಹೇಳಬೇಕು. ಈ ಮಾರ್ಗದಿಂದ ಶಿಷ್ಯರ ಉದ್ಧಾರ ಮಾಡುವವರು, "ನಾದನಿಧಿ" ಅಥವಾ "ನಾದಧೀಃ" ಗುರುಗಳು. ಇವರು ೧೦ನೆಯ ಪ್ರಕಾರದವರು.

## (೧೧) ಚಂದ್ರಕಾಂತ ಗುರುಗಳು

ಚಂದ್ರಕಾಂತ ಮಣಿಯನ್ನು ಚಂದ್ರನಿಗೆ ಸಮ್ಮುಖವಾಗಿ ಹಿಡಿದರೆ, ಆ ಮಣಿಯಿಂದ ತುಷಾರಗಳು ಉದುರುವವು. ಚಂದ್ರನಲ್ಲಿರುವ ಅಮೃತವೇ ಆ ಮಣಿಯಿಂದ ಹೊರಸೂಸಿ ಬರುವದು; ಸದ್ಗುರುಗಳ ಪ್ರೇಮಪೂರಿತ ಹೃದಯವೇ ಚಂದ್ರಕಾಂತ ಮಣಿ. ಅವರ ಹೃದಯದಿಂದ ಅಮೃತಧಾರೆಯು ಹರಿದು ಬರುವದು. ಅಂತಃಕರಣವು ಹೊರಸೂಸಿ ಬಂದು ಶಿಷ್ಯನಿಗೆ ಆನಂದವನ್ನು ಕೊಡುತ್ತದೆ. ಸದ್ಗುರುಗಳು ಸದಾಚಾರ, ಸದ್ಧರ್ಮ, ಜ್ಞಾನ, ವೈರಾಗ್ಯ,

ತಪೋಬಲ ಮೊದಲಾದವುಗಳಿಂದ ಶಿಷ್ಯನ ಹೃದಯವನ್ನು ಆಕರ್ಷಿಸಿಕೊಂಡು, ಅವರಿಗೆ ಮುಕ್ತಿಯ ಮಾರ್ಗವನ್ನು ತೋರಿಸಿ ಕೊಡುವರು. ಈ ರೀತಿಯಿಂದ ಶಿಷ್ಯನ ಕಲ್ಯಾಣವನ್ನು ಬಗೆಯುವವರು ಚಂದ್ರಕಾಂತ ಗುರುಗಳು. ಇವರು ಹನ್ನೊಂದನೆಯ ಪ್ರಕಾರದವರು.

### (೧೨) "ಸೂರ್ಯಕಾಂತ ಗುರುಗಳು"

ಸೂರ್ಯಕಾಂತ ಮಣಿಯನ್ನು ಸೂರ್ಯನಿಗೆ ಸಂಮುಖವಾಗಿ ಹಿಡಿದರೆ, ಸೂರ್ಯನ ಕಿರಣಗಳು ಅದರ ಮೇಲೆ ಬಿದ್ದು, ಅಗ್ನಿ ಉತ್ಪನ್ನವಾಗಿ, ಕೆಳಗಿದ್ದ ತೃಣ, ಕಾಷ್ಠ, ಮೊದಲಾದವುಗಳು ಸುಟ್ಟು ಹೋಗುವವು. ಅದರಂತೆ, ಸದ್ಗುರುಗಳು ಶಿಷ್ಯನ ಅಪರಾಧಗಳಿಗೆ, ಪಾಪಕ್ಕೆ, ತಮ್ಮ ತಪೋನುಷ್ಠಾನದ ರಾವುಗನ್ನಡಿಯನ್ನು (ಸೂರ್ಯಕಾಂತ ಮಣಿಯನ್ನು) ಹಿಡಿದು, ಅವರ ಸಕಲ ಪಾಪಗಳನ್ನು ಸುಟ್ಟು ಭಸ್ಮ ಮಾಡುವರು. ಆತ್ಮತೇಜದ ಪ್ರಭಾವದಿಂದ, ಶಿಷ್ಯರ ದೋಷಗಳನ್ನು ನಾಶ ಮಾಡಿ, ಅವರ ಹೃದಯವನ್ನು ಪವಿತ್ರಗೊಳಿಸಿ, ಅವರನ್ನು ಆತ್ಮೋದ್ಧಾರ ಮಾರ್ಗದತ್ತ ಕರೆದೊಯ್ಯುವರು. ಇಂತಹ ಗುರುಗಳು ಸೂರ್ಯಕಾಂತ ಗುರುಗಳು. ಇವರು ಹನ್ನೆರಡನೆಯ ಪ್ರಕಾರದವರು.

ಹೀಗೆ ಹನ್ನೆರಡು ರೀತಿಯಿಂದ, (ಸ್ಪರ್ಶ, ದೃಷ್ಟಿ ಇತ್ಯಾದಿ,) ಉದ್ಧಾರ ಮಾಡುವ ಶಕ್ತಿಗಳೇ ಸದ್ಗುರುವಿನ ಆಂತರಿಕ ಲಕ್ಷಣಗಳು. ೩೨ ಬಾಹ್ಯ ಲಕ್ಷಣಗಳಿಂದ ಹಾಗೂ ೧೨ ಆಂತರಿಕ ಲಕ್ಷಣಗಳಿಂದ ಅಂತರ್ಬಾಹ್ಯ ಸುಂದರನಾದ ಸದ್ಗುರುವು ದೊರಕುವುದು ಪೂರ್ವಜನ್ಮದ ಸುಕೃತವೇ ಸರಿ. ಇಂತಹ ಸದ್ಗುರುವಿಗಿಂತ ಹೆಚ್ಚಿನ ವಸ್ತು ಬೇರೆ ಯಾವುದೂ ಇಲ್ಲ.

"ನ ಗುರೋರಧಿಕಂ ತತ್ತ್ವಂ ನ ಗುರೋರಧಿಕಂ ತಪಃ ।
ನ ಗುರೋರಧಿಕಂ ಜ್ಞಾನಂ ತಸ್ಮೈ ಶ್ರೀ ಗುರವೇ ನಮಃ ॥"

'ಗುರುಗೀತಾ'

ಮನಸ್ಸು ಪರಿಶುದ್ಧವಾಗದ ಹೊರ್ತು, ಸದ್ಗುರುವಿನ ಅನುಗ್ರಹವು ಸಾಧ್ಯವಿಲ್ಲ; ಕೇವಲ ಜಪ, ತಪ, ತೀರ್ಥಾಟನೆಗಳಿಂದ ಮನಸ್ಸು ಪರಿಶುದ್ಧವಾಗಲಾರದು.

"ಮಲವ ತೊಳೆಯಬಲ್ಲರಲ್ಲದೇ, ಮನವ ತೊಳೆಯಬಲ್ಲರೇ ?" ಎಂದು ಪುಣ್ಯಶ್ಲೋಕರಾದ ಪುರಂದರದಾಸರು ಮಾರ್ಮಿಕವಾದ ಪ್ರಶ್ನೆ ಕೇಳಿದ್ದಾರೆ !

ದೇಹದ ಹೊಲಸನ್ನು ಬಹು ಸುಲಭವಾಗಿ, ಸಾಬೂನು, ಶೀಗೆಕಾಯಿಪುಡಿ ಮೊದಲಾದವುಗಳಿಂದ ತೊಳೆಯಬಹುದು ಸ್ನೋ-ಪಾವಡರ ಮುಂತಾದವುಗಳಿಂದ ಮುಖವನ್ನು ಕಾಂತಿಯುಳ್ಳದ್ದನ್ನಾಗಿ ಮಾಡಬಹುದು. ಆದರೆ ಮನದ ಮಾಲಿನ್ಯವನ್ನು ತೊಳೆಯುವದು ಬಹು ಕಠಿಣ. ಯಾವ ಸಾಬೂನಿನಿಂದಾಗಲೀ, ಪುಡಿಯಿಂದಾಗಲೀ ಮನಸ್ಸು ಹಸನಾಗಲಾರದು. ಶ್ರದ್ಧಾ, ಭಕ್ತಿ, ವಿಶ್ವಾಸಗಳಿಂದ ಅನಂತ, ಅಚ್ಯುತ, ಅವಿನಾಶಿಯಾದ ಪರಮಾತ್ಮರೂಪ ಸದ್ಗುರುಗಳ ಧ್ಯಾನದಿಂದ ಮನಸ್ಸು ತೊಳೆದುಕೊಂಡು, ಸದ್ಗುರುವಿನ ಅನುಗ್ರಹ ಸಂಪಾದಿಸುವದು ಪ್ರತಿಯೊಬ್ಬ ಸಾಧಕನ ಕರ್ತವ್ಯ. ಶಾಶ್ವತ ಸುಖ, ಸಮಾಧಾನ, ಶಾಂತಿಗಳಿಗೆ ಇದುವೇ ದಿವ್ಯ ರಸಾಯನ. ಸದ್ಗುರು ಶ್ರೀ ಚಿದಂಬರ ಮಹಾಸ್ವಾಮಿಗಳು, ಸ್ಪರ್ಶದಿಂದ, ಕೃಪಾದೃಷ್ಟಿಯಿಂದ, ವಿವೇಕದಿಂದ, ಅನುಗ್ರಹದಿಂದ, ಜ್ಞಾನದಿಂದ, ಅಮೃತೋಪದೇಶ ಮೊದಲಾದ ಹನ್ನೆರಡು ರೀತಿಯಿಂದ ಅನೇಕ ಭಕ್ತರನ್ನು, ಆಪ್ತೇಷ್ಟರನ್ನು, ಉದ್ಧಾರ ಮಾಡಿದ್ದಾರೆಂದು, ಶ್ರೀಮಚ್ಚರಿತ್ರಲೇಖಕರಾದ ಸಖಾರಾಮ ತ್ರ್ಯಂಬಕ ಗರ್ದೆಯವರು ಬರೆದಿದ್ದಾರೆ. ಇಂತಹ ಜ್ಞಾನ ಮತ್ತು ವಿಜ್ಞಾನರೂಪಿಯಾದ ಚಿದಂಬರ ಗುರುವಿಗೆ ಸಾಷ್ಟಾಂಗ ನಮನಗಳನ್ನು ಸಲ್ಲಿಸುವೆ ಎಂದು ಹೇಳಿದ್ದಾರೆ.

"ಬಾರಾ ಸದ್ಗುರು ಮುಖ್ಯ ಹೋತಿ ಜಗಿಯಾ ತ್ಯಾ ಮಾಜಿಹೀ
ವರ್ಯ ಹಾ ।
ಜೈಸಾ ಹಾ ಪದಕೀ ಸುಮಧ್ಯಮ ಮಣೀ ದಾವೀ ಪ್ರಭಾ ತೇ ಪಹಾ ॥
ತೈಸಾ ಹಾಚಿ ಚಿದಂಬರ ಗುರೂ ಸರ್ವಾಸ ಯಾ ಸದ್ಗುರೂ ।
ಶ್ರೀಮತ್ ಸ್ವಾಮಿ ಚಿದಂಬರಾ ಗುರುವರಾ ಬಾರಾ ಗುರೋ ಆರ್ಯ ತೂ॥

ಶ್ರೀಮಚ್ಚರಿತ್ರ ಪಾದ ೧, ಅಧ್ಯಾಯ ೨೩, ಶ್ಲೋಕ ೩೫

ಅರ್ಥ—ಈ ಜಗತ್ತಿನಲ್ಲಿ ಮುಖ್ಯವಾಗಿ ೧೨ ಪ್ರಕಾರದ ಗುರುಗಳು ಇರುತ್ತಾರೆ: ಅಂಥವರಲ್ಲಿ ಚಿದಂಬರನು ಶ್ರೇಷ್ಠ, ಚಿದಂಬರನು ಸರ್ವರಿಗೂ ಸದ್ಗುರುವಾಗಿ ಪದಕದಲ್ಲಿಯ ಮಧ್ಯ ಮಣಿಯಂತೆ ಶೋಭಿಸುವನು.

ಇಂತಹ ಸದ್ಗುರುಗಳ ಚರಣಕಮಲಗಳಿಗೆ ಸಾಷ್ಟಾಂಗನಮಸ್ಕಾರಗಳನ್ನು ಮಾಡಿ ಅವರ ನಾಮಗರ್ಜನೆ ಮತ್ತು ಜಯಜಯಕಾರ ಮಾಡಿ, ಈ ವಿವೇಚನೆಯನ್ನು ಮುಗಿಸುತ್ತೇನೆ.

"ಔದುಂಬರ ನಿವಾಸೀ, ಭಕ್ತಾಭಿಮಾನೀ. ರಾಜಾಧಿರಾಜ, ಸದ್ಗುರು, ಶ್ರೀ ಶಿವ ಚಿದಂಬರೇಶ್ವರ ಗುರು ಮಹಾರಾಜಕೀ ಜಯ."



ಈ ನಾಮಗರ್ಜನೆಯಲ್ಲಿರುವ ಸದ್ಗುರುವಿನ ಪ್ರತಿಯೊಂದು ವಿಶೇಷಣವೂ ಹೇಗೆ ಔಚಿತ್ಯ ಮತ್ತು ಅರ್ಥಪೂರ್ಣವಾಗಿದೆ ಎಂಬುದನ್ನು ನೋಡುವಾ.

(೧) ಔದುಂಬರನಿವಾಸೀ—

ಶ್ರೀಮತ್ ಪೂಜ್ಯ ಭಗವತ್ಪಾದ ಶಂಕರಾಚಾರ್ಯರಿಂದ ರಚಿತವಾದ "ವಿಷ್ಣು ಸಹಸ್ರನಾಮ ಭಾಷ್ಯದಲ್ಲಿ ವಿಷ್ಣುವಿನ ಒಂದು ನಾಮವಾದ "ಉದುಂಬರಃ" ಎಂಬ ಶಬ್ದಕ್ಕೆ ಹೀಗೆ ಅರ್ಥ ಬರೆದಿದ್ದಾರೆ.

"ಉದುಂಬರಂ ಅನ್ನಾದ್ಯಂ" ತೇನ ತದಾತ್ಮನಾ ವಿಶ್ವಂ ಪೋಷ್‌ಯನ್, ಉದುಂಬರಃ। ಸಕಲ ವಿಶ್ವಕ್ಕೆ ಅನ್ನವನ್ನು ಕೊಟ್ಟು ಪೋಷಣೆಯನ್ನು ಮಾಡುವವನು ವಿಷ್ಣುವು.

"ಅಂಬರಾತ್ ಉದ್ಗತಃ ಕಾರಣತ್ವೇನ ಇತಿ ಉದುಂಬರಃ'' ಸಕಲ ಸೃಷ್ಟಿಗೂ ಮೂಲ ಕಾರಣ ವಿಷ್ಣು ಪರಮಾತ್ಮ. ಚಿದಂಬರನು ವಿಷ್ಣುರೂಪಿಯು. ಚಿದಂಬರ ಮತ್ತು ವಿಷ್ಣು ಇವರಲ್ಲಿ ಭೇದವಿಲ್ಲ. ಹರಿಹರರ ಏಕರೂಪತೆಯನ್ನು ತೋರಿಸಲು 'ಔದುಂಬರ ನಿವಾಸಿ' ಎಂಬ ವಿಶೇಷಣ ಸರಿಯಾಗಿಯೇ ಇದೆ. "ಯಾನ್ಯೇವ ಶವನಾಮಾನಿ ತಾನ್ಯೇವ ಮಮ ಶಂಕರ" ಎಂದು ಹರಿಯ ಉಕ್ತಿ ಇದೆ. ಇನ್ನು ಔದುಂಬರ ಗಿಡಕ್ಕೆ ವೈದ್ಯಕೀಯ ದೃಷ್ಟಿಯಿಂದ ಬಹಳೇ ಮಹತ್ವವಿದೆ. ಔದುಂಬರ ಹಂಣುಗಳಲ್ಲಿ ಕ್ಷಯ, ಕ್ಯಾನ್ಸರ ಮೊದಲಾದ ರೋಗಗಳನ್ನು ನಿವಾರಿಸುವ ಶಕ್ತಿ ಇವೆ. ಔದುಂಬರ ಗಿಡದ ತೊಗಟೆಯಲ್ಲಿ ಕೂಡ ಮನುಷ್ಯನನ್ನು ನಿರೋಗಿಯನ್ನಾಗಿ ಮಾಡುವ ಶಕ್ತಿ ಇದೆ. ಇಂತಹ ಪವಿತ್ರ ಗಿಡದಲ್ಲಿ ವಾಸ ಮಾಡುವ ಚಿದಂಬರನಿಗೆ "ರೋಗ ಹರಃ" ಎಂದು ಹೆಸರು ಇದೆ. "ಸರ್ವರೋಗ ಹರಾಯ ನಮಃ" ಎಂಬುದು ಚಿದಂಬರನಿಗೆ ಸಹಸ್ರನಾಮಗಳಲ್ಲಿ ಒಂದು. ಅದ್ದರಿಂದ ಔದುಂಬರನಿವಾಸೀ ಎಂಬ ವಿಶೇಷಣವು ಅರ್ಥಪೂರ್ಣವಿದೆ.

**೨) ಭಕ್ತಾಭಿಮಾನೀಃ–**

ಚಿದಂಬರನಿಗೆ ಭಕ್ತರೇ ಹೆಚ್ಚು ಪ್ರಿಯರು. ಭಕ್ತರ ಉದ್ಧಾರ

ಕ್ಕಾಗಿಯೇ ನನ್ನ ಅವತಾರ ಎಂದು ಅವರು ತಮ್ಮ ಮಕ್ಕಳಿಗೆ, ಆಪ್ತೇಷ್ಟರಿಗೆ ಸ್ಪಷ್ಟವಾಗಿ ಹೇಳಿದ್ದಾರೆ.

"तुम्ही पुत्र हे आत्प हे देहव्याजे ।
मला भक्त ते थोर हे सर्व काजे ।।
अलो मी भुवीं भक्त यांच्या निमित्ते ।
कळे वर्म हे भक्त ते ज्यास होते ।।

श्रीमच्चरित्र पाद ४

ಮಕ್ಕಳು, ಇಷ್ಟರು, ಆಪ್ತರು, ನೀವೆಲ್ಲ ಈ ದೇಹ ಸಂಬಂಧದಿಂದ ಮಾತ್ರ. ನಿಮ್ಮೆಲ್ಲರಿಗಿಂತ ಭಕ್ತರೇ ನನಗೆ ಶ್ರೇಷ್ಠರು. ನಾನು ಈ ಭೂಲೋಕದಲ್ಲಿ ಅವತರಿಸಿದ್ದು ಭಕ್ತರ ಉದ್ಧಾರಕ್ಕಾಗಿ ಎಂಬುದನ್ನು ನನ್ನ ನಿಜವಾದ ಭಕ್ತರು ಬಲ್ಲರು.

ಶ್ರೀಮಚ್ಚರಿತ್ರ. ಪಾದ ೪

ಭಗವಾನ್ ಶ್ರೀಕೃಷ್ಣ ಪರಮಾತ್ಮನೂ ಕೂಡ ತನ್ನ ಭಕ್ತನಾದ ಅರ್ಜುನನಿಗೆ ಗೀತೆಯಲ್ಲಿ ಇದನ್ನೇ ಉಪದೇಶಿಸಿದ್ದಾನೆ. "न मे भक्तः प्रणश्यति" ಎಂದು ಭಕ್ತನಿಗೆ ಅಭಯವನ್ನು ನೀಡಿದ್ದಾನೆ. "मभ्दक्ताः यत्र गायंति तत्र तिष्ठामि नारद" ನನ್ನ ಭಕ್ತರು ಭಕ್ತಿಯಿಂದ ನನ್ನ ನಾಮ ಸಂಕೀರ್ತನೆಯನ್ನು ಮಾಡುವಲ್ಲಿ ನಾನು ವಾಸಿಸುವೆ. ವೈಕುಂಠ ಕೈಲಾಸಗಳಲ್ಲಿ ಅಲ್ಲ, ಎಂದು ಭಕ್ತರ ಮಹತಿಯನ್ನು ತಿಳಿಸಿಕೊಟ್ಟಿದ್ದಾನೆ. ಪರಮಾತ್ಮನು ಸದೈವ ಭಕ್ತಾಭಿಮಾನಿ. ಆದ್ದರಿಂದ ಚಿದಂಬರನಿಗೆ ಭಕ್ತಾಭಿಮಾನೀ ಎಂಬುವ ವಿಶೇಷಣವು ಸಾರ್ಥಕ–ವಾಗಿದೆ.

**೩) ರಾಜಾಧಿರಾಜಃ–**

ರಾಜರು ತಮ್ಮ ದೇಶ, ತಮ್ಮ ಪ್ರಜೆಗಳನ್ನು ಮಾತ್ರ, ಸಂರಕ್ಷಿಸುತ್ತಾರೆ. ಪರಮಾತ್ಮನು ಸಕಲ ವಿಶ್ವವನ್ನೇ ಸಂರಕ್ಷಿಸುತ್ತಾನೆ. ಆದ್ದರಿಂದಲೇ ಅವನಿಗೆ "ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕ" ಎಂಬ ಬಿರುದು ಇದೆ. ಚತುರ್ದಶ ಲೋಕಗಳನ್ನು ಕೂಡ ಸಂರಕ್ಷಿಸುವ ಸಾಮರ್ಥ್ಯವುಳ್ಳ ಪರಬ್ರಹ್ಮ ಸ್ವರೂಪನಾದ

ಚಿದಂಬರನು ರಾಜರ ರಾಜನಲ್ಲವೇ ? ಅಂತೆಯೇ ಅವನಿಗೆ ರಾಜಾಧಿರಾಜ ಎಂಬುವ ವಿಷೇಶಣವು ಅರ್ಥಪೂರ್ಣ ಮತ್ತು ಔಚಿತ್ಯ ಪೂರ್ಣವೂ ಆಗಿದೆ.

**೪) ಸದ್ಗುರುಃ–**

ಸದ್ಗುರುಗಳ, ಬಾಹ್ಯ ಮತ್ತು ಆಂತರಿಕ ಲಕ್ಷಣಗಳನ್ನು ಈಗಾಗಲೇ ವಿವರಿಸಿದ್ದಾಗಿದೆ. ಚಿದಂಬರನು ಅಂತರ್ಬಾಹ್ಯ ಸುಂದರನಾದ ಸದ್ಗುರು ಎಂಬುವದು ಸುಸ್ಪಷ್ಟ–

**೫) ಶ್ರೀಃ–**

ಶ್ರೀ ಶಬ್ಧಕ್ಕೆ ಅನೇಕ ಅರ್ಥಗಳಿವೆ. ಸಂಪತ್ತು, ಸೌಂದರ್ಯ, ಲಕ್ಷ್ಮೀ, ರಾಜವೈಭವ, ವರ್ಣ, ಕಾಂತಿ, ಸದ್ಗುಣ, ಬುದ್ಧಿ, ಜ್ಞಾನ, ಅಲೌಕಿಕ ಶಕ್ತಿ, ಅಲಂಕರಣ, ಸರಸ್ವತೀ, ಚಂದ್ರನ ದ್ವಾದಶ ಕಲಾ, ಶ್ರೀರಾಗ, ಯಶ, ಇತ್ಯಾದಿ. ಇವೆಲ್ಲವುಗಳು ಚಿದಂಬರನಲ್ಲಿ ವಾಸವಾಗಿದ್ದವೆಂದು ಅವನಿಗೆ "ಶ್ರೀ" ಎಂಬುವ ಪದವೂ ಕೂಡ ಯಥಾರ್ಥವಾಗಿದೆ.

**೬) ಶಿವಃ–**

ಶಿವಃ, ಅಥವಾ ಶಂಕರಃ ಅಂದರೆ ಕಲ್ಯಾಣ ಮಾಡುವವ ಎಂಬ ಅರ್ಥವಿವೆ. (शंकरोति इति शंकरः।) शं–कलयाणं ಸಕಲರಿಗೂ ಕಲ್ಯಾಣವನ್ನು ಬಗೆಯುವಂತಹ ಚಿದಂಬರನಿಗೆ ಶಿವ ಎಂಬುವ ವಿಶೇಷಣವೂ ಕೂಡ ಶೋಭಿಸುತ್ತದೆ.

**೭) ಚಿದಂಬರೇಶ್ವರಃ–**

चित् एव अम्बरं यस्य सः चिदबरः। ಚಿದಂಬರನು ಅಖಂಡ ಚಿನ್ಮಯ ಸ್ವರೂಪನು; ಅವಿನಾಶಿಯಾದ ಜ್ಯೋತಿಯು ಅವ; ಚೈತನ್ಯಮಯನು ಅವನು. ಸಕಲವಿಶ್ವಕ್ಕೆ ಅಧಿಪತಿಯು. ಸ್ವಾನಂದ ಸಾಮ್ರಾಜ್ಯದ ಸಾರ್ವಭೌಮನು. ಅನಂತಕೋಟಿ ಬ್ರಹ್ಮಾಂಡಗಳನ್ನು ಆಳುವ ಶಕ್ತಿ ಈತನಲ್ಲಿ ಇದೆ. " यतो वा इमानि भूतानि जायंते। येन जातानि जीवन्ति। यत् प्रयन्त्यभिसंविशन्ति।" ಎಂಬ ಉಪನಿಷದ್ವಾಕ್ಯವೂ ಕೂಡ, ಪರಮಾತ್ಮನು ಸೃಷ್ಟಿ, ಸ್ಥಿತಿ, ಪ್ರಳಯುಗಳನ್ನು ತನ್ನ ಆಧೀನದಲ್ಲಿ ಇಟ್ಟುಕೊಂಡು, ವಿರಾಜಮಾನನಾಗಿದ್ದಾನೆ ಎಂದು ಹೇಳುವದು. ಇಂತಹ ಚಿತ್ ಶಕ್ತಿಯುಳ್ಳ ಚಿದಂಬರನಿಗೆ ಚಿದಂಬರೇಶ್ವರ ಎಂಬುವ ವಿಶೇಷಣವು ಯಥಾರ್ಥವೇ ಆಗಿದೆ.

೮) ಗುರುಮಹಾರಾಜಕೀ ಜಯಃ–

ಇಂತಹ ಸದ್ಗುರುಗಳಿಗೆ ಜಯವಾಗಲಿ. ಸದ್ಗುರುಗಳು ಸಕಲರಿಗೂ ಸದೈವ ಕಲ್ಯಾಣ ಮಾಡಲಿ. ವೈದಿಕ ಋಷಿಗಳ ಪರಂಪರೆಗನುಸಾರವಾಗಿ,

**सर्वे भद्राणि पश्यंतु सर्वे सन्तु निरामयाः ।**
**सर्वे च सुखिनः सन्तु मा कश्चित्दुःखमाप्नुयात्"**

" ಸಕಲರೂ ಸಂಪತ್ತಿಯನ್ನು ಪಡೆಯಲಿ; ಎಲ್ಲರೂ ನಿರೋಗಿಗಳಾಗಲಿ; ವಿಶ್ವದ ಪ್ರಾಣಿಗಳೆಲ್ಲವೂ ಸುಖವಾಗಿ ಬಾಳಲಿ; ಯಾರಿಗೂ ದುಃಖವು ಬರದಿರಲಿ" ಎಂದು ಪ್ರಾರ್ಥಿಸಿ, ಪುನಃ ಜಯಜಯಕಾರ ಮಾಡಿ, ಮುಂದೆ ಸಾಗುವೆ.

ಮುಂದಿನ ಕಿರಣದಲ್ಲಿ ಶ್ರೀ ಚಿದಂಬರ ಮಹಾ ಸ್ವಾಮಿಗಳ ಅವತಾರದ ಐತಿಹಾಸಿಕ ಹಾಗೂ ಪೌರಾಣಿಕ ಹಿನ್ನೆಲೆಯನ್ನೂ ಮತ್ತು ಮಹಾಸ್ವಾಮಿಗಳ ತಂದೆಯವರಾದ ಮಾರ್ತಂಡದೀಕ್ಷಿತರ (ಮಲ್ಲಾರಿದೀಕ್ಷಿತರ) ವಿದ್ಯಾವ್ಯಾಸಂಗ ಹಾಗೂ ತಪಶ್ಚರ್ಯೆಗಳ ಬಗ್ಗೆ ವಿವೇಚನೆಯನ್ನು ಮಾಡುವೆ.

**औदुंबर निवासी, भक्ताभिमानी, राजाधिराज,**
**सद्गुरू श्रीशिव चिदंबरेश्वर गुरुमहाराजकी जय "**
**ॐशांतिः शांतिः शांतिः ।**



**ಸದ್ಗುರುಗಳ ಬಗ್ಗೆ ಕೆಲವು ಅಮರ ನುಡಿಗಳು.**

१) **स्वकर्मधर्मी पूज्य ब्राह्मण। परी ज्ञानन्हें सद्गुरुविण।।**
**ब्रह्मज्ञान नसता शीण । जन्म मृत्यु चुके ना ।।**
**सद्गुरु कृपेविण अधोगती । गर्भवास चुके ना ।।**

**श्री रामदास स्वामी**

२) गुरु हा सुखाचा सागर । गुरु हा प्रेमाचा आगर ।।
गुरु हा धैर्याचा डोंगर । कदाकाळी ढळमळेना ।।
गूरु हा वैराग्याचे मूळ । गुरु हा परब्रह्म केवळ ।।
गुरु हा कामधेंनु गाय । भक्तावरी दुभतसे ।।
गुरु हा भक्तीचे मण्डण । गुरुहा काळासी दण्डण ।।
गुरु हा करीतसे खण्डण । नानापरी पापाचे ।।

श्री ज्ञानेश्वर

३) हरि हर ब्रह्मादिक । नाश पावती सकळिक ।।
सर्वदा अविनाश एक । सद्गुरु पद ।।

श्री दासबोध.

४) असितगिरिनिभं स्यात् कज्जलं सिंधुपात्रे ।
सुरतरुवरशाखालेखनीं पत्रमुर्वीम् ।।
लिखति यदि गृहीत्वा शारदा सार्वकालम् ।
तदपि तवगुणानामीश पारं न याति ।।

सुभाषितम्

५) आचार्यवान् पुरुषो वेद ।

श्रुतिः

६) नाना सद्विद्येचे गुण । या ही वरी कृपाळूपण ।।
हे सद्गुरुचें लक्षण । जाणिजेश्रोतीं ।।

श्रीरामदास



## ಶ್ರೀ ಚಿದಂಬರ ಪ್ರಕಾಶ

(ದ್ವಿತೀಯ ಕಿರಣ)

# ಯೋಗಿರಾಜ ಶ್ರೀ ಮಾರ್ತಂಡ ದೀಕ್ಷಿತರು

## (ಶ್ರೀ ಚಿದಂಬರ ಮಹಾಸ್ವಾಮಿಗಳ ತಂದೆ)

# ವಿದ್ಯಾವ್ಯಾಸಂಗ ಮತ್ತು ತಪಶ್ಚರ್ಯೆ

ಪ್ರಥಮ ಕಿರಣದಲ್ಲಿ ಸದ್ಗುರುಗಳ ಲಕ್ಷಣಗಳನ್ನು ವಿವೇಚಿಸಿದ್ದಾಯಿತು. ದ್ವಿತೀಯ ಕಿರಣದಲ್ಲಿ ಪರಮಾತ್ಮನು ಸದ್ಗುರು ಶ್ರೀ ಚಿದಂಬರ ಮಹಾಸ್ವಾಮಿಗಳ ರೂಪದಿಂದ ಅವತರಿಸಲು ಕಾರಣವೇನೆಂಬುದನ್ನು ವಿವೇಚಿಸೋಣ.

**यदा यदा हि धर्मस्य ग्लानिर्भवति भारत ।**
**अभ्युत्थानमधर्मस्य तदाऽऽत्मानं सृजाम्यहम् ।।**
**परित्राणाय साधूनां विनाशाय च दुष्कृताम् ।**
**धर्मसंस्थापनार्थाय संभवामि युगे युगे ।।**

ಭಾರತದ ಇತಿಹಾಸದಲ್ಲಿ ೧೮ ನೆಯ ಶತಮಾನವು ಅಂಧಃಕಾರ ಯುಗವೆಂದು, (One of the Darkest Periods in the Indian History ) ಶ್ರೀ ಮುಜುಮದಾರ, ಶ್ರೀ ರಾಯ ಚೌಧರಿ, ಶ್ರೀ ಕಾಲಿಕಿಂಕರದತ್ತ, ಶ್ರೀ ಸರದೇಸಾಯಿ, ಶ್ರೀ ಸರಕಾರ ಮೊದಲಾದ ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಧಾರ್ಮಿಕ, ಸಾಮಾಜಿಕ, ನೈತಿಕ, ರಾಜಕೀಯ ರಂಗಗಳಲ್ಲಿ, ಸಮಗ್ರ ಭಾರತವೇ ಅಧೋಗತಿಯ ಪರಾಕಾಷ್ಠವನ್ನು ಹೊಂದಿ, ಮಾನವ ಸಹಜವಾದ ದಯಾ, ದಾಕ್ಷಿಣ್ಯ, ವಿನಯ, ವಿವೇಕಾದಿ ಗುಣಗಳನ್ನು ಕಳೆದುಕೊಂಡು, ಪಶುವಿಗಿಂತಲೂ ತುಚ್ಛವಾಗಿ ಬಾಳಿದ ಕಲಂಕಮಯ ಯುಗವಿದು.

cf " We notice a regrettable detrioration in the Social life of the 18th century ...................................... ... ......In Social usage, in politics, in the realm of Religion and Art, we had entered the zone, of uncreative habit, of decadent traditions, and ceased to exercise our humanity"

Advanced History of India ( P 568-69)

by

1) Shri R. C. Mujumdar *M. A. Ph. D. Vice Chancellor Dacca University.*

ii) ,, Ray Choudhary *M. A. Ph. D. Culcutta University.*

iii) ,, Kali Kinkar Dutt. *M. A. Ph. D. Prof. of History Patna University.*

ಹಿಂದೂ ಧರ್ಮದ ಮೇಲೆ ಹದಿನಾರನೆಯ ಶತಮಾನದಿಂದಲೇ ಪೋರ್ತುಗೀಜರ ಆಘಾತ ಪ್ರಾರಂಭವಾಗಿತ್ತು. ಗೋವಾ ಪ್ರಾಂತದಲ್ಲಿ ಆಗಿನ ಸಮಯದಲ್ಲಿ, ಪೋರ್ತುಗಾಲದ ಸೆಂಟ್ ಟೇರೇಜ್ಸುನ ಆಳಿಕೆಯಿತ್ತು. ಗೋವಾ ಪ್ರಾಂತದಲ್ಲಿಯು ಎಷ್ಟೋ ದೇವಾಲಯಗಳನ್ನು ನೆಲಸಮ ಮಾಡಿ ಅಲ್ಲಿ ಚರ್ಚುಗಳನ್ನು ಕಟ್ಟಿಸಿದರೆಂದು ಇತಿಹಾಸದಿಂದ ಗೊತ್ತಾಗುತ್ತದೆ. " गोमांतक शुद्धीचा इतिहास" ಎಂಬ ಗ್ರಂಥದಲ್ಲಿ ಈ ರೀತಿ ಬರೆಯಲಾಗಿದೆ.

**"मूर्ति पूजेचा नाश करावा. देवळें पाडून टाकावीं. हिंदूचे उत्सव बंद करावे. गोवा बेटांत, किंवा इतर जोडलेल्या भागातील इतर कोणत्याही घरांत किंवा घराबाहेर एकादी मूर्ति अगर देवघर सापडेल तर ते जाळून टाकावे, व मालकाला दण्डकरावे." इत्यादि.**

(Pages 105, 106)

"ಮೂರ್ತಿ ಪೂಜೆಯನ್ನು ಸಮೂಲ ನಾಶ ಮಾಡಬೇಕು. ದೇವಾಲಯಗಳನ್ನು ನೆಲಸಮ ಮಾಡಬೇಕು. ಹಿಂದುಗಳ ಉತ್ಸವಗಳನ್ನು ಬಂದು ಮಾಡ

ಬೇಕು. ಗೋವಾ ಪ್ರಾಂತದಲ್ಲಿ ಅಥವಾ ಅದಕ್ಕೆ ಜೋಡಿಸಿದ ಬೇರೆ ಯಾವುದೇ ಮನೆಯಲ್ಲಾಗಲೀ ಅಥವಾ ಮನೆಯ ಹೊರಗಾಗಲೀ, ಯಾವದಾದರೊಂದು ದೇವರ ಮೂರ್ತಿ ಅಥವಾ ದೇವರಮನೆ ಸಿಕ್ಕಲ್ಲಿ, ಅವುಗಳನ್ನು ಸುಟ್ಟು, ಮಾಲಕನಿಗೆ ದಂಡ ಹಾಕಬೇಕು, ಇತ್ಯಾದಿ.

"ಹಿಂದುಗಳು ಮೂರ್ತಿ ಪೂಜೆ ಮಾಡಬಾರದು. ಗಂಧ, ಅಕ್ಷತಾ, ತಿಲಕ, ಅರಿಷಿಣ, ಕುಂಕುಮ ಧಾರಣ ಮಾಡಬಾರದು. ದೇವಪೂಜೆಯನ್ನು ಮಾಡಬಾರದು. ಉಪನಯನ, ವಿವಾಹ ಮೊದಲಾದ ಸಂಸ್ಕಾರಗಳನ್ನು ಮಾಡಬಾರದು" ಎಂದು ರಾಜನ ಆಜ್ಞೆ ಹೊರಟಿತು, ಈ ಆಜ್ಞೆಯನ್ನು ಯಾವದರೂ ಉಲ್ಲಂಘನೆ ಮಾಡಿದರೆ ಅವರ ಸರ್ವಸ್ವವನ್ನೇ ಚರ್ಚಿಗೆ ಜಮೆ ಮಾಡಬೇಕೆಂದು ವಿಧಿಸಲಾಗಿತ್ತು. ಜುಲುಮೆಯ ಮತಾಂತರವೂ ಕೂಡ ನಡೆಯಿತು. ಅನಿವಾರ್ಯವಾಗಿ ಎಷ್ಟೋ ಹಿಂದುಗಳು ಕ್ರೈಸ್ತ ಧರ್ಮ ಸ್ವೀಕಾರ ಮಾಡುವ ದುರ್ಧರ ಸಮಯ ಬಂದೊದಗಿತು. ಈ ಬಲಾತ್ಕಾರ, ಈ ಅನ್ಯಾಯ, ಈ ಚಿತ್ರಹಿಂಸೆ, ಈ ಧರ್ಮಾಂಧತನ, ನೂರಾರು ವರುಷಗಳವರೆಗೆ ಉಚ್ಛೃಂಕಲವಾಗಿ ನಡೆಯಿತು. "ತ್ರಾಹಿ ತ್ರಾಹಿ ಭಗವನ್" "ದೇವಾ ರಕ್ಷಿಸು–ಸಂರಕ್ಷಿಸು" ಎಂದು ಜನರು ಗೋಳಿಡಹತ್ತಿದರು.

## ಮೊಗಲರ ಹಾಗೂ ಆಫಗಾನರ ದಾಳಿಗಳು

ಪೋರ್ತುಗೀಜರ ಈ ಹಾವಳಿಯನ್ನು ಹೇಗೋ ಸಹನ ಮಾಡಿಕೊಂಡು ಚೇತರಿಸಿಕೊಳ್ಳುವಷ್ಟರಲ್ಲಿ ಇತ್ತ ಕಡೆಯಿಂದ ಹಿಂದೂ ಧರ್ಮದ ಮೇಲೆ ಮೊಗಲ ಹಾಗೂ ಆಫಗಾನರ ದಾಳಿ ಪ್ರಾರಂಭವಾಯಿತು. ಶಹಾಜಹಾನನ ಆಳಿಕೆಯು ಮೊಗಲರ ಇತಿಹಾಸದಲ್ಲಿ "ಸುವರ್ಣ ಯುಗ" (Golden Period) ವೆಂದು ಹೇಳಲ್ಪಟ್ಟಿದ್ದರೂ, ಹಿಂದೂ ದೇವಾಲಯಗಳನ್ನು ಕೆಡವಿಸುವದು ಶಹಾಜಹಾನನ ಕಾಲದಲ್ಲಿಯೇ ಪ್ರಾರಂಭವಾಯಿತೆಂದು, Prof S. R. Sharma ಅವರು "Mogul Empire in India " ಎಂಬ ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ.

"But his (Shajahan's) destruction of Hindu temples is less intellegible, Says the author ofBadshah Nama– It

had been brought to the notice of His Majesty that during the late reign, many idol temples had been begun but remainad unfinshed at Benares, the Stronghold of Infidelity. The infidels were now desirous of completing them. His Majesty the defender of Faith, gave orders that at Benares and through out all his dominions in every place, all temples that had been begun should be cast down. It was now reported from the province of Allahabad, that seventysix temples had been destroyed in the district of Benares"

(Pages 495-496)

ಈ ರೀತಿ, ಶಹಾಜಹಾನನ ಕಾಲದಲ್ಲಿ ಪ್ರಾರಂಭವಾದ ಆಘಾತವು ಔರಂಗಜೇಬನ ಕಾಲದಲ್ಲಿ ಶಿಖರಕ್ಕೇರಿತು.

" The ultimate result of Aurangjeb's nearly a qarter century of Campaining in the Deccan is thus described by Mannucci, a Contemporary European observer. Aurangjeb wihhdrew to Ahamadnagar, leaving behind him the fields of these provinces devoid of trees and bare of crops, their place being taken by the bones of men and beasts "

Mogul Empire in India. Page 591

"ದಕ್ಷಿಣ ಭಾರತದಲ್ಲಿ ೨೫ ವರುಷಗಳ ದಂಡಯಾತ್ರೆಯ ನಂತರ, ಔರಂಗಜೇಬನು ಅಲ್ಲಾಬಾದಕ್ಕೆ ಮರಳಿ ಬರುವಾಗ್ಗೆ ತನ್ನ ಹಿಂದೆ ಬೆಳೆಗಳಿಲ್ಲದ ಮತ್ತು ಗಿಡಗಳಿಲ್ಲದ ಬಂಜೆಭೂಮಿಯನ್ನು ಬಿಟ್ಟು ಬಂದನು. ಹೊಲಗಳು ಬೆಳೆಗಳ ಬದಲಾಗಿ, ಮಾನವರ ಮತ್ತು ಪಶುಗಳ ಎಲುಬುಗಳಿಂದ ತುಂಬಿದ್ದವು" ಎಂದು ಔರಂಗಜೇಬನ ಸಮಕಾಲೀನನಾದ "Mannucci" ಎಂಬ ಪಾಶ್ಚಿಮಾತ್ಯ ನಿರೀಕ್ಷಕನು ಅಭಿಪ್ರಾಯಪಟ್ಟಿದ್ದಾನೆ. "

1) Whole sale destruction of Hindu Temples.

ಹಿಂದೂ ದೇವಾಲಯಗಳ ಸಮೂಲನಾಶ.

2) Re-imposition of the Hatred Jijiya Tax.
ಹಿಂದುಗಳ ಮೇಲೆ "ಜಿಜಿಯಾ" ತೆರಿಗೆಯನ್ನು ಹೇರಿದ್ದು.

3) Exaction of Heavier Customs duties from Hindus.
ಹಿಂದುಗಳಿಂದ ಹೆಚ್ಚಿನ ಕರವನ್ನು ವಸೂಲಿ ಮಾಡುವದು.

4) Dismissal of Hindus from the Imperial Services.
ಸರಕಾರದ ಮಹತ್ವದ ಹುದ್ದೆಗಳಿಂದ ಹಿಂದುಗಳನ್ನು ತೆಗೆದು ಹಾಕುವದು;

5) Prohibition against the free exercise of their religious rites, like Holi & Diwali
ದೀಪಾವಳೀ, ಹೋಳಿ, ವೊದಲಾದ ಉತ್ಸವಗಳನ್ನು ಆಚರಿಸಲು ನಿರ್ಬಂಧ

6) Prohibition of Hindu Fairs
ಹಿಂದುಗಳ ಧಾರ್ಮಿಕ ಜಾತ್ರೆಗಳ ಮೇಲೆ ನಿರ್ಬಂಧ.

7) Prohibition of wearing arms, fine dresses and riding by the Hindus.

ಹಿಂದುಗಳು ಶಸ್ತ್ರಗಳನ್ನು ಧರಿಸಬಾರದು; ಸುಂದರ ಉಡಿಗೆಗಳನ್ನು ತೊಡಿಗೆಗಳನ್ನು ಹಾಕಿಕೊಳ್ಳಬಾರದು. ಕುದುರೆಗಳನ್ನು ಹತ್ತಕೂಡದು.

8) Proscription of Hindu Learning
ಹಿಂದು ಶಿಕ್ಷಣಕ್ಕೆ ಬಹಿಷ್ಕಾರ.

ಹೀಗೆ ಎಂಟು ರೀತಿಯಿಂದ ಹಿಂದೂ ಧರ್ಮದ ಅಸ್ತಿತ್ವವನ್ನೇ ನಾಶ ಮಾಡಲು ಔರಂಗಜೇಬನು ಪ್ರಯತ್ನ ಮಾಡಿದನು. ಅವನ ಆಳಿಕೆಯ ನಂತರ ಬಲಿಷ್ಟ ರಾಜರ ಅಭಾವದಿಂದ ಭಾರತದ ಆದ್ಯಂತ ದಂಗೆಗಳೆದ್ದು, ಕೊಲೆ, ಸುಲಿಗೆ, ಪುಂಡಾಟಿಕೆಗಳು ನಡೆದವು. ಈ ಸಂಧಿಯನ್ನು ಸಾಧಿಸಿ ಇ. ಸ. ೧೭೩೮-೩೯ ರಲ್ಲಿ ಪರ್ಶಿಯಾದ ನಾದಿರಶಹನು ಭಾರತದ ಮೇಲೆ ದಾಳಿ ಮಾಡಿ ಭಾರತದ ಸಂಪತ್ತನ್ನೆಲ್ಲ ಸುಲಿದುಕೊಂಡು ಹೋದನು.

"In addition to 70 crores of Rupees, Nadirshaha carried away with him 100 elephants 7000 horses, 10,000 camels, 100 enunches, 130 writers, 200 smiths 300 masons and buliders, 100 stone cutters, and 200 carpenters"
Pages 789-790 Mog. Emp. in India

“೨೦ ಕೋಟಿ ರೂಪಾಯಿಗಳಲ್ಲದೇ ನಾದಿರಶಹನು ತನ್ನ ಸಂಗಡ, ೧೦೦೦ ಆನೆಗಳನ್ನೂ, ೭೦೦೦ ಕುದುರೆಗಳನ್ನೂ, ೧೦,೦೦೦ ಒಂಟೆಗಳನ್ನೂ, ೧೦೦ ಲೇಖಕರನ್ನೂ, ೨೦೦ ಅಕ್ಕಸಾಲಿಗರನ್ನೂ, ೩೦೦ ಮನೆ ಕಟ್ಟುವವರನ್ನೂ, ೧೦೦ ಶಿಲ್ಪಿಗಳನ್ನೂ ಹಾಗೂ ೨೦೦ ಬಡಿಗರನ್ನೂ ತೆಗೆದುಕೊಂಡು ಹೋದನು.” ಇವನ ದಾಳಿಯ ನಂತರದ ಭಾರತದ ದಾರುಣ ಸ್ಥಿತಿಯನ್ನು ಮನಕರಗುವಂತೆ ಇತಿಹಾಸದಲ್ಲಿ ವರ್ಣಿಸಲಾಗಿದೆ.

“How to relate the ruin and desolation that overwhelmed this beauitful country! (India). Vazirabad, Imanbad, Gujrath, towns which for population might almost be called cities, were levelled to the earth. Nothing was respected; no sort of violence remained unpractised; property of all kinds became the spoil of the plunderer and women the prey of the ravisher.” Mog. Emp. in India. Page 787

“ನಾದಿರಶಹನ ದಾಳಿಯ ನಂತರ ಸುಂದರವಾದ ಭಾರತದ ಸಂಪತ್ತು ಹಾಳಾಗಿ ಹೋಯಿತು. ಅದನ್ನು ವರ್ಣಿಸುವದೆಂತು? ವಜೀರಾಬಾದ, ಇಮ್ನಾಬಾದ ಮುಂತಾದ ಪಟ್ಟಣಗಳು ನೆಲಸಮವಾದವು. ಪುಂಡರು ಯಾವದನ್ನೂ ಲೆಕ್ಕಿಸದೆ ಚಿತ್ರಹಿಂಸೆಯನ್ನು ಕೈಕೊಂಡರು. ಭಾರತದ ಸಂಪತ್ತು ಲೂಟಿಗಾರರ ವಶವಾಯ್ತು. ಅಬಲೆಯರ ಮಾನವು ಅತ್ಯಾಚಾರಿಗಳಿಗೆ ಆಹುತಿಯಾಯಿತು.”

ನಾದಿರಶಹನ ದಾಳಿಯ ನಂತರ ಅಹಮ್ಮದ ಶಹಾ ಅಬ್ದಾಲಿಯ ದಾಳಿಗಳು ಪ್ರಾರಂಭವಾಗಿ ಹಿಂದುಸ್ತಾನದ ಅಳಿದುಳಿದ ಸಂಪತ್ತಿಯನ್ನು ಲೂಟಿ ಮಾಡಿಕೊಂಡು ಒಯ್ಯಲಾಯಿತು, ಇಂತಹ ಅಸಹಾಯಕ, ಅರಾಜಕತೆಯ ಕರುಣಾಜನಕ ಪರಿಸ್ಥಿತಿಯಲ್ಲಿ ದೀನದಲಿತರ ಗೋಳನ್ನು ಕೇಳುವರಾರು? ರಾಜನ ಆಶ್ರಯವಿಲ್ಲದೇ ಹಿಂದೂ ಸಂಸ್ಕೃತಿಯು ಅತ್ಯಂತ ಹೀನ ಪರಿಸ್ಥಿತಿಯನ್ನು ಮುಟ್ಟಿತು. ಆದ್ದರಿಂದಲೇ ಈ ೧೮ನೆಯ ಶತಮಾನವು “One of the darkest periods in the annals of the Indian History” ಎಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾನೆ. ಬಲಿಷ್ಠರು ದುರ್ಬಲರನ್ನು ಸುಲಿದು ಸ್ವೈರವೃತ್ತಿಯಿಂದ ಪಶುಗಳಂತೆ ಜೀವಿಸಿದ ಯುಗವಿದು;

ಕಾಮಾಂಧರು ಅಬಲೆಯರ ಅಪಹರಣ, ಮಾನಭಂಗ, ಚಿತ್ರಹಿಂಸೆ ಮಾಡಿದ ಯುಗವಿದು; ತೀರ್ಥ–ಕ್ಷೇತ್ರಗಳನ್ನು ಮಜ್ಜಾಮಾಂಸಗಳಿಂದ ತುಂಬಿ ಅಪವಿತ್ರಗೊಳಿಸಿದ ಯುಗವಿದು; ಧರ್ಮಾಂಧರು ಗುಡಿ–ಗೋಪುರಗಳನ್ನು ನೆಲಸಮ ಮಾಡಿದ ಯುಗವಿದು; ದ್ರವ್ಯದ ಆಶೆಯಿಂದ ಸುಂದರವಾದ ಮಂದಿರಗಳಲ್ಲಿಯ ರಮ್ಯ ವಿಗ್ರಹಗಳನ್ನು ಶತಶಃ ಸಹಸ್ರಶಃ ಚೂರುಚೂರು ಮಾಡಿ ಧರ್ಮಕ್ಕೆ ಗದೆಯ ಪ್ರಹಾರವನ್ನು ಕೊಟ್ಟ ಯುಗವಿದು; ಶಿಕ್ಷಣ–ಸಂಸ್ಥೆಗಳೂ, ಮಠ-ಮಂದಿರಗಳೂ, ಅಮೌಲ್ಯ ಗ್ರಂಥಭಾಂಡಾರಗಳೂ ನಾಶ ಹೊಂದಿದ ಯುಗವಿದು; ಆಸೇತು ಹಿಮಾಚಲ ಬಲಿಷ್ಠ ರಾಜರ ಅಭಾವದಿಂದ ಅನ್ಯಾಯ, ಅನೀತಿ, ಅಸತ್ಯ, ಕ್ರೌರ್ಯ, ಸಂಹಾರ ಮೊದಲಾದವುಗಳು ಸಾಮ್ರಾಜ್ಯವನ್ನು ಆಳಹತ್ತಿದವು. ಇಂತಹ ಪರಿಸ್ಥಿತಿಯಲ್ಲಿ ದೀನದಲಿತರ ಗೋಳನ್ನು ಕೇಳುವವರಾರು? ಅವರ ದುಃಖ ಪರಂಪರೆಯ ವರ್ಣನೆಯನ್ನು ಕೇಳಿ, ಎಂತಹ ಕಲ್ಲೆದೆಯೂ ಕೂಡ ಕರಗಿ ನೀರಾಗುವದರಲ್ಲಿ ಸಂದೇಹವಿಲ್ಲ.

ಪ್ರಾಚೀನ ಕಾಲದಿಂದಲೂ ಹಿಂದೂ ಧರ್ಮದ ಮೇಲೆ ಪರಧರ್ಮೀಯರಿಂದ ಆಘಾತಗಳು ಆಗುತ್ತಲೇ ಬಂದಿವೆ. ಪರಮಾತ್ಮನು ತನ್ನ ಉಕ್ತಿಯಂತೆ,

**यदा यदा हि धर्मस्य ग्लानिर्भवति भारत ।**
**अभ्युत्थानमधर्मस्य तदाऽऽत्मानं सृजाम्यहम् ॥१॥**
**परित्राणाय साधूनां विनाशाय च दुष्कृताम् ।**
**धर्मसंस्थापनार्थाय संभवामि युगे युगे ॥२॥**

ರಾಮಕೃಷ್ಣಾದಿ ಅನೇಕ ರೂಪಗಳಿಂದ ಅವತರಿಸಿ, ಧರ್ಮಸ್ಥಾಪನೆಯನ್ನು ಮಾಡಿಯೇ ತೀರುವನು. ಸಾಧು ಸತ್ಪುರುಷರ ಮುಖಾಂತರ ಧರ್ಮರಕ್ಷಣೆಯನ್ನು ಮಾಡಿಯೇ ತೀರುವನು. ಶ್ರೀ ಭಗವತ್ ಪಾದಪೂಜ್ಯ, ಶಂಕರಾಚಾರ್ಯರು, ಶ್ರೀ ಮನ್ಮಧ್ವಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ವಿದ್ಯಾರಣ್ಯರು, ಶ್ರೀ ಪ್ರಭಾಕರ ದೀಕ್ಷಿತರು, ಶ್ರೀಮದಪ್ಪಯ್ಯ ದೀಕ್ಷಿತರು, ಶ್ರೀಪಾದ ಶ್ರೀವಲ್ಲಭರು, ಶ್ರೀಜ್ಞಾನೇಶ್ವರರು, ಶ್ರೀ ಭಿಷ್ಟಪ್ಪಯ್ಯನವರು, ಶ್ರೀ ಬಸವೇಶ್ವರರು, ಶ್ರೀ ತುಕಾರಾಮರು, ಶ್ರೀ ನಾಮ

ದೇವರು, ಶ್ರೀ ಏಕನಾಥರು, ಶ್ರೀ ಪುರಂದರದಾಸರು, ಶ್ರೀ ವಿಜಯವಿಠ್ಠಲ ದಾಸರು, ಶ್ರೀ ಕನಕದಾಸರು, ಶ್ರೀ ಚೈತನ್ಯ ಮಹಾರಾಜರು, ಶ್ರೀ ರಾಮ ದಾಸರು, ಶ್ರೀ ನಿವೃತ್ತಿನಾಥರು, ಶ್ರೀ ನಿಲೋಬಾಅವರು, ಶ್ರೀಮತೀ ಮುಕ್ತಾಬಾಯಿ, ಶ್ರೀಮತೀ ಅಕ್ಕಮಹಾದೇವಿ, ಶ್ರೀಮತೀ ಜನಾಬಾಯಿ, ಶ್ರೀ ರಾಜಾರಾಮ, ಶ್ರೀಮತೀ ವಿಠಾಬಾಯಿ ಮೊದಲಾದವರು, ಆಯಾ ಕಾಲದಲ್ಲಿ ಸಂಕಟದಲ್ಲಿ ಸಿಲುಕಿದ ಜನರಿಗೆ ಮಾರ್ಗದರ್ಶನ ಮಾಡಿ, ಶಾಶ್ವತ ಸುಖದ ದಾರಿಯನ್ನು ತೋರಿಸಿ ಕೊಟ್ಟಿದ್ದಾರೆ.

೧೮ನೆಯ ಶತಮಾನದ ಉತ್ತರಾರ್ಧದಲ್ಲಿ (ಇ. ಸ. ೧೭೫೮) ಪರಮಾತ್ಮನು ಶ್ರೀ ಚಿದಂಬರ ರೂಪದಿಂದ ಅವತರಿಸಿ ಧರ್ಮಸ್ಥಾಪನೆಯನ್ನು ಮಾಡಿದ್ದಾನೆ. ಈ ಅವತಾರವಾಗಬೇಕಾದರೆ, ಶ್ರೀ ಚಿದಂಬರ ಮಹಾಸ್ವಾಮಿಗಳ ತಾಯಿ-ತಂದೆಗಳಾದ ಸಾಧ್ವೀ ಲಕ್ಷ್ಮೀಬಾಯಿ ಮತ್ತು ಯೋಗಿರಾಜ ಮಾರ್ತಂಡ ದೀಕ್ಷಿತರು ಎಷ್ಟು ಘೋರ ತಪಶ್ಚರ್ಯವನ್ನು ಮಾಡಬೇಕಾಯಿತೆಂಬುವದನ್ನು ತಿಳಿಸುವದೇ ಈ ಲೇಖನದ ಮುಖ್ಯ ಉದ್ದೇಶ. ಆಗಿನ ಕಾಲವು ಕ್ರಾಂತಿಯ ಸಮಯವಾದದ್ದರಿಂದ ಹಿಂದೂ ಧರ್ಮದ ಮತ್ತು ಸಂಸ್ಕೃತಿಯ ತಳಹದಿಯಾಗಿರುವ ವೇದೋಪನಿಷತ್ತುಗಳನ್ನೂ, ವ್ಯಾಕರಣ, ನ್ಯಾಯ, ಮೀಮಾಂಸಾ, ಜ್ಯೋತಿಷ್ಯ, ಛಂದಃಶಾಸ್ತ್ರ, ವೇದಾಂತ, ಕಾವ್ಯ ಮುಂತಾದವುಗಳನ್ನು ಕಲಿಸುವ ಸಂಸ್ಥೆಗಳು ಪರಧರ್ಮೀಯರ ಆಕ್ರಮಣದಿಂದ ನಾಶವಾಗಿ ಹೋಗಿದ್ದವು. ಹಿಂದುಗಳ ಪವಿತ್ರ ಕ್ಷೇತ್ರವಾದ ಕಾಶಿಯಲ್ಲಿ ಮಾತ್ರ ವೇದ-ವೇದಾಂಗಗಳನ್ನು ಅಧ್ಯಯನ ಮಾಡಲು ಸೌಕರ್ಯವಿತ್ತು. ಆದ್ದರಿಂದ ಮಾರ್ತಂಡ ದೀಕ್ಷಿತರಿಗೆ ವಿದ್ಯಾ ಸಂಪಾದನೆಯನ್ನು ಮಾಡಲು ವಿದ್ಯಾಕೇಂದ್ರವಾದ ಕಾಶಿಗೆ ಹೋಗುವ ಪ್ರಸಂಗ ಬಂದಿತು.

## ಮಾರ್ತಂಡ ದೀಕ್ಷಿತರ ಜನ್ಮ ಮತ್ತು ವಂಶಾವಳಿ

ಶ್ರೀ ಚಿದಂಬರ ಮಹಾಸ್ವಾಮಿಗಳ ತಂದೆಯವರಾದ ಮಾರ್ತಂಡ ದೀಕ್ಷಿತರ ಮೊದಲಿನ ಹೆಸರು, ಮಾರ್ತಂಡಭಟ್ಟರು. (ಉರ್ಫ ಮಲ್ಲಾರಿಭಟ್ಟರು). ಇವರು ಕಾಶಿಯಲ್ಲಿ ವಿದ್ಯಾರ್ಜನೆಯ ನಂತರ "ಜ್ಯೋತಿಷ್ಟೋಮ' ಯಜ್ಞ ಮಾಡಿದ ನಂತರ ಇವರಿಗೆ "ದೀಕ್ಷಿತ" ಎಂಬ ಬಿರುದು ದೊರೆಯಿತು.

"ಮಾರ್ತಂಡ ಜಾಯ ಕಾಶೀ । ಅಭ್ಯಾಸೀ ಸ್ವಯಂಪ್ರಕಾಶ ಗುರುಪಾಶೀ ॥
ಜ್ಯೋತಿಷ್ಟೋಮಾಮಖ ಕರುನಿ । ದೀಕ್ಷಿತ ತೋ ಜಾಹಲಾ ॥"

ಶ್ರೀಮಚ್ಚರಿತ್ರ ಪಾ. ೧

## ಇವರ ವಂಶಾವಳಿ ಹೀಗಿದೆ

ಶ್ರೀ ನಾಗೇಶಭಟ್ಟರು. ಪತ್ನಿ ಗಂಗಾಬಾಯಿ

|

ಶ್ರೀ ಶಂಕರಭಟ್ಟರು. ಪತ್ನಿ ಪಾರ್ವತಿಬಾಯಿ

|

ಶ್ರೀ ತಿರುಮಲ (ಅಥವಾ ತ್ರ್ಯಂಬಕ ಭಟ್ಟರು) ಪತ್ನಿ ಕೃಷ್ಣಾಬಾಯಿ

|

ಶ್ರೀ ಮಾರ್ತಂಡಭಟ್ಟರು (ಉರ್ಫ ಮಲ್ಲಾರಿಭಟ್ಟರು) ಇ. ಸ. ೧೭೦೫ ಪತ್ನಿ ಲಕ್ಷ್ಮೀಬಾಯಿ | ಶ್ರೀ ನಾಗೇಶಭಟ್ಟರು | ಶ್ರೀ ಅನಂತಭಟ್ಟರು | ಶ್ರೀ ಲಿಂಗಾಭಟ್ಟರು

|

ಶ್ರೀ ಚಿದಂಬರ ದೀಕ್ಷಿತರು (ಮುರಗೋಡ) | ಶ್ರೀ ಪ್ರಭಾಕರ ದೀಕ್ಷಿತರು | ಶೇಷಾಬಾಯಿ

(ಇ. ಸ. ೧೭೫೮) ಶಕೆ ೧೬೮೦, ಬಹುಧಾನ್ಯ, ಕಾರ್ತಿಕ ವದ್ಯ ಷಷ್ಠಿ, ಸೋಮವಾರ

## ಜನ್ಮಸ್ಥಳ

ಶ್ರೀ ಮಾರ್ತಂಡಭಟ್ಟರು, ವಿಜಾಪೂರ ಜಿಲ್ಹೆಯ ಗೋಠೇ ಎಂಬ ಗ್ರಾಮದಲ್ಲಿ ಇ. ಸ. ೧೭೦೫ ರಲ್ಲಿ, ವೇದವೇದಾಂಗ ಪಾರಂಗತವಾದ, ಜ್ಯೋತಿಃ ಶಾಸ್ತ್ರವಿಶಾರದವಾದ ಕರ್ಮನಿಷ್ಠ ವೈದಿಕ ಮನೆತನದಲ್ಲಿ ಜನಿಸಿದರು.

"विजयाख्यपुरप्रांते गोठे ग्रामस्य शाश्वतीम् ।।
होराशास्त्रविशेषज्ञो नागेशो मूलपूरुषः ।
गंगाऽस्य पत्नी साध्वी स्यात् तयोः
श्रीशंकराभिधः ।। ।१६।
तत्पत्नी पार्वती चापि भर्तृशुश्रूषणेरता ।
तत्सुतः त्र्यंबक इति वेदवेदांगपारगः ।।१७।।
कृष्णायां तन्महिष्यां स्युः चत्वारस्तनयाः शुभाः ।
श्री सांबदी

परंपरा गृही अग्निसेवा असे ।
श्रैत जेथे वसे सांगोपांग ।।
श्रीमच्चरित्र पाद १, अ ९

ಇವರ ತಂದೆಯವರ ಹೆಸರು ತಿರುಮಲ (ತ್ರ್ಯಂಬಕ) ಭಟ್ಟರು. ಇವರಿಗೆ ನಾಲ್ಕು ಗಂಡುಮಕ್ಕಳು. ೧) ಮಾರ್ತಂಡ, ೨) ನಾಗೇಶ, ೩) ಅನಂತ, ೪) ಲಿಂಗಾಭಟ್ಟ. ಈ ನಾಲ್ವರಲ್ಲಿ ಮಾರ್ತಂಡಭಟ್ಟರೇ ಹಿರಿಯರು. ಸದಾಚಾರ ಸಂಪನ್ನರೂ, ಸುಶೀಲರೂ, ಧಾರ್ಮಿಕರೂ ಆದ ತಿರುಮಲಭಟ್ಟರು ತಮ್ಮ ಹಿರಿಯ ಮಗನಿಗೆ ವಿದ್ಯಾಭ್ಯಾಸವನ್ನು ಒಳ್ಳೇ ಆಸ್ಥೆಯಿಂದ ಮಾಡಿಸಿದರು. ಮಾರ್ತಂಡಭಟ್ಟರೂ ಕೂಡ ತಂದೆಯವರು ಹೇಳಿದ ಪಾಠಗಳನ್ನು ನಿಷ್ಠಾ ಪೂರ್ವಕವಾಗಿ ಕಲಿಯುತ್ತಿದ್ದರು. ಮನೆತನದ ಸಂಪ್ರದಾಯದಂತೆ, ಜ್ಯೋತಿಃ ಶಾಸ್ತ್ರದ ಪರಿಚಯವನ್ನು ಬಾಲ್ಯದಿಂದಲೇ ಮಾಡಿ ಕೊಟ್ಟರು. ಉಪನಯನ ವಾದ ನಂತರ ವೇದಾಧ್ಯಯನವನ್ನು ಮಾಡಿಸಿದರು. ಗಣಪತಿ, ಬಾಲಾ, ನಕುಲೀ, ಪಂಚಾಕ್ಷರೀ ಮೊದಲಾದ ಮಂತ್ರಗಳನ್ನು ಉಪದೇಶಿಸಿ ದರು. ತ್ರಿಕಾಲಸಂಧ್ಯಾ, ಭಸ್ಮಧಾರಣ, ಯಜ್ಞೋಪವೀತ ಧಾರಣ, ಸೂರ್ಯ ನಮಸ್ಕಾರ, ಅಗ್ನಿಕಾರ್ಯ, ದೇವಪೂಜಾ, ವೈಶ್ವದೇವ, ಲಘುನ್ಯಾಸ

ಮತ್ತು ಮಹಾನ್ಯಾಸಪೂರ್ವಕ ರುದ್ರಾಭಿಷೇಕ ಮುಂತಾದ ವಿಧಾನಗಳನ್ನು ಕಲಿಸಿದರು. ಮಗನ ಕುಶಾಗ್ರ ಬುದ್ಧಿಯನ್ನು ಕಂಡು, ಮಗನನ್ನು ಚತುರ್ವೇದ ಪಂಡಿತನನ್ನಾಗಿ ಮಾಡಬೇಕೆಂಬ ಹಂಬಲವು ಮೂಡಿತು. ವಿದ್ಯಾಕೇಂದ್ರವಾದ ಕಾಶಿಯಲ್ಲಿ ವಿದ್ಯಾರ್ಜನೆ ಮಾಡಿ ವಿದ್ವಾಂಸರ ಮನ್ನಣೆಗೆ ತನ್ನ ಮಗನು ಪಾತ್ರನಾಗಬೇಕೆಂಬ ಲವಲವಿಕೆಯು ಉಂಟಾಯಿತು. ಆದರೆ ತಮ್ಮ ಪ್ರಕೃತಿಯು ಅಸ್ವಸ್ಥವಾದದ್ದರಿಂದಲೂ ಹಾಗೂ ಮನೆತನದ ಯೋಗಕ್ಷೇಮವನ್ನು ವಹಿಸುವದು ಆಗದ್ದರಿಂದಲೂ, ತಿರುಮಲಭಟ್ಟರು ಮಗನನ್ನು ಕಾಶಿಗೆ ಕಳಿಸುವ ವಿಚಾರ ಬಿಟ್ಟು, ೧೬ ನೆಯ ವರುಷವೇ (೧೭೨೧. ಇ. ಸ.) ಮಗನ ವಿವಾಹವನ್ನು ನೆರವೇರಿಸಿದರು.

" **मौंजी नंतर तात लग्न करितैं अब्देच सोळा यया ॥**

**श्रीमच्चरित्र पाद १**

(ಮೇಲಿನ ಅವತರಣಿಕೆಯಿಂದ ಮಾರ್ತಂಡಭಟ್ಟರ ವಿವಾಹವು ೧೬ ನೆಯ ವರುಷವೇ ನೆರವೇರಿತೆಂದು ಸಿದ್ಧವಾಗುತ್ತದೆ.) ಅಂದಿನಿಂದ ಪ್ರಪಂಚದ ಭಾರವೆಲ್ಲ ಮಾರ್ತಂಡಭಟ್ಟರ ಮೇಲೆಯೇ ಬಿತ್ತು. ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ತಂದೆಯವರ ಇಚ್ಛೆಯಂತೆ, ಕುಲದೇವರಾದ ಮಾರ್ತಂಡಭೈರವನ ಅರ್ಚನಾದಿಗಳನ್ನು ಮಾಡಿಕೊಂಡು, ಅತಿಥಿಗಳಿಗೆ ಯಥಾಶಕ್ತಿ ಅನ್ನದಾನ ಮಾಡುತ್ತ, ತಮ್ಮಂದಿರ ಯೋಗಕ್ಷೇಮ ವಹಿಸಿಕೊಂಡು, ಮನೆತನವನ್ನು ಸುಸೂತ್ರವಾಗಿ ಸಾಗಿಸಿಕೊಂಡು ಹೋಗುವದು ತೊಂದರೆಯುಳ್ಳದ್ದಾದರೂ ಅತ್ಯಂತ ಪರಿಶ್ರಮದಿಂದ ಆ ಕಾರ್ಯ ನಿರ್ವಹಿಸಿದರು. ಕೆಲ ದಿನಗಳು ಹೀಗೆಯೇ ಉರುಳಿದವು.

### ತಿರುಮಲಭಟ್ಟರ ಅವಸಾನ

ತಿರುಮಲಭಟ್ಟರ ಪ್ರಕೃತಿಯು ದಿನೇದಿನೇ ಅಶಕ್ತವಾಗತೊಡಗಿತು. ಆರೋಗ್ಯವು ಸರಿಯಾಗಿ ಉಳಿಯಲಿಲ್ಲ. ಮಗನ ವಿದ್ಯಾಭ್ಯಾಸವು ಪೂರ್ಣವಾಗಲಿಲ್ಲವೆಂದು ಕೊರಗಹತ್ತಿದರು. ಮಾರ್ತಂಡಭಟ್ಟರ ವಿವಾಹವಾಗಿ ೧–೧॥ ವರುಷ ಕಳೆಯುವದರೊಳಗಾಗಿಯೇ ತಿರುಮಲಭಟ್ಟರು ವ್ಯಾಧಿಗ್ರಸ್ತರಾಗಿ ತೀರ ಅಶಕ್ತರಾದರು. ಯಾವ ಔಷಧದಿಂದಲೂ ವ್ಯಾಧಿಯು ಗುಣ

ಮುಖವಾಗಲಿಲ್ಲ, ಮಾರ್ತಂಡಭಟ್ಟರಿಗೆ ಇತ್ತ ಮನೆತನವನ್ನು ಸಾಗಿಸುವ ಭಾರ; ಅತ್ತ ತಂದೆಯವರ ಆರೋಗ್ಯದ ಬಗ್ಗೆ ಚಿಂತೆ; ತಮ್ಮಂದಿರ ಯೋಗ ಕ್ಷೇಮ, ಇವೆಲ್ಲವುಗಳಿಂದ ಅವರು ಚಿಂತಾಕುಲರಾದರು. ಕುಟುಂಬೀಯರೆಲ್ಲರು ಅಸಮಾಧಾನ ಹೊಂದಿದರು. ತಿರುಮಲಭಟ್ಟರು ತಮ್ಮ ಇಹಲೋಕ ಯಾತ್ರೆ ಯನ್ನು ಮುಗಿಸುವ ಸಮಯ ಬಂದಿತೆಂದು ತಿಳಿದು, ತಮ್ಮ ಅತ್ಯಂತ ಪ್ರೀತಿಯ ಹಿರಿಯ ಮಗನಾದ ಮಾರ್ತಂಡನನ್ನು ಕರೆದು, ತಮ್ಮ ಹಾಸಿಗೆಯ ಬಳಿಯಲ್ಲಿ ಕುಳ್ಳಿರಿಸಿಕೊಂಡು, ಮೈಮೇಲೆ ಮಮತೆಯಿಂದ ಕೈಯಾಡಿಸಿ, ಮೆಲುದನಿಯಲ್ಲಿ ನುಡಿದರು. "ವತ್ಸಾ, ಮಾರ್ತಂಡಾ, ನನ್ನ ಅವಸಾನ ಕಾಲವು ಸಮೀಪಿಸಿತು; ನಿನ್ನನ್ನು ಚತುರ್ವೇದಪಂಡಿತನನ್ನೂ, ಷಟ್‌ಶಾಸ್ತ್ರ ವಿಶಾರದನನ್ನೂ ಮಾಡಬೇಕೆಂಬ ನನ್ನ ಹಂಬಲವು ಫಲಿಸಲಿಲ್ಲ. ಪರಮ ಪವಿತ್ರವಾದ ಕಾಶೀ ಕ್ಷೇತ್ರಕ್ಕೆ ಕಳಿಸಿ ವಿದ್ವಾಂಸರ ಮೆಚ್ಚುಗೆಗೆ ನೀನು ಪಾತ್ರ ನಾಗಬೇಕೆಂಬ ನನ್ನ ಕನಸು ನನಸಾಗಲಿಲ್ಲ. ನಿನ್ನ ಹೆಸರಿಗೆ ತಕ್ಕಂತೆ (ಮಾರ್ತಂಡ ನಂತೆ–ಸೂರ್ಯನಂತೆ) ನೀನು ತೇಜಸ್ವಿಯಾಗಬೇಕೆಂಬ ನನ್ನ ಆಕಾಂಕ್ಷೆಯು ಈಡೇರಲಿಲ್ಲ. ಚಿಕ್ಕ ವಯಸ್ಸಿನಲ್ಲಿಯೇ ನಿನ್ನ ಮೇಲೆ ಮನೆತನದ ಭಾರವನ್ನೆಲ್ಲ ಹಾಕಿ ಬಿಟ್ಟೆ. ಏನು ಮಾಡಲಿ! ಸಧ್ಯದ ಕಾಲವು ಬಹಳ ಕಠಿಣವಿದೆ. ಸದಾ ಚಾರದಿಂದ ಜೀವನವನ್ನು ಸಾಗಿಸು; ನಿನ್ನ ತಮ್ಮಂದಿರ ಯೋಗಕ್ಷೇಮವನ್ನು ಚನ್ನಾಗಿ ನೋಡಿಕೊಳ್ಳು; ಮನೆತನದ ಸಂಪ್ರದಾಯದಂತೆ ಅತಿಥಿಗಳಿಗೆ ಆದ ರಾತಿಥ್ಯ ಮಾಡು; ಯಥಾಶಕ್ತಿ ಅನ್ನದಾನ ಮಾಡುತ್ತ ಜೀವನಯಾತ್ರೆಯನ್ನು ಸಾಗಿಸು. ಎಂತಹ ಪ್ರಸಂಗ ಬಂದರೂ ಸತ್ಯವನ್ನು ಬಿಡಬೇಡ. ಕುಲಸ್ವಾಮಿ ಮಾರ್ತಂಡಭೈರವನು ನಿನಗೆ ಕಲ್ಯಾಣ ಮಾಡುವನು" ಎಂದು ನಾಲ್ಕು ಸಮಾ ಧಾನದ ನುಡಿಗಳನ್ನು ಹೇಳಿದರು. ಕಿರಿಯ ಮಕ್ಕಳನ್ನೆಲ್ಲ ಕರೆದು ಅವರ ಮೈಮೇಲೆ ಕೈಯಾಡಿಸಿ, ತಲೆಯಮೇಲೆ ವರದ ಹಸ್ತವನ್ನಿಟ್ಟು; "ಕಂದರೇ, ನೀವು ಇನ್ನೂ ಚಿಕ್ಕವರು; ನಿಮ್ಮ ಯೋಗಕ್ಷೇಮವನ್ನು ಮಾರ್ತಂಡನು ಚನ್ನಾಗಿ ನೋಡಿಕೊಳ್ಳುವನು; "ज्येष्ठो भ्राता पितु: सम:।" ಹಿರಿಯ ಅಣ್ಣನು ತಂದೆಗೆ ಸಮಾನನು; ನೀವೆಲ್ಲರೂ ನಿಮ್ಮಣ್ಣನಿಗೆ ವಿಧೇಯರಾಗಿ ನಡೆದು ಕೊಳ್ಳಿರಿ; ನಿಮ್ಮೆಲ್ಲರಿಗೂ ಕಲ್ಯಾಣವಾಗುವದು" ಎಂದು ಹೇಳಿದರು.

ಪೂಜ್ಯ ತಂದೆಯವರ ಈ ನುಡಿಗಳನ್ನು ಕೇಳಿ ಎಲ್ಲರ ಕಂಣುಗಳಿಂದ

ದುಃಖಾಶ್ರುಗಳು ಉದುರಿದವು. ತಂದೆಯವರ ಮರಣೋನ್ಮುಖ ಸ್ಥಿತಿಯನ್ನು ಕಂಡು ದುಃಖಿತರಾದರು. "ಪಿತಾಜೀ ನಿಮ್ಮ ಮಾತುಗಳನ್ನು ನಾವು ಚಾಚೂ ತಪ್ಪದೇ ಪಾಲಿಸುವೆವು. ತಾವು ಏನೂ ಅನ್ಯಥಾ ಯೋಚನೆ ಮಾಡಬೇಡಿರಿ. ತಮ್ಮ ಆಶೀರ್ವಾದವು ಸದೈವ ನಮ್ಮನ್ನು ಕಾಯುವದು. ತಮ್ಮ ಅಮೃತಮಯ ನುಡಿಗಳೇ ನಮ್ಮ ಬಾಳಿನಲ್ಲಿ ರಕ್ಷಾಕವಚವಾಗಲಿ." ಎಂದು ತಂದೆಯವರಿಗೆ ಬೇಡಿಕೊಂಡರು. "ಶಿವೋಽಹಂ ಸೋಽಹಂ, ಸಚ್ಚಿದಾನಂದರೂಪೋಽಹಂ" ಎನ್ನುತ್ತ ತಿರುಮಲಭಟ್ಟರು, ಕೊನೆಯುಸಿರನ್ನು ಎಳೆದರು. ದುಃಖದ ವಾತಾವರಣವು ಕೇವಲ ಮನೆಯನ್ನಷ್ಟೇ ಅಲ್ಲದೇ ಇಡಿಯ ಊರನ್ನೇ ಆಕ್ರಮಿಸಿತು. ಮಾರ್ತಂಡಭಟ್ಟರು ವಿಧಾನಪೂರ್ವಕವಾಗಿ ತಂದೆಯವರ ಅಂತ್ಯೇಷ್ಟಿಸಂಸ್ಕಾರವನ್ನು ನೆರವೇರಿಸಿ, ಅವರ ಆದೇಶದಂತೆ ಸ್ನಾನ, ಸಂಧ್ಯಾ, ಜಪ–ತಪ, ಅನ್ನದಾನ, ಅತಿಥಿಸತ್ಕಾರಾದಿಗಳನ್ನು ಯಥಾಶಕ್ತಿ ನೆರವೇರಿಸುತ್ತ ಜೀವನವನ್ನು ಸಾಗಿಸಿದರು. ಜ್ಯೋತಿಷ್ಯ ವೃತ್ತಿಯಿಂದ ತಂದೆಯವರಂತೆ ಮನೆತನವನ್ನು ಸಾಗಿಸಹತ್ತಿದರು. ಪಂಚಾಂಗವನ್ನು ಹೇಳಿ ರೈತರಿಂದ ಧನಧಾನ್ಯ ಸ್ವೀಕಾರ ಮಾಡಿ ಪ್ರಪಂಚವನ್ನು ಸಾಗಿಸಹತ್ತಿದರು. ಉಚ್ಚಶಾಸ್ತ್ರಶಿಕ್ಷಣದ ಲಾಲಸೆಯು ದಿನೇದಿನೇ ಬೆಳೆಯತೊಡಗಿತು. ಆದರೆ ಆಗ್ಗ ಕ್ರಾಂತಿಯ ಸಮಯವಿದ್ದು ಎಲ್ಲೆಡೆಯಲ್ಲಿ ಅರಾಜಕತೆ ಇತ್ತು. ಎಲ್ಲಿ ನೋಡಿದಲ್ಲಿ ಧರ್ಮದ ಮೇಲೆ ಆಘಾತ; ದೀನದಲಿತರ ಗೋಳು ಕೇಳುವವರಿಲ್ಲ. ನಿತ್ಯವೂ ಗೋಮಾತೆಯ ಕೊಲೆಯಾಗುತ್ತಿತ್ತು. ಸಜ್ಜನರು ಕಂಬನಿಗರೆಯುತ್ತ ಪರಮಾತ್ಮನ ಧ್ಯಾನದಲ್ಲಿ ನಿರತರಾಗಿದ್ದರು. ೧೭೦೭ ಮಾರ್ಚ ೩ನೇ ತಾರೀಖಿಗೆ ಔರಂಗಜೇಬನ ಮರಣದ ನಂತರ ಅವನ ಮಕ್ಕಳು ರಾಜ್ಯದ ಪೀಠಕ್ಕಾಗಿ ತಮ್ಮ ತಮ್ಮಲ್ಲಿ ಬಡಿದಾಡಹತ್ತಿದರು. ಮುಂದೆ ಬಲಿಷ್ಠರಾಜರ ಅಭಾವವಾಯಿತು.

"No Sooner had he (Aurangjeb) breathed his last than his three sons entered into bitter fartricidal quarrels for the posession of the throne of Delhi"

Ad. Hist of India. Page 527

ಬಲಿಷ್ಠ ರಾಜರ ಅಭಾವದ ಮೂಲಕ ಎಲ್ಲೆಡೆ ಅರಾಜಕತೆ ಪ್ರಾರಂಭವಾಯಿತು. ಅಬಲೆಯರ ಅಪಹರಣ, ಮಾನಭಂಗ, ವಿಚಿತ್ರ ಹಿಂಸೆಗಳು

ನಡೆಯುಹತ್ತಿದವು. ಚಿಕ್ಕಪುಟ್ಟ ಸಂಸ್ಥಾನಿಕರು ಅಲ್ಲಲ್ಲಿ ದಂಗೆಯೆಬ್ಬಿಸಿದರು. ಈ ಎಲ್ಲ ಪರಿಸ್ಥಿತಿಯನ್ನು ಕಂಡು ಮಾರ್ತಂಡಭಟ್ಟರು ಮರಮರನೆ ಮರುಗಿದರು. ವಿಶ್ವರಕ್ಷಕನಾದ ಪರಮಾತ್ಮನ ಹೊರ್ತು ಸಜ್ಜನರನ್ನು ಸಂರಕ್ಷಿಸುವವರು ಬೇರೆ ಯಾರೂ ಇಲ್ಲವೆಂದು ಮನಗಂಡರು. "ದುಷ್ಟರನ್ನು ಸಂಹರಿಸಿ, ಶಿಷ್ಟರನ್ನು ಸಂರಕ್ಷಿಸಿ, ಧರ್ಮಸ್ಥಾಪನೆಯನ್ನು ಮಾಡಲು ಪರಮಾತ್ಮನು ಯುಗಯುಗದಲ್ಲಿ ಅವತರಿಸಿದ್ದಾನೆ. ಅವನ ಅನುಗ್ರಹವಿಲ್ಲದೇ ಇಂತಹ ದುರ್ಧರ ಪ್ರಸಂಗವು ದೂರಾಗಲು ಸಾಧ್ಯವಿಲ್ಲ. ಅವನ ಆರಾಧನೆಯನ್ನು ಮಾಡುವದೇ ಸೂಕ್ತ ಮಾರ್ಗ; ಅದೇ ಸಂಕಷ್ಟಗಳ ತಾರಣೋಪಾಯ." ಎಂದು ಮಾರ್ತಂಡಭಟ್ಟರು ವಿಚಾರ ಮಾಡತೊಡಗಿದರು. ಅಕಸ್ಮಾತ್ತಾಗಿ, ಕಾಕತಾಲೀಯನ್ಯಾಯದಂತೆ, (ಕಾಗೆ ಕೂಡುವದಕ್ಕೂ, ಟೊಂಗೆ ಮುರಿಯುವದಕ್ಕೂ ಸಮಾನ) ಮಾರ್ತಂಡಭಟ್ಟರ ಜೀವನದಲ್ಲಿ ಒಂದು ಘಟನೆ ಸಂಭವಿಸಿತು. ಮಾರ್ತಂಡಭಟ್ಟರು ನಿತ್ಯದ ಕ್ರಮದಂತೆ, ಒಬ್ಬ ರೈತನ ಮನೆಗೆ ಹೋಗಿ, ಪಂಚಾಂಗ ಹೇಳಿ, ರೈತನು ಕೊಡುವ ಜೋಳವನ್ನು ತೆಗೆದುಕೊಳ್ಳಬೇಕೆಂದು ತಮ್ಮ ಹಸಿಬೆಯನ್ನು ಹಿಡಿದರು. ಬುಟ್ಟಿಯಿಂದ ಜೋಳವನ್ನು ಹಸಿಬೆಯಲ್ಲಿ ಸುರುವುತ್ತಿರುವಾಗ್ಗೆ, ಕೆಲವು ರೊಟ್ಟಿಯ ತುಂಡುಗಳು, ಜೋಳದ ಕೂಡ ಹಸಿಬೆಯಲ್ಲಿ ಬಿದ್ದವು. ಅದನ್ನು ಕಂಡು ಮಾರ್ತಂಡಭಟ್ಟರು ವಿಚಾರಮಗ್ನರಾದರು. "ಈ ಜೋಳವನ್ನು ಸ್ವೀಕರಿಸಿ ಉಪಯೋಗ ಮಾಡಿದಲ್ಲಿ, ನಮ್ಮೆಲ್ಲರಿಗೆ ಅಧರ್ಮದಿಂದ ಪಾಪಸಂಚಯವಾಗುವದು; ಜೋಳವನ್ನು ಒಯ್ಯದಿದ್ದರೆ, ಪ್ರಪಂಚ ಸಾಗುವದು ದುಸ್ತರ. ಅತ್ತ ಹುಲಿ, ಇತ್ತ ಭಾಂವಿ, ಎಂಬಂತೆ ನನ್ನ ಸ್ಥಿತಿ ಆಗಿದೆ. ಏನು ಮಾಡಲಿ?" ಎಂದು ಸಂಶಯಕ್ಕೊಳಗಾದರು. ವಿಚಾರಗಳ ಘರ್ಷಣೆಯ ನಂತರ ಒಂದು ನಿಶ್ಚಯಕ್ಕೆ ಬಂದು ಮುಟ್ಟಿದರು. "ಪಂಚಭವತಿ, ಪಂಚನಭವತಿ" ಎಂಬ ವಾಕ್ಯದಂತೆ ಹುರುಳಿಲ್ಲದ ಈ ಜ್ಯೋತಿಃಶಾಸ್ತ್ರದಿಂದ ಹೊಟ್ಟೆ ಹೊರೆದುಕೊಂಡು, ದುರ್ದಾನಾದಿಗಳನ್ನು ಸ್ವೀಕರಿಸಿ, ನನ್ನನ್ನೂ ನನ್ನ ಮನೆತನವನ್ನೂ ಅಪವಿತ್ರ ಮಾಡುವದಕ್ಕಿಂತ ನಾನು ಇಲ್ಲಿಂದ ಕಾಲ್ತೆಗೆದು, ಪರಮೇಶ್ವರನ ಆರಾಧನೆಯನ್ನು ಮಾಡಿ ಆತ್ಮೋದ್ಧಾರ ಮತ್ತು ಲೋಕಕಲ್ಯಾಣ ಮಾಡುವದು ಶ್ರೇಯಸ್ಕರ. ತೀರ್ಥಯಾತ್ರಾದಿಗಳನ್ನು ಮಾಡಿಕೊಂಡು, ತಂದೆಯವರ ಇಚ್ಛೆಯಂತೆ ವಿದ್ಯಾರ್ಜನೆಯನ್ನಾದರೂ ಮಾಡಿ



ದೇವರ -
-ಹಿಪ್ಪರಗಿಯಲ್ಲಿಯ
ಮಾರ್ತಂಡಭೈರವನ
ದೇವಾಲಯ



ದೇವರ-ಹಿಪ್ಪರಿಗಿಯಲ್ಲಿಯ ರಾವುತರಾಯನ ಮೂರ್ತಿ, ಪಲ್ಲಕ್ಕಿ.



ಆಕಾಶ ಚಿದಂಬರ
ದೇವಾಲಯ ಹಾಗೂ
ಶಿವಗಂಗಾ ತೀರ್ಥ.



ಕಾಶೀ ಕ್ಷೇತ್ರದಲ್ಲಿ, ಮಣಿಕರ್ಣಿಕಾ ಘಾಟ.





ಕ್ಷೇತ್ರ ಕೆಂಗೇರಿಯಲ್ಲಿಯ, ಚಿದಂಬರ ದೇವಾಲಯದ
ಎದುರಿಗಿರುವ, ದತ್ತಪಾದುಕಾ ಮಂಟಪ.

ಕೊಂಡರೆ ನನ್ನ ತಂದೆಯುವರ ಆತ್ಮಕ್ಕೆ ಶಾಂತಿಯು ಸಿಗುವದರಲ್ಲಿ ಸಂಶಯ ವಿಲ್ಲಾ. ನನ್ನ ಪ್ರಪಂಚದ ಭಾರವನ್ನು ವಿಶ್ವಸಂರಕ್ಷಕನಾದ ಪರಮಾತ್ಮನ ಮೇಲೆ ಹಾಕಿ, ನಾನು ಸಪ್ತ ಪವಿತ್ರ ಪುರಿಗಳಲ್ಲಿ ಒಂದಾದ ಕಾಶೀ ಕ್ಷೇತ್ರಕ್ಕೆ ಹೋಗುವದೇ ಲೇಸೆಂದು ಭಾವಿಸಿ, ಮೊದಲು ತಮ್ಮ ಕುಲಸ್ವಾಮಿಯಾದ ಮಾರ್ತಂಡ ಭೈರವನ ದರ್ಶನವನ್ನು ಮಾಡಿಕೊಂಡು, ಮುಂದೆ ವಾರಾಣಸೀ (ಕಾಶಿಯು) ಕ್ಷೇತ್ರದ ದಾರಿಯನ್ನು ಹಿಡಿಯಬೇಕೆಂದು ನಿಶ್ಚಯಿಸಿ, ಯಾರಿಗೂ ತಿಳಿಯದಂತೆ, ಹಸಿಬೆಯನ್ನು ರೈತನ ಮನೆಯಲ್ಲಿಯೇ ಬಿಟ್ಟು ಕುಲದೇವರಾದ ಮಾರ್ತಂಡಭೈರವನ ಸ್ಥಾನವಾದ "ದೇವರಹಿಪ್ಪರಿಗಿ" ಕ್ಷೇತ್ರಕ್ಕೆ ಬಂದರು.

## ಹಿಪ್ಪರಿಗೆಯಲ್ಲಿ ಮಾರ್ತಂಡಭೈರವನ ಪೂಜೆ ಹಾಗೂ ಮುಂದೆ ಪಂಢರಪುರಕ್ಕೆ ಪ್ರಯಾಣ

ಹಿಪ್ಪರಿಗಿ (ದೇವರಹಿಪ್ಪರಿಗಿ) ಕ್ಷೇತ್ರವು ವಿಜಾಪೂರ ಜಿಲ್ಹೆಯಲ್ಲಿದ್ದು ವಿಜಾಪೂರದಿಂದ ನಾಲ್ವತ್ತು ಕಿಲೋಮೀಟರ ಅಂತರದಲ್ಲಿ ಇದೆ. ಊರಿನಿಂದ ೨ ಫರ್ಲಾಂಗುಗಳ ಅಂತರದ ಮೇಲೆ ಶ್ರೀ ಮಾರ್ತಂಡಭೈರವನ ದೇವಾಲಯ ಏದೆ. ಕಟ್ಟಡವು ಕಲ್ಲಿನದಿದ್ದು, ಶಿಖರದ ಮೇಲೆ ಸುಂದರವಾದ ಕೆತ್ತ-ನೆಯ ಕೆಲಸವಿದೆ. ಭವ್ಯವಾದ ಮಹಾದ್ವಾರವಿದೆ. ಗರ್ಭಗುಡಿಯ ಬಳಿಯಲ್ಲಿಯೇ ಮಾರ್ತಂಡಭೈರವನ ಉತ್ಸವ ಮೂರ್ತಿಯಾದ ರಾವುತರಾಯನು (ಮೈಲಾರನು) ಕೂಡುವ ಕಟ್ಟೆ ಇದೆ. ಗರ್ಭಗುಡಿಯು ಬಹು ಭದ್ರವಾಗಿದೆ. ಶಿಖರವು ಸುಂದರ ಕೆತ್ತನೆಯಿಂದ ಶೋಭಿಸುತ್ತದೆ. ಸುತ್ತಲೂ ಕಲ್ಲಿನ ಆವರಣ ಗೋಡೆಯಿದ್ದು, ಒಳಗೆ ಯಾತ್ರಿಕರಿಗೆ ಇಳಿದುಕೊಳ್ಳಲು ಪೌಳಿಗಳು ಇವೆ. ಗುಡಿಯಲ್ಲಿ ಯಾವ ಮೂರ್ತಿಯಾಗಲೀ ಅಥವಾ ಲಿಂಗವಾಗಲೀ ಇಲ್ಲ. ಗರ್ಭ ಗುಡಿಯಲ್ಲಿ ಅಜಮಾಸು ೫ ಫೂಟಿನಷ್ಟು ಎತ್ತರವಾದ ಕಟ್ಟೆ ಇದೆ. ಅದರ ಮೇಲೆ ಒಂದು ಕಲ್ಲಿನ ಗೋಡೆ ಇದೆ. ಆ ಗೋಡೆಯ ಅಡಿಯಲ್ಲಿ ಮಧ್ಯದಲ್ಲಿ ಒಂದು ಸಣ ಖಿಂಡಿ ಇದೆ. ಆ ಖಿಂಡಿಯ ಎಡಕ್ಕೂ, ಬಲಕ್ಕೂ ೨ ಉರುಟು ಕಲ್ಲುಗಳಿವೆ. ಅವೆರಡೂ ಗಂಗಾ ಮತ್ತು ಮಹಾಲಸಾ ಎಂದು ಪೂಜಾರಿಯೂ ಮತ್ತು ಊರ ಜನರೂ ಹೇಳುತ್ತಾರೆ, ಮಧ್ಯದ ಖಿಂಡಿಯಮೇಲೆಯೇ ಪೂಜೆ, ಅಭಿಷೇಕಾದಿಗಳನ್ನು ಮಾಡುವ ಪರಿಪಾಠವಿದೆ.

ಗುಡಿಯ ಬಳಿಯಲ್ಲಿ ಒಂದು ಸಣ್ಣ ಭಾಂವಿ ಇದೆ. ಇದರಲ್ಲಿಯ ನೀರು ಬಹಳ ರುಚಿ ಇದೆ. ನೀರಿನ ಮೇಲೆ ತುಪ್ಪದಂತಹ ಒಂದು ಶುಭ್ರ ದ್ರವ ಪದಾರ್ಥವು ಸದೈವ ತೇಲುತ್ತದೆ. ಬೇಸಿಗೆಯಲ್ಲಿ ಊರಲ್ಲಿಯ ಯಾವತ್ತೂ ಭಾಂವಿಗಳ ನೀರು ಬತ್ತಿದರೂ ಈ ಭಾಂವಿಯು ಬತ್ತುವದಿಲ್ಲ. ಊರಲ್ಲಿ ನೀರಿಲ್ಲದಾಗ್ಗೆ ಊರವರೆಲ್ಲರೂ ಇದೇ ಭಾಂವಿಯ ನೀರನ್ನು ಉಪಯೋಗಿಸಿದರೂ, ಭಾಂವಿಯು ಬರಿದಾಗುವದಿಲ್ಲ. ಮೊದಲು ಈ ಸ್ಥಾನದಲ್ಲಿ ಮಾರ್ತಂಡ ಭೈರವನ ನಿರ್ಮಾಲ್ಯವನ್ನು ಚಲ್ಲುತ್ತಿದ್ದರಂತೆ. ಮುಂದೆ ಅಲ್ಲಿಯೇ ಭಾಂವಿಯನ್ನು ಅಗಿಸಿದಮೇಲೆ ಸಮೃದ್ಧವಾದ ನೀರು ಬಿದ್ದಿದೆಯಂತೆ.

ಈ ದೇವಾಲಯವು ಜಾಗೃತ ಸ್ಥಾನವಾಗಿದ್ದು ಭಾವಿಕರನೇಕರು ಭಕ್ತಿಯಿಂದ ಈ ದೇವರಿಗೆ ನಡೆದುಕೊಳ್ಳುತ್ತಾರೆ. ಇಲ್ಲಿ ನಿತ್ಯ ಪೂಜೆಯಾಗುತ್ತಲಿದ್ದು ಪ್ರತಿ ರವಿವಾರ ರುದ್ರಾಭಿಷೇಕವಾಗುತ್ತದೆ. ಮಾರ್ಗಶೀರ್ಷ ಶುದ್ಧ ಪ್ರತಿಪದೆಯಿಂದ ಷಷ್ಠಿಯವರೆಗೆ ಮಾರ್ತಂಡಭೈರವನ ನವರಾತ್ರೋತ್ಸವವು, ಒಳ್ಳೆ ವೈಭವದಿಂದ ಜರಗುವದು. ಈ ಉತ್ಸವವನ್ನು ಹಿಪ್ಪರಿಗಿಯ ಗು. ಮ. ನಾಡಗೌಡರು ಸಧ್ಯ ಮಾಡುತ್ತಾರೆ. ಶ್ರೀ ಚಿದಂಬರ ಮಹಾಸ್ವಾಮಿಗಳು ಈ ನಾಡಗೌಡರ ಆಗಿನ ಮೂಲ ಮನೆತನದವರಿಗೆ ಉತ್ಸವವನ್ನು ಮಾಡಬೇಕೆಂದು ಸನದು ಹಾಕಿ ಕೊಟ್ಟಿದ್ದಾರಂತೆ. ಅದರಂತೆ ಈಗ ಐದು ತಲೆಮಾರುಗಳಿಂದ ಈ ನಾಡಗೌಡರ ಮನೆತನದವರೇ ಈ ಉತ್ಸವವನ್ನು ಮಾಡುತ್ತ ಬಂದಿದ್ದಾರೆ.

ಉತ್ಸವ ಮೂರ್ತಿಯಾದ ರಾವುತರಾಯನ ಗುಡಿಯು ಊರಲ್ಲಿಯೇ ಇದೆ. ಮೂರ್ತಿ ಬಹಳ ಸುಂದರವಿದೆ. ಉತ್ಸವದಲ್ಲಿ ಈ ಮೂರ್ತಿಯನ್ನು ಒಂದು ಆಳು ಎತ್ತರವಾದ ಸಲಕ್ಷಣ ಕುದುರೆಯ ಮೇಲೆ ಕೂಡ್ರಿಸಿ ಮಂಗಲ ವಾದ್ಯ ಸಮೇತವಾಗಿ, ಮಾರ್ತಂಡಭೈರವನ ದೇವಾಲಯಕ್ಕೆ ಕರೆದುಕೊಂಡು ಹೋಗುತ್ತಾರೆ. ಡೊಳ್ಳು, ನಗಾರಿ, ಬಜಂತ್ರಿ, ಡಮರು, ತಾಳ, ಝಾಗಟೀ ಮೊದಲಾದ ವಾದ್ಯಗಳು ಮೊಳಗುತ್ತವೆ. ವಗ್ಗರು, ಭಾಂಡಾರಿಗಳು, ಪಲ್ಲಕ್ಕಿ ಹೊರುವವರು, ದೇಸಾಯಿ, ದೇಶಪಾಂಡೆ, ನಾಡಗೌಡ ಮೊದಲಾದವರು, ಕುಲಕರ್ಣಿ, ಪಾಟೀಲ ಮುಂತಾದ ಊರ ಪ್ರಮುಖರು, ವಾಲೀಕಾರರು, ತಳವಾರರು–ಎಲ್ಲರೂ ಈ ಉತ್ಸವದಲ್ಲಿ ಭಾಗವಹಿಸುತ್ತಾರೆ. ರಾವುತರಾಯನು

ಹೊರಟನೆಂದರೆ, ಮನೆಮನೆಗೂ ಸುವಾಸಿನಿಯರು ತುಂಬಿದ ಕಲಶಗಳನ್ನು ಹೊತ್ತುಕೊಂಡು, ಕೈಯಲ್ಲಿ ಆರತಿಯನ್ನು ಹಿಡಿದುಕೊಂಡು ಬಂದು, ರಾವುತ ರಾಯನಿಗೆ ಫಲ ಪುಷ್ಪಾದಿಗಳನ್ನು ಸಮರ್ಪಿಸುವರು. ಎಲ್ಲರೂ ತಮ್ಮ ತಮ್ಮ ಕಾರ್ಯವನ್ನು ಬಹುದಕ್ಷತೆಯಿಂದ ಮಾಡುವರು. ರಾವುತರಾಯನು ಹೊರಟ ನೆಂದರೆ ಒಂದು ದೊಡ್ಡ ಸರಂಜಾಮುವೇ ಹೊರಟಂತೆ ಆಗುತ್ತದೆ. ರಾವುತ ರಾಯನ ಪಲ್ಲಕ್ಕಿಯೂ ದೊಡ್ಡದಿದ್ದು ಬಹು ಸುಂದರವಾಗಿದೆ. ಛತ್ರಚಾಮರ ವಾಹಕರೂ ತಮ್ಮ ಸೇವೆ ಸಲ್ಲಿಸುತ್ತಾರೆ ಇಂತಹ ಸಡಗರದ ಉತ್ಸವವನ್ನು ಕಂಡು ಎಂತಹ ನಾಸ್ತಿಕನಲ್ಲಿಯೂ ಕೂಡ, ಮಾರ್ತಂಡಭೈರವನ ಬಗ್ಗೆ, ಶ್ರದ್ಧೆ, ಭಕ್ತಿ, ವಿಶ್ವಾಸಗಳು ಮೂಡಿ ಬರುವವು.

ಊರಲ್ಲಿ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ಈಶ್ವರದೇವಾಲಯ ವೊಂದು ಭವ್ಯ ಮತ್ತು ವಿಶಾಲವಾಗಿದೆ. ವ್ಯವಸ್ಥಾಪಕರು ಗುಡಿಯನ್ನು ಅಚ್ಚು-ಕಟ್ಟಾಗಿ ಇಟ್ಟಿದ್ದಾರೆ. ಹಿಪ್ಪರಿಗೆಗೆ ಬಂದವರು ಈ ಈಶ್ವರನ ದರ್ಶನ ವಿಲ್ಲದೆ ಹೋದರೆ ಯಾತ್ರೆಯ ಫಲ ಸಿಗುವದಿಲ್ಲವೆಂದು ಹೇಳುತ್ತಾರೆ. ಊರು ದೊಡ್ಡದಿದ್ದು, ಅಂಚೆ, ಸಾರಿಗೆವಾಹನ, ಪಂಚಾಯತಿ, ಹಾಯಸ್ಕೂಲು ವಗೈರೆ ಎಲ್ಲ ಸೌಕರ್ಯಗಳೂ ಇವೆ. ಊರಲ್ಲಿ ವಿದ್ಯುದ್ದೀಪಗಳಿದ್ದು ಕುಡಿಯುವ ನೀರಿನಭಾವಿಗಳೂ ಅನೇಕ ಇವೆ. ಇಲ್ಲಿ ಮಾರ್ತಂಡಭಟ್ಟರು ಗಾಯತ್ರಿಪುರಶ್ಚರಣ ಮತ್ತು ೧ ಕೋಟಿ ಶಿವಪಂಚಾಕ್ಷರಿ ಜಪ ಮಾಡಿದ ಉಲ್ಲೇಖವಿದೆ. ಅಲ್ಲದೇ ಶ್ರೀ ಚಿದಂಬರ ಮಹಾಸ್ವಾಮಿಗಳೂ ಕೂಡಾ ಸಪರಿವಾರ ಯಾತ್ರೆಯನ್ನು ಮಾಡಿದ ಉಲ್ಲೇಖವೂ ಇದೆ. ಮಹಾಸ್ವಾಮಿಗಳ ಯಾತ್ರಾ ಸಮಯದಲ್ಲಿ ರಾಮಯೋಗಿಯ ತಲೆಯ ಮೇಲೆ ಕಲ್ಲು ಬಿದ್ದು ಮೃತನಾದಾಗ್ಗೆ, ಮಾರ್ತಂಡ ಭೈರವನ ಭಂಡಾರವನ್ನು ಹಚ್ಚಿ ಸಜೀವ ಮಾಡಿದ ಪವಿತ್ರಸ್ಥಾನವು ಇದು. ಮಾರ್ತಂಡ ಭಟ್ಟರಂತೂ ತಮ್ಮ ಜೀವನದಲ್ಲಿ ಅನೇಕಸಲ ಇಲ್ಲಿ ತಪಶ್ಚರ್ಯ ಮಾಡಿದ್ದಾರೆ. ಈಗಲಾದರೂ ಶ್ರೀ ಚಿದಂಬರ ಸ್ವಾಮಿಗಳ ವಂಶಜರು ಯಾರಾ ದರೂ ಯಾತ್ರೆಯನ್ನು ಕೈಕೊಂಡರೆ, ರಾವುತರಾಯನನ್ನು ಎಬ್ಬಿಸಿ, ಉತ್ಸವ ವನ್ನು ವೈಭವದಿಂದ ಮಾಡಿ, ದೀಕ್ಷಿತರಿಗೆ ಯೋಗ್ಯ ಸನ್ಮಾನ ಮಾಡುತ್ತಾರೆ. ಹಿಂದೆ ಹೇಳಿದಂತೆ ಇಂತಹ ಪವಿತ್ರ ಕ್ಷೇತ್ರಕ್ಕೆ ಶ್ರೀ ಮಾರ್ತಂಡ ಭಟ್ಟರು ಕಾಲ್ನಡಿಗೆಯಿಂದ ಬಂದು ಮುಟ್ಟಿದರು. ಮಾರ್ತಂಡಭೈರವನ ಧೂಳಿದರ್ಶನ

ವನ್ನು ತಕ್ಕೊಂಡು ವಿಧ್ಯುಕ್ತವಾಗಿ ಮಾರ್ತಂಡಭೈರವನನ್ನು ಪೂಜಿಸಿ, ಮಲ್ಹಾರಿ ಕವಚ, ಸಹಸ್ರನಾಮ ಮಹಾತ್ಮ್ಯಾದಿಗಳನ್ನು ಪಾರಾಯಣ ಮಾಡಿ, ಭಕ್ತಿಯಿಂದ ಬೇಡಿಕೊಂಡರು.

**" श्री मल्लारे महादेव पाहि मां करुणाकर ।**
**सर्वसिद्धिप्रदाता त्वं श्रीमन्मार्तण्डभैरव ।।**
**निरंतरायं च निरंतरायं निरंतरायं कुरुमे महेश ।**
**निरंतरायं च निरंतरायं निरंतरायं कुरु मे प्रसादम् ।। "**

ಎಂದು ಪ್ರಾರ್ಥಿಸಿ,

" ದೀನ ದಲಿತರನ್ನು ಉದ್ಧರಿಸು; ಸಜ್ಜನರ ಸಂಕಟಗಳನ್ನು ಪರಿಹರಿಸು; ನನ್ನ ವಿದ್ಯಾರ್ಜನೆಯ ಕಾರ್ಯದಲ್ಲಿ ನನಗೆ ಮಾರ್ಗದರ್ಶನ ಮಾಡು," ಎಂದು ಅನನ್ಯಭಾವದಿಂದ ಬೇಡಿಕೊಂಡರು.

**"काले वर्षतु पर्जन्यः पृथिवी सस्यशालिनी ।**
**देशोऽयं क्षोभरहितो ब्राह्मणाः सन्तु निर्भयाः ।।**
**सर्वेऽत्र सुखिनः सन्तु सर्वे सन्तु निरामयाः ।**
**सर्वे भद्राणि पश्यंतु मा कश्चित् दुःखमाप्नुयात् ।।**

" ಸಕಾಲಕ್ಕೆ ಮಳೆಯಾಗಲಿ; ಪೃಥ್ವಿಯು ಬೆಳೆಗಳಿಂದ ಸಮೃದ್ಧವಾಗಲಿ; ದೇಶವು ಕ್ಷೋಭರಹಿತವಾಗಲಿ; ಬ್ರಾಹ್ಮಣರು– (ಬ್ರಹ್ಮವಿದ್ಯೆಯನ್ನು ಬಲ್ಲವರು) ನಿರ್ಭಯವಾಗಿ ಬಾಳುವಂತೆ ಆಗಲಿ; ಎಲ್ಲರೂ ಸುಖಿಗಳಾಗಲಿ; ಎಲ್ಲರೂ ನಿರೋಗಿಗಳಾಗಲಿ; ಎಲ್ಲರಿಗೂ ಕಲ್ಯಾಣವಾಗಲಿ; ಯಾರಿಗೂ ದುಃಖವು ಬಾರದಿರಲಿ" ಎಂದು ಪ್ರಾರ್ಥಿಸಿ, ಮಾರ್ತಂಡಭೈರವನ ಚರಣಕಮಲಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅಲ್ಲಿಂದ ಪಂಢರಪುರಕ್ಕೆ ಹೊರಟರು. (ಇ.ಸ.೧೯೨೬ರಲ್ಲಿ.)

## ಪಂಢರಪುರಕ್ಕೆ ಪ್ರಯಾಣ

ಮಾರ್ತಂಡಭಟ್ಟರು ಕೆಲದಿನ ಓಪ್ಪರಿಗೆಯಲ್ಲಿದ್ದು ಮಾರ್ತಂಡಭೈರವನ ಆರಾಧನೆ ಮಾಡಿಕೊಂಡು, ಅಲ್ಲಿಂದ ಪಾಂಡುರಂಗನ ಪರಮ ಪವಿತ್ರ ಕ್ಷೇತ್ರ

ವಾದ, ಮುಕ್ತಿದಾಯಕವಾದ ಪಂಢರಪುರಕ್ಕೆ ಬಂದರು. ಅಲ್ಲಿ ವಿಠ್ಠಲನನ್ನು ವಿಧ್ಯುಕ್ತವಾಗಿ ಪೂಜಿಸಿ, ನಿತ್ಯ ಪಾಂಡುರಂಗನ ಭಜನೆಯಲ್ಲಿ ಕಾಲ ಕಳೆಯುಹತ್ತಿದರು. ಸಂತ ಮಂಡಲಿಯ ತಾಳ, ವೀಣಾ, ಮೃದಂಗಗಳ ಮಧುರ ನಾದದಲ್ಲಿ ತೇಲಿ ಬರುವ ಅಭಂಗಗಳ ಸವಿಯನ್ನು ಉಂಡು ಸಂತುಷ್ಟರಾದರು. ಭಾಗೀ–ರಥಿ ಸಮಾನವಾದ ಪವಿತ್ರ ಚಂದ್ರಭಾಗಾ ನದಿಯಲ್ಲಿ ಸ್ನಾನ ಮಾಡಿ, ಆಹ್ನಿಕಾದಿಗಳನ್ನು ತೀರಿಸಿಕೊಂಡು, ಪಾಂಡುರಂಗನ ನಾಮಸಂಕೀರ್ತನೆಯಲ್ಲಿ ಕಾಲ ಕಳೆಯುಹತ್ತಿದರು.

## ವಾರಣಾಸೀ (ಕಾಶೀ) ಕ್ಷೇತ್ರಕ್ಕೆ ಪ್ರಯಾಣ

ಪಂಢರಪುರದಲ್ಲಿ ಕೆಲದಿನ ಇದ್ದು ವಿದ್ಯಾರ್ಜನೆಗೆ ಯೋಗ್ಯ ಗುರುಗಳ ಶೋಧಕ್ಕಾಗಿ, ಅಲ್ಲಿಂದ ಮೋಕ್ಷದಾಯಕವಾದ ಸಪ್ತಪುರಿಗಳಲ್ಲಿ ಒಂದಾದ ಕಾಶೀ ಕ್ಷೇತ್ರಕ್ಕೆ ಹೊರಟರು.

**"ಆಯೋಧ್ಯಾ ಮಥುರಾ ಮಾಯಾ ಕಾಶೀ**
**ಕಾಂಚಿರವಂತಿಕಾ ।**
**ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಕಾಃ ॥"**

ಎಂದು ಕಾಶಿಯ ವರ್ಣನೆಯನ್ನು ಮಾಡಲಾಗಿದೆ. ಮಾರ್ತಂಡಭಟ್ಟರು ಕಾಶಿಗೆ ಹೊರಟಾಗ್ಗೆ ಅವರ ವಯಸ್ಸು ಹದಿನೆಂಟು ಇತ್ತು.

**"ಅಷ್ಟಾದಶವಯಸ್ಕೋಽಸೌ ಗತ್ವಾ ವಾರಾಣಸೀಂ ಪುರೀಂ।**
**ಸ್ವಪ್ರಕಾಶಯತೀಶಾನಂ ಸಮುಪಾಸ್ಯನ್ನುವಾಸಹ ॥"**
**ಶ್ರೀ ಸಾಂಬದೀ, ಸಂ. ಚರಿತ್ರ**

ವಾಹನ ಸೌಕರ್ಯಗಳು ಇಲ್ಲದ್ದರಿಂದ ಅನೇಕ ದಿನಗಳವರೆಗೆ ಕಾಲ್ನಡಿಗೆಯಿಂದಲೇ ಮಾರ್ಗಕ್ರಮಣ ಮಾಡುತ್ತ ಚಳಿ, ಬಿಸಿಲುಗಳನ್ನು ಲೆಕ್ಕಿಸದೆ, ಅಡೆತಡೆಗಳಿಗೆ ಹೆದರದೆ, ವಿದ್ಯಾರ್ಜನೆಯ ಹೆಗ್ಗುರಿಯನ್ನು ಮುಂದಿಟ್ಟು, ಕೊಂಡು, ಕಾಶೀ ಕ್ಷೇತ್ರಕ್ಕೆ ಬಂದು ತಲುಪಿದರು. ಭಾರತೀಯರಿಗೆ ಕಾಶೀ ರಾಮೇಶ್ವರಗಳಷ್ಟು ಪವಿತ್ರವಾದ ಬೇರೆ ಕ್ಷೇತ್ರಗಳಿಲ್ಲ. ಇಂತಹ ಕಾಶಿಯನ್ನು ತಲುಪಿದ ಕೂಡಲೇ ಮಾರ್ತಂಡಭಟ್ಟರಿಗೆ ಹರ್ಷದಿಂದ ರೋಮಾಂಚನ ವಾಯಿತು. ನೇರವಾಗಿ ವಿಶ್ವೇಶ್ವರನ ಧೂಲಿ–ದರ್ಶನ ಮಾಡಿಕೊಂಡು, ಭಾಗೀ

ರಥಿಯಲ್ಲಿ ಸ್ನಾನ ಮಾಡಿ, ಆಹ್ನಿಕವನ್ನು ತೀರಿಸಿಕೊಂಡು, ಪುನಃ ವಿಶ್ವೇಶ್ವರನ ದರ್ಶನ ಮಾಡಿಕೊಂಡರು. ಊರಲ್ಲಿ ಮಧುಕರಿಯನ್ನು ಮಾಡಿಕೊಂಡು ಬಂದು ವಿಶ್ವೇಶ್ವರನ ಆರಾಧನೆಯನ್ನು ಮಾಡುತ್ತ ಇರಹತ್ತಿದರು. ಇವರಂತೆಯೇ ವಿದ್ಯಾರ್ಜನೆಗೆ ಮತ್ತು ಬ್ರಹ್ಮಜ್ಞಾನಪ್ರಾಪ್ತಿಗಾಗಿ ಬಂದ ಅನಂತಪುರದ ಅನಂತ ಶಾಸ್ತ್ರಿಗಳ ಭೆಟ್ಟಿಯಾಯಿತು.

(ಇದೇ ಅನಂತಶಾಸ್ತ್ರಿಗಳು ಮುಂದೆ ಸನ್ಯಾಸವನ್ನು ಸ್ವೀಕರಿಸಿ, ಕೃಷ್ಣೇಂದ್ರ ಸ್ವಾಮಿಗಳೆಂದು ಪ್ರಸಿದ್ಧರಾಗಿ, ಅನೇಕ ಲೀಲೆಗಳನ್ನು ಮಾಡಿ ತೋರಿಸಿದರು. ಇವರ ಸಮಾಧಿ ಹಳೇಹುಬ್ಬಳ್ಳಿಯಲ್ಲಿ ಇದೆ. ಈಗಲೂ ಪ್ರತಿವರುಷ ಪುಣ್ಯ ತಿಥಿಯ ದಿವಸ ಆರಾಧನಾ ಮಹೋತ್ಸವವು ವಿಜೃಂಭಣೆಯಿಂದ ಜರಗುವದು. ಇವರು ಶಕೆ ೧೭೭೭, ಕಾರ್ತಿಕ ಶುದ್ಧ ತ್ರಯೋದಶಿಯ ದಿನ ವೃಂದಾವನಸ್ಥ ರಾದರು ಈ ಮಾಹಿತಿಯು "ಶ್ರೀ ಕೃಷ್ಣೇಂದ್ರ ಗುರುಚರಿತೆ" ಎಂಬ ಗ್ರಂಥದಲ್ಲಿ ಇದೆ. ಇದನ್ನು ರಚಿಸಿದವರು ಹಣಮಂತ ರಾಮಚಂದ್ರ ದೇಸಾಯಿ, ಹಳೇ ಹುಬ್ಬಳ್ಳಿ ಅವರು.)

ಕಾಶಿಯಲ್ಲಿ ಮಾರ್ತಂಡಭಟ್ಟರೂ ಹಾಗೂ ಅನಂತಶಾಸ್ತ್ರಿಗಳೂ ಕೂಡಿ ಇದ್ದು ಮಧುಕರಿ ವೃತ್ತಿಯಿಂದ ಜೀವನ ಸಾಗಿಸುತ್ತಿರಲು, ಅಕಸ್ಮಾತ್ತಾಗಿ ಒಂದು ದಿನ ಮಣಿಕರ್ಣಿಕಾ ಘಾಟದ ಮೇಲೆ ಸ್ನಾನಕ್ಕೆ ಹೋದಾಗ್ಗೆ ಒಂದು ತೇಜಪುಂಜ ವ್ಯಕ್ತಿಯ ದರ್ಶನವಾಯಿತು. ಚಂದ್ರಮನನ್ನು ಕಂಡು ಚಕೋರ ಪಕ್ಷಿಗೆ, ಪಂಚಪಕ್ವಾನ್ನಗಳನ್ನು ಕಂಡು ಹಸಿದವನಿಗೆ, ಸಿಹಿಯಾದ ನೀರನ್ನು ಕಂಡು ನೀರಡಿಸಿದವನಿಗೆ, ಅಶ್ವಿನೀಕುಮಾರರನ್ನು ಕಂಡು ರೋಗಿಗೆ, ಧೇನು ವನ್ನು ಕಂಡು ಹಸುವಿಗೆ, ಮಾತೆಯನ್ನು ಕಂಡು ಮಗುವಿಗೆ, ಅಂಧಃಕಾರದಲ್ಲಿ ದೀಪವನ್ನು ಕಂಡು ಪಾಂಥನಿಗೆ ಆಗುವಷ್ಟು ಆನಂದ, ಆ ವ್ಯಕ್ತಿಯನ್ನು ಕಂಡು ಈರ್ವರಿಗೂ ಆಯಿತು. ಆ ತೇಜಸ್ವಿಯಾದ, ಪ್ರಶಾಂತ, ಗಂಭೀರವಾದ ಮೂರ್ತಿಯನ್ನು ಕಂಡು ಹಿರಿಹಿರಿ ಹಿಗ್ಗಿದರು. ಆ ವ್ಯಕ್ತಿಯ ಚರಣ ಕಮಲಗಳ ಮೇಲೆ ತಮ್ಮ ಮಸ್ತಕವನ್ನಿಟ್ಟು ಆನಂದಭಾಷ್ಪಗಳಿಂದ ಆ ವ್ಯಕ್ತಿಯ ಪಾದಗಳನ್ನು ತೊಳೆದರು. ಇದೇ ವ್ಯಕ್ತಿಯು "ಸ್ವಯಂಪ್ರಕಾಶ ಸ್ವಾಮಿಗಳು." ಪಂಡಿತಪ್ರಕಾಂಡರೂ, ಬ್ರಹ್ಮಜ್ಞಾನಿಗಳೂ, ಯೋಗಿರಾಜರೂ

ಆದ ಈ ಸ್ವಯಂಪ್ರಕಾಶ ಸ್ವಾಮಿಗಳು, ತಮ್ಮ ಎರಡೂ ಕೈಗಳನ್ನು ಅವರ ತಲೆಯಮೇಲಿಟ್ಟು, "ಶುಭಮಸ್ತು; ಕಲ್ಯಾಣಮಸ್ತು" ಎಂದು ಹರಸಿದರು. ಇಬ್ಬರೂ ಎದ್ದು, ಭಕ್ತಿಯಿಂದ ಕೈಜೋಡಿಸಿ,

"ಸ್ವಾಮಿಗಳೇ ನಮ್ಮನ್ನು ಉದ್ಧರಿಸಿರಿ; ನಾವು ವಿದ್ಯಾರ್ಜನೆಗಾಗಿ ಬಹು ದೂರದಿಂದ ಪ್ರವಾಸ ಮಾಡಿ ಬಂದಿದ್ದೇವೆ. ನಮಗೆ ತಮ್ಮ ಹೊರ್ತು ಬೇರೆ ಗತಿ ಇಲ್ಲಾ. ನಮ್ಮನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳಿರಿ" ಎಂದು ದೀನ ವಾಣಿಯಿಂದ ಬೇಡಿಕೊಂಡರು. ಸರಿ; ದಯಾಸಿಂಧುಗಳಾದ ಸದ್ಗುರು ಸ್ವಯಂ ಪ್ರಕಾಶ ಸ್ವಾಮಿಗಳು, "ತಥಾಸ್ತು" ಎಂದು ಆಶೀರ್ವದಿಸಿ, ಅವರನ್ನು ಶಿಷ್ಯ ರನ್ನಾಗಿ ಸ್ವೀಕರಿಸಿ, ಕೃಪಾದೃಷ್ಟಿಯಿಂದ ನೋಡಿ, ತಮ್ಮ ಆಶ್ರಮಕ್ಕೆ ಕರೆದು ಕೊಂಡು ಹೋದರು. ಅಂದಿನಿಂದಲೇ ಪಾಠಪ್ರವಚನಾದಿಗಳು ಪ್ರಾರಂಭ ವಾದವು.

**"ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ।**
**ಅಸತೋ ಮಾ ಸದ್ಗಮಯ।**
**ತಮಸೋಮಾ ಜ್ಯೋತಿರ್ಗಮಯ।**
**ಮೃತ್ಯೋರ್ಮಾ ಅಮೃತಂ ಗಮಯ॥"**

ಎಂದು ಗುರುಗಳನ್ನು ಬೇಡಿಕೊಂಡು, ಇಬ್ಬರೂ ಅಧ್ಯಯನ ಪ್ರಾರಂಭ ಮಾಡಿದರು. ಇಪ್ಪತ್ತು ವರುಷಗಳವರೆಗೆ, ನಿಶ್ಚಲ ಮತ್ತು ನಿರ್ಮಲ ಮನಸ್ಸಿ ನಿಂದ, ಸಕಲ ವೇದವೇದಾಂಗಗಳ, ಶಾಸ್ತ್ರಗಳ, ಪುರಾಣಗಳ, ಇತಿಹಾಸಗಳ, ಕಾವ್ಯಗಳ ಅಧ್ಯಯನ ಮಾಡಿದರು. ಶ್ರೀ ಮಚ್ಚರಿತ್ರಕಾರರಾದ ಸಖಾರಾಮ ತ್ರ್ಯಂಬಕ ಗರ್ದೆ ಅವರು ಈ ಶಿಷ್ಯದ್ವಯರು ಅಧ್ಯಯನ ಮಾಡಿದ ವಿಷಯಗಳ ಪಟ್ಟಿಯನ್ನು ಕೊಟ್ಟಿದ್ದಾರೆ.

**ಸ್ವಯಂ ಪ್ರಕಾಶನಾಮ ಥೋರ ಯತೀ।**
**ಶರಣ ತ್ಯಾ ಪ್ರತೀಮಲ್ಲಾರೀ ತೋ ॥೧॥**

**ತರ್ಕವ್ಯಾಕರಣ ಮೀಮಾಂಸಾ ವೇದಾಂತ।**
**ಜ್ಯೋತಿಷ ಸಿದ್ಧಾಂತ ಪಾತಂಜಲ ॥೨॥**

ಧರ್ಮಶಾಸ್ತ್ರ ಸಾಂಖ್ಯ ಮಂತ್ರಾವಲೋಕನ।
ತಾಂತ್ರಿಕಶೋಧನ ಉಪಾಸನಾ ॥ ೩ ॥
ಲಯಲಕ್ಷಮುದ್ರಾ ಜ್ಞಾನ ಧ್ಯಾನ ಯೋಗ।
ಆರ್ಯರಾಜಯೋಗ ಮನಾ ಆಣೀ ॥ ೪ ॥
ಶ್ರೌತಸರ್ವಸಾಂಗ ಶಾಸ್ತ್ರೇ ಛಾಂದಸ।
ಸಾಹಿತ್ಯ ಅಭ್ಯಾಸ ಪೂರ್ಣ ವಸೇ ॥ ೫ ॥
ಬಾರಾ ಅಬ್ದವಾಸ ಆನಂದಕಾನನೀ।
ಭೋಗಿತ ಉನ್ಮನೀ ಸಖಾರಾಮ ॥ ೬ ॥

ಅಭಂಗ ೧೦, ಸಖಾರಾಮ ಗರ್ದೆ

ಮೌಂಜೀನಂತರ ತಾತ ಲಗ್ನ ಕರಿ ತೆ,
ಅಬ್ದೀ ಚ ಸೋಳಾ ಯಯಾ।
ಶ್ರೀಮತ್ ಕಾಶಿಪುರೀಸ ಮಲ್ಲ ಅರಿ ತೋ ವಿದ್ಯೇಸಿ
ಸಾಧಾವಯಾ ॥
ಅಭ್ಯಾಸಾ ಕರಿ ಜಾವುನೀ ಮುನಿಕರೀ·ವರ್ಷೆ ಪಹಾ ವಿಂಶತೀ।
ವಿದ್ಯಾಭ್ಯಾಸ ಕರೀತ ಥೋರ ನಿಯಮೆ ಕಾಹೀ ಕಥೊ
ಸಂಗತೀ ॥

ಶ್ರೀಮಚ್ಚರಿತ್ರ ಸಾ. ೧, ಅ. ೪, ಶ್ಲೋ. ೧೨

ಮಾರ್ತಂಡಭಟ್ಟರು ಸ್ವಯಂಪ್ರಕಾಶ ಗುರುಗಳ ಬಳಿಯಲ್ಲಿ, ಶತಪಥ ಬ್ರಾಹ್ಮಣ, ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಗಳನ್ನು ಕಲಿತು ವೇದಪಾರಂಗತ ರಾದರು. ಧರ್ಮಶಾಸ್ತ್ರ, ಸಾಂಖ್ಯಶಾಸ್ತ್ರ, ಮಂತ್ರ. ತಂತ್ರ, ಲಯ, ಲಕ್ಷ, ಮುದ್ರಾ, ಜ್ಞಾನಯೋಗ, ರಾಜಯೋಗ, ಕರ್ಮಯೋಗ, ಶ್ರೌತಶಾಸ್ತ್ರ, ಸೋಮಾಂತ ಯಜ್ಞ ವಿಧಾನಗಳು, ಸಾಹಿತ್ಯ ಎಲ್ಲವನ್ನೂ ಇಪ್ಪತ್ತು ವರುಷ ಗಳವರೆಗೆ ಪರಿಶ್ರಮದಿಂದ ಹಸ್ತಗತ ಮಾಡಿಕೊಂಡರು. ಯಾವತ್ತೂ ಪ್ರಾಣಿ ಗಳಲ್ಲಿ ದಯಾಬುದ್ಧಿ ಮತ್ತು ಧರ್ಮಾಚರಣೆ ಇವರ ಹೃದಯದಲ್ಲಿ ವಾಸ ಮಾಡಿದ್ದವು. ಈ ವಿದ್ಯಾರ್ಜನೆಯಿಂದ, ಮಾರ್ತಂಡಭಟ್ಟರು ಹಾಗೂ ಅನಂತ ಶಾಸ್ತ್ರಿಗಳೂ (ಕೃಷ್ಣೇಂದ್ರ ಸ್ವಾಮಿಗಳು) ಕಾಶಿಯ ವಿದ್ವಾಂಸರಿಗೆ ಮಾನ್ಯರಾದರು. ಅವರಲ್ಲಿ ವಿದ್ಯಾಬಲ ಮತ್ತು ತಪೋಬಲಗಳ ಸುಮಧುರ ಸಂಗಮವಾಯಿತು.

ಸ್ವಯಂಪ್ರಕಾಶ ಸ್ವಾಮಿಗಳು ಅನೇಕ ಪ್ರಸಂಗಗಳಲ್ಲಿ, ಈ ಶಿಷ್ಯದ್ವಯರನ್ನು ಒರೆಗಲ್ಲಿಗೆ ಹಚ್ಚಿ, ಇವರ ನಿಷ್ಠೆ, ಪ್ರಾಮಾಣಿಕತನ, ಪ್ರತಿಭೆ, ವೇದಾಂತ ಜ್ಞಾನ ಲಾಲಸೆಯನ್ನು ಮನಗಂಡು, ಮಾನವನು ಸಾಧಿಸಬೇಕಾದ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪುರುಷಾರ್ಥಗಳು ಪ್ರಾಪ್ತವಾಗುವಂತೆ, ವಿದ್ಯಾದಾನ ಮಾಡಿ ಅನುಗ್ರಹಿಸಿದರು. ಗಾಡಕ್ಕೆ ಹಚ್ಚಿದ ರತ್ನದಂತೆ, ವಿದ್ಯಾ ಮತ್ತು ತಪಸ್ಸಿನ ತೇಜದಿಂದ ಮಾರ್ತಂಡಭಟ್ಟರು, ಸಕಲ ವಿದ್ವನ್ಮಂಡಲಿಯಲ್ಲಿ ವಿರಾಜಮಾನರಾದರು. ಶಿಕ್ಷಣವು ಮುಗಿದದ್ದನ್ನು ಕಂಡು, ಗುರುಗಳು ತಮ್ಮ ಇಬ್ಬರೂ ಶಿಷ್ಯರನ್ನು ಕರೆದು, ಹೇಳಿದರು.

"ಶಿಷ್ಯರೇ, ನಿಮ್ಮ ನಿಷ್ಠೆ ಮತ್ತು ತಪಸ್ಸನ್ನು ಕಂಡು ನಾನು ಸಂತುಷ್ಟನಾಗಿದ್ದೇನೆ. ನೀವಿನ್ನು ಸ್ವಸ್ಥಳಕ್ಕೆ ಹೋಗಿ, ವಿದ್ಯಾಪ್ರಸಾರ ಮಾಡಿ, ಧರ್ಮಾಚರಣೆಯಿಂದ ಜೀವನವನ್ನು ಸಾಗಿಸಿರಿ. "ಸತ್ಯಂ ವದ । ಧರ್ಮಂಚರ । ಸ್ವಾಧ್ಯಾಯಾನ್ಮಾಪ್ರಮದಃ । ಮಾತೃದೇವೋಭವ । ಪಿತೃದೇವೋಭವ । ಆಚಾರ್ಯದೇವೋಭವ ।" ಎಂದು ಉಪದೇಶಿಸಿದರು. "ಸತ್ಯವನ್ನು ನುಡಿಯಿರಿ; ಧರ್ಮವನ್ನು ಆಚರಿಸಿರಿ; ಅಧ್ಯಯನವನ್ನು ಮುಂದುವರಿಸಿರಿ; ತಾಯಿಯನ್ನು ದೇವರಂತೆ ಮನ್ನಿಸಿರಿ; ತಂದೆಯನ್ನು ದೇವರಂತೆ ಭಾವಿಸಿರಿ; ಗುರುಗಳನ್ನು ದೇವರಂತೆ ಗೌರವಿಸಿರಿ; ಅತಿಥಿಸತ್ಕಾರವನ್ನು ಮಾಡಿರಿ; ಅನ್ನದಾನವನ್ನು ಮಾಡಿರಿ; ಕುಲಪರಂಪರಾಗತವಾದ ವ್ರತ–ನಿಯಮಾದಿಗಳನ್ನು ಪಾಲಿಸಿರಿ; ಇಹಪರದಲ್ಲಿ ಸದ್ಗತಿಯನ್ನು ಪಡೆಯಿರಿ" ಎಂದು ಸಮಯೋಚಿತ ಮಾತುಗಳನ್ನು ಹೇಳಿದರು. ಆಗ್ಗೆ ಶಿಷ್ಯರಿಬ್ಬರೂ,

"ಗುರುಗಳೇ ನಮಗೆ ಸಕಲ ವಿದ್ಯೆಗಳನ್ನು ಕಲಿಸಿ ಅನುಗ್ರಹಿಸಿದ್ದೀರಿ. ಸ್ವಸ್ಥಳಕ್ಕೆ ಹೋಗಿ ನಾವು ಮಾಡುವದಾದರೂ ಏನು? ಸಕಲ ಪ್ರಪಂಚದ ತಿರುಳನ್ನೇ ನಮಗೆ ತಿಳಿಸಿ ಕೊಟ್ಟಿದ್ದೀರಿ. ನಮಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟು, ಅನುಗ್ರಹಿಸಿರಿ. ತಾವು ಇಲ್ಲಿಯೇ ವಿಶ್ವೇಶ್ವರನ ಸಾನ್ನಿಧ್ಯದಲ್ಲಿದ್ದು, ನಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳುವೆವು" ಎಂದು ವಿನಯದಿಂದ ಬೇಡಿಕೊಂಡರು. ಆಗ್ಗೆ ಗುರುಗಳು, ಮಾರ್ತಂಡಭಟ್ಟರನ್ನು ಕರೆದು, "ವತ್ಸಾ ಮಾರ್ತಂಡಾ, ನಿನಗೆ ಸನ್ಯಾಸದೀಕ್ಷೆಯನ್ನು ಕೊಡಲು ಸಾಧ್ಯವಿಲ್ಲ. ನೀನು ಗೃಹಸ್ಥಾಶ್ರಮಿಯಾಗಿಯೇ ಬಾಳಬೇಕು. ಅಗ್ನಿಹೋತ್ರಿಯಾಗಿ ಪರಮೇಶ್ವರನ

ಆರಾಧನೆಯನ್ನು ಮಾಡು. ಪರಧನ, ಪರಸ್ತ್ರೀ ಸ್ಪರ್ಶವೂ ಕೂಡ ಬೇಡ; ಪರ ನಿಂದೆಯನ್ನು ತ್ಯಜಿಸು; ವಿದ್ಯಾಮದದಿಂದ ವಾದ–ವಿವಾದವನ್ನು ಮಾಡ ಬೇಡ; ಅಹಂಕಾರ ಬೇಡ; ದುಷ್ಟ ಶಬ್ದಗಳನ್ನಾಡಬೇಡ; ದ್ವಿಜರನ್ನೂ, ಸುರ ರನ್ನೂ ಪೂಜಿಸು; ಅನಾಥರಲ್ಲಿ, ದೀನದಲಿತರಲ್ಲಿ ದಯತೋರು, ಶ್ರುತಿ-ಸ್ಮೃತಿಗೆ ಮಾನ್ಯವಾದ ರೀತಿಯಲ್ಲಿ ದಾನಗಳನ್ನು ಸ್ವೀಕರಿಸು; ಪರರ ಒಂದು ಕವಡಿಯನ್ನೂ ಕೂಡ ಮುಟ್ಟಬೇಡ; ಸ್ವಧರ್ಮ ಆಚರಣೆಯಿಂದ ಅದರ ಸವಿ ಫಲವನ್ನು ಉಣ್ಣು; ಪ್ರೇಮವು ವೃದ್ಧಿಯಾಗಲಿ; ಈ ನರಜನ್ಮವು ಸಿಗುವದು ದುರ್ಲಭ; ನಿನ್ನ ಜನ್ಮವನ್ನು ಸಾರ್ಥಕ ಮಾಡಿಕೊಳ್ಳು" ಎಂದು ಪುನಃ ಅಮೃತ ಸಮಾನವಾದ ಮಧುರ ನುಡಿಗಳಿಂದ ಉಪದೇಶಿಸಿ ಆಶೀರ್ವದಿಸಿದರು, ಮಾರ್ತಂಡಭಟ್ಟರು ಗುರುಗಳ ಆಜ್ಞೆಯನ್ನು ಶಿರಸಾ ವಹಿಸಿ, ಚಾಚೂ ತಪ್ಪದಂತೆ ಅವರ ಉಪದೇಶದಂತೆ ನಡೆದುಕೊಳ್ಳುವೆನೆಂದು ಹೇಳಿ, ಸಾಷ್ಟಾಂಗ ನಮಸ್ಕಾರ ಮಾಡಿ, ಗುರುಚರಣ ಧೂಲಿಯನ್ನು ಹಣೆಗೆ ತಿಲಕವನ್ನಾಗಿ ಇಟ್ಟುಕೊಂಡರು.

ಆನಂತರ ಸ್ವಯಂಪ್ರಕಾಶ ಸ್ವಾಮಿಗಳು, ಅನಂತಶಾಸ್ತ್ರಿಗಳನ್ನು ಕರೆದು, 'ನಿನ್ನ ಇಚ್ಛೆಯಂತೆ, ನಿನಗೆ ಸಂನ್ಯಾಸ ದೀಕ್ಷೆಯನ್ನು ಕೊಡುವೆನು; ಸ್ವೀಕರಿಸು" ಎಂದು ಹೇಳಿ, ಶುಭಮುಹೂರ್ತದಲ್ಲಿ ಅವರಿಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟರು. ಅಂದಿನಿಂದ ಅವರು "ಕೃಷ್ಣೇಂದ್ರ ಸ್ವಾಮಿ"ಗಳೆಂಬ ನಾಮದಿಂದ, ಸರ್ವಸಂಗ ಪರಿತ್ಯಾಗ ಮಾಡಿ, ಗುರುಗಳ ಆಜ್ಞೆಯ ಮೇರೆಗೆ, ಪುಷ್ಪಲತಾ ಪುರಕ್ಕೆ (ಹುಬ್ಬಳ್ಳಿ–ಹೂಬಳ್ಳಿ) ಬಂದು ವಾಸಿಸಿದರು. ಅಲ್ಲಿ ಅವರ ಕೀರ್ತಿ ದೂರದವರೆಗೂ ಹಬ್ಬಿ ಭಕ್ತವೃಂದವು ದಿನೇದಿನೇ ಬೆಳೆಯತೊಡಗಿತು. ಅಲ್ಲಿಯೇ ಮುಂದೆ, ಶಕೆ ೧೬೭೭ ರಾಕ್ಷಸನಾಮ ಸಂವತ್ಸರ, ಕಾರ್ತಿಕ ಶುದ್ಧ ತ್ರಯೋದಶಿ ದಿವಸ ವೃಂದಾವನಸ್ಥರಾದರು. ಇಂದಿಗೂ ಅವರ ವೃಂದಾವನವು ಹಳೇಹುಬ್ಬಳ್ಳಿಯಲ್ಲಿದ್ದು, ಪ್ರತಿವರುಷ ಪುಣ್ಯತಿಥಿಯ ದಿನ ಆರಾಧನಾ ಮಹೋತ್ಸವವು ಒಳ್ಳೆ ಭಕ್ತಿಯಿಂದ ಮತ್ತು ವಿಜೃಂಭಣೆಯಿಂದ ನೆರವೇರುವದು.

## ಮಾರ್ತಂಡಭಟ್ಟರು ವಿದ್ಯಾರ್ಜನೆಯ ನಂತರ ಪುನಃ ಗೋಠೆಗೆ ಬಂದರು.

ಮಾರ್ತಂಡಭಟ್ಟರು, ಗುರುಗಳ ಆಜ್ಞೆಯ ಮೇರೆಗೆ, ಸ್ವಗ್ರಾಮವಾದ ಗೋಠೆಗೆ ಹೊರಡಬೇಕೆಂದು ನಿಶ್ಚಯಿಸಿದರು. ತತ್ಪೂರ್ವದಲ್ಲಿ, ಸ್ವಯಂಪ್ರಕಾಶ

ಸ್ವಾಮಿಗಳ ನೇತೃತ್ವದಲ್ಲಿಯೇ, ಜ್ಯೋತಿಷ್ಟೋಮ ಯಜ್ಞವನ್ನು ಮಾಡಿ, "ದೀಕ್ಷಿತ" ಎಂಬ ಬಿರುದನ್ನು ಪಡೆದರು.

**"ಜ್ಯೋತಿಷ್ಟೋಮಾ ಕರುನಿ ಘೇವುನ ಯೇತ ತೋ ಗಾಂವಾ।**
**ಸಾಂಗಾವಾ ಅರ್ಥ ಕಿತೀ ದೀಕ್ಷೀತ ಮಲ್ಲಾರಿ**



**ನಿತ್ಯ ಜೀ ಗಾವಾ ॥"**

**ಶ್ರೀಮಚ್ಚರಿತ್ರ ಪಾ. ೧, ಅ. ೨೪**

ಕಾಶಿಯ ವಿದ್ವಾಂಸರೆಲ್ಲರೂ ಮಾರ್ತಂಡ ದೀಕ್ಷಿತರ ವಿದ್ಯಾಬಲ, ತಪೋಬಲ ಮತ್ತು ಬ್ರಹ್ಮತೇಜವನ್ನು ಕಂಡು ಮುಗ್ಧರಾದರು, ಯೋಗ್ಯ ರೀತಿಯಿಂದ ಅವರನ್ನು ಸತ್ಕರಿಸಿ, ಸ್ವಗ್ರಾಮಕ್ಕೆ ಹೊರಡಲನುವಾದ ಅವರನ್ನು ಒಳ್ಳೆ ಪ್ರೇಮದಿಂದ ಬೀಳ್ಕೊಟ್ಟರು. ಮಾರ್ತಂಡದೀಕ್ಷಿತರು ಸ್ವಯಂಪ್ರಕಾಶ ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಸಕಲ ವಿದ್ವನ್ಮಂಡಲಿಯ ನಿರೋಪ ತೆಗೆದುಕೊಂಡು, ವಿಶ್ವೇಶ್ವರನ ದರ್ಶನ ಪಡೆದು, ತಮ್ಮ ಊರಿಗೆ ಹೊರಟರು. ಅನೇಕ ದಿನಗಳವರೆಗೆ ಮಾರ್ಗಕ್ರಮಣ ಮಾಡಿ, ಗೋಕಿಯನ್ನು ತಲುಪಿದರು. ಅಕಸ್ಮಾತ್ತಾಗಿ ಬಂದ ತಮ್ಮ ಅಣ್ಣನನ್ನು ಕಂಡು, ಬಂಧುತ್ರಯರು ಹಿರಿಹಿರಿ ಹಿಗ್ಗಿದರು. ಕುಟುಂಬದ ಜನರಿಗೆಲ್ಲ ಪರಮಾನಂದವಾಯಿತು. ಮಾರ್ತಂಡದೀಕ್ಷಿತರ ತೇಜಸ್ಸನ್ನು ಕಂಡು ಊರ ಜನರೆಲ್ಲರೂ ಹರ್ಷಭರಿತರಾದರು. ಇಪ್ಪತ್ತು ವರುಷಗಳವರೆಗೆ ನೀರಸವಾದ ಅವರ ಜೀವನವು ಅಂದು ಪುನಃ ರಸಭರಿತವಾಯಿತು. ಬಂಧುಗಳು ಆನಂದಬಾಷ್ಪಗಳನ್ನು ಸುರಿಸಿದರು. ಬಂಧುಗಳನ್ನು ಮಾರ್ತಂಡದೀಕ್ಷಿತರು ಅಪ್ಪಿಕೊಂಡರು. ಅವರ ಮನೆತನವು ಮತ್ತೆ ಮೊದಲಿನಂತೆ, ವಿರಾಜಮಾನವಾಯಿತು. ಊರಜನರೆಲ್ಲರೂ ಮಾರ್ತಂಡದೀಕ್ಷಿತರ ದರ್ಶನ ಪಡೆದುಕೊಂಡು, ಪುನೀತರಾದರು. ಮಾರ್ತಂಡದೀಕ್ಷಿತರು ಎಲ್ಲರಿಗೂ ಸಮಯೋಚಿತ ಮಾರ್ಗದರ್ಶನ ಮಾಡುತ್ತ, ಅಗ್ನಿಹೋತ್ರವನ್ನು ಅತ್ಯಂತ ಭಕ್ತಿಯಿಂದ ನೆರವೇರಿಸುತ್ತ, ಧರ್ಮಾಚರಣೆಯಿಂದ ಕಾಲ ಕಳೆಯಹತ್ತಿದರು.

## ಗೋಕೀ ತ್ಯಾಗ ಹಾಗೂ ತಮ್ಮಂದಿರ ಯೋಗಕ್ಷೇಮ

ಗೋಕಿಯಲ್ಲಿ ಪರಂಪರಾಗತವಾಗಿ ಬಂದ ಆಸ್ತಿಯಿಂದ ಮನೆತನದ ಭಾರವನ್ನು ನಿರ್ವಹಿಸುವದು ಸಾಧ್ಯವಿಲ್ಲವೆಂದು ತಿಳಿದು, ಮಾರ್ತಂಡದೀಕ್ಷಿತರು,

ತಮ್ಮ ಮೂವರು ತಮ್ಮಂದಿರಲ್ಲಿ ಚಿಕ್ಕವರಾದ ಲಿಂಗಾಭಟ್ಟರನ್ನು ಗೋಠೆಯಲ್ಲಿಟ್ಟು, ಉಳಿದ ಇಬ್ಬರು ತಮ್ಮಂದಿರನ್ನು ಕರೆದುಕೊಂಡು, ಬೇರೆಕಡೆಗೆ ವಾಸಿಸಬೇಕೆಂದು ವಿಚಾರ ಮಾಡಿ, ಗೋಠೆಯನ್ನು ಬಿಟ್ಟುಹೋದರು. ಹೋಗುವಾಗ ಚಿಕ್ಕತಮ್ಮನನ್ನು ಕರೆದು,

"ತಮ್ಮಾ ಇಲ್ಲಿಯ ಆಸ್ತಿ ಚಿಕ್ಕದು; ಈ ಆಸ್ತಿಯಿಂದ ನಮ್ಮೆಲ್ಲರ ಉದರನಿರ್ವಾಹವು ಇಲ್ಲಿ ಆಗಲು ಸಾಧ್ಯವಿಲ್ಲ. ಆದ್ದರಿಂದ ನೀನು ಸಕುಟುಂಬನಾಗಿ ಇಲ್ಲಿಯೇ ಇದ್ದು, ಸದ್ಧರ್ಮದಿಂದ ನಿನ್ನ ಜೀವನವನ್ನು ಸಾಗಿಸು. ಹಿರಿಯರು ಹಾಕಿಕೊಟ್ಟ ಸಂಪ್ರದಾಯದಂತೆ, ಅತಿಥಿಸತ್ಕಾರವನ್ನು ಮಾಡುತ್ತ ನಿನ್ನ ಜನ್ಮದ ಸಾರ್ಥಕತೆಯನ್ನು ಸಾಧಿಸಿಕೊಳ್ಳು. ನಾನೆಲ್ಲಿದ್ದರೂ ನಿನ್ನ ಹಿತಚಿಂತನೆಯನ್ನು ಮಾಡುವೆನು. ಸತ್ಯವನ್ನು ಆಶ್ರಯಿಸಿದರೆ ಸಕಲ ಪುರುಷಾರ್ಥಗಳು ಸಾಧಿಸುವವು.

**"ಸತ್ಯೇನ ವಾಯುರ್ವಾತಿ ಸತ್ಯೇನ ತಪತೇ ರವಿಃ।**
**ಸತ್ಯೇನ ಧಾರ್ಯತೇ ಪೃಥ್ವೀ ಸತ್ಯೇ ಸರ್ವಂ ಪ್ರತಿಷ್ಠಿತಂ ॥"**

ಸತ್ಯದಿಂದಲೇ ವಾಯು ತನ್ನ ಕಾರ್ಯ ಮಾಡುತ್ತಾನೆ; ಸತ್ಯದ ಬಲದಿಂದಲೇ ಸೂರ್ಯನು ಬೆಳಗುತ್ತಾನೆ; ಸತ್ಯದಿಂದಲೇ ಪೃಥ್ವಿಯು ಸಂರಕ್ಷಿಸಲ್ಪಡುತ್ತದೆ; ಎಲ್ಲವೂ ಸತ್ಯವನ್ನೇ ಅವಲಂಬಿಸಿದೆ." ಎಂಬುವ ಉಕ್ತಿಯನ್ನು ಸದೈವ ಸ್ಮರಣೆಯಲ್ಲಿ ಇಟ್ಟುಕೊಳ್ಳು" ಎಂದು ಹೇಳಿ, ಮೈದಡವಿ, ಅವನನ್ನು ಆಶೀರ್ವದಿಸಿದರು. ಲಿಂಗಾಭಟ್ಟರು ಮಾರ್ತಂಡದೀಕ್ಷಿತರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಕಂಬನಿಗರೆಯುತ್ತ ನುಡಿದರು. "ಅಣ್ಣಾ, ನೀನು ನನಗೆ ತಂದೆಯ ಸಮಾನ; ನಿನ್ನ ನುಡಿಗಳನ್ನು ಶಿರಸಾಗ್ರಹಿಸಿದ್ದೇನೆ. ನಿನ್ನ ಆಶೀರ್ವಾದವೇ ನನ್ನ ಭವಿಷ್ಯ ಜೀವನದಲ್ಲಿ ರಕ್ಷಾಕವಚವಾಗಲಿ'' ಎಂದು ದುಃಖದಿಂದ ಬೀಳ್ಕೊಟ್ಟರು.

ಮಾರ್ತಂಡ ದೀಕ್ಷಿತರು, ಮಾರ್ಗಕ್ರಮಣ ಮಾಡುತ್ತ, ಸಮೀಪದಲ್ಲಿಯೇ ಇದ್ದ "ರಾಮತೀರ್ಥ" ಕ್ಕೆ (ಜಮಖಂಡಿಯ ಬಳಿಯಲ್ಲಿ) ಬಂದರು. ಅಲ್ಲಿ ಶ್ರೀ ರಾಮಲಿಂಗೇಶ್ವರನ ದರ್ಶನ ಮಾಡಿಕೊಂಡು, ಮುಂದೆ ಮುನವಳ್ಳಿಗೆ ಬಂದರು. ಅನಂತಭಟ್ಟರನ್ನು (ಎರಡನೇ ತಮ್ಮನನ್ನು) ಅಲ್ಲಿ ಇಟ್ಟು ಕೆಲ ದಿನ ಅಲ್ಲಿ ಇದ್ದು, ಊರ ಪ್ರತಿಷ್ಠಿತರ ಸಹಾಯದಿಂದ, ಅವರ ಜೀವನವು ಸರಿಯಾಗಿ ಸಾಗುವಂತೆ ಮಾಡಿದರು. ಈ ಮುನವಳ್ಳಿಯು ಒಂದು ಪವಿತ್ರ ಕ್ಷೇತ್ರ.

ಸಮೀಪದಲ್ಲಿಯೇ ಮಲಾಪಹಾರೀ (ಪಾಪಪ್ರಕ್ಷಾಲನೆಯನ್ನು ಮಾಡುವ) ನದಿಯು ಹರಿಯುತ್ತದೆ. ಮುನಿಪಲ್ಲಿ– (ಋಷಿಗಳ ಹಳ್ಳಿ) ಎಂಬುದು ಸಾರ್ಥಕ ನಾಮ. ಈಶ್ವರ, ವಿಷ್ಣು, ಗಣಪತಿ, ದತ್ತಾತ್ರಯ ಮೊದಲಾದ ದೇವಾಲಯ ಗಳೂ ಇಲ್ಲಿವೆ. ತೋಟಪಟ್ಟಿಗಳಿಂದ ಸಮೃದ್ಧವಾದ ಈ ಊರು ನಿಸರ್ಗ ಸೌಂದರ್ಯದ ಬೀಡಾಗಿದೆ. ಇತ್ತೀಚೆಗೆ ಇಲ್ಲಿ ಶ್ರೀ ಬೋಡೆ ಸ್ವಾಮಿಗಳ (ಕೈವಲ್ಯ ಸ್ವಾಮಿಗಳ) ಸಮಾಧಿಯು (ಹಳೇಗುರ್ಲಹೊಸೂರದಲ್ಲಿದ್ದದ್ದು) ಸ್ಥಳಾಂತರಿತವಾಗಿದೆ. ಇಂತಹ ಮುನವಳ್ಳಿಯಲ್ಲಿ ಅನಂತಭಟ್ಟರನ್ನು ಇಟ್ಟು, ಅವರಿಗೂ ಸದುಪದೇಶವನ್ನು ಮಾಡಿ, ತಾವು ತಮ್ಮ ಇನ್ನೊಬ್ಬ ತಮ್ಮನಾದ ನಾಗೇಶಭಟ್ಟನನ್ನು ಹಾಗೂ ತಮ್ಮ ಮಡದಿಯನ್ನು ಕರೆದುಕೊಂಡು "ನಖಪರ"ಕ್ಕೆ (ಉಗರಗೋಳಕ್ಕೆ) ಬಂದರು. ಅಲ್ಲಿ ಪುರಾತನಕಾಲದಿಂದಲೂ ಪ್ರಸಿದ್ಧವಾದ ರೇಣುಕಾದೇವಾಲಯದಲ್ಲಿ ಇಳಿದುಕೊಂಡು, ದೇವಿಯ ಪೂಜೆಯನ್ನು ವಿಧಾನೋಕ್ತವಾಗಿ ಮಾಡಿಕೊಂಡು, ಜಪತಪಾದಿಗಳನ್ನು ನೆರವೇರಿಸಿ, ಜಗನ್ಮಾತೆಯಾದ ಶ್ರೀ ರೇಣುಕಾಕ್ಷೇತ್ರಕ್ಕೆ (ಎಲ್ಲಮ್ಮನಗುಡ್ಡಕ್ಕೆ) ಬಂದರು. ಅಲ್ಲಿ ಶ್ರೀಸೂಕ್ತ ಪುರುಷ ಸೂಕ್ತಗಳಿಂದ ದೇವಿಗೆ ಷೋಡಶೋಪಚಾರ ಪೂಜೆಯನ್ನು ಮಾಡಿ ಜಪತಪ ಹೋಮಹವನಾದಿವಗಳನ್ನು ಮಾಡಿಕೊಂಡು, ದೇವೀಮಹಾತ್ಮೆಯ ಪಾರಾಯಣ ಮಾಡಿ, ಸಹಸ್ರನಾಮಗಳಿಂದ ಭಗವತಿ ರೇಣುಕಾಂಬೆಗೆ ಕುಂಕುಮಾರ್ಚನೆ ಮಾಡಿ ತೀರ್ಥಪ್ರಸಾದ ಸ್ವೀಕರಿಸಿ, ಅನನ್ಯ ಭಕ್ತಿಯಿಂದ ದೇವ್ಯಪರಾಧಕ್ಷಮಾಪನ ಸ್ತೋತ್ರವನ್ನು ಪಠಿಸಿದರು.

**"ನ ಮಂತ್ರಂ ನೋ ಯಂತ್ರಂ ತದಪಿ ಚ ನ ಜಾನೇ ಸ್ತುತಿಮಹೋ ।**
**ನ ಚಾಹ್ವಾನಂ ಧ್ಯಾನಂ ತದಪಿ ಚ ನ ಜಾನೇ ಸ್ತುತಿಕಥಾಃ ॥**
**ನ ಜಾನೇ ಮುದ್ರಾಸ್ತೇ ತದಪಿ ಚ ನ ಜಾನೇ ವಿಲಪನಂ ।**
**ಪರಂ ಜಾನೇ ಮಾತಸ್ತ್ವದನುಸರಣಂ ಕ್ಲೇಶಹರಣಂ ॥"**
**ಆಪತ್ಸು ಮಗ್ನಂ ಸ್ಮರಣಂ ತ್ವದೀಯಂ ಕರೋಮಿ ದುರ್ಗೇ ಕರುಣಾರ್ಣವೇಶಿ ।**
**ನೈತತ್‌ಶಠತ್ವಂ ಮಮಭಾವ ಯೇಥಾಃ ಕ್ಷುಧಾತೃಷಾರ್ತಾ ಜನನೀಂ ಸ್ಮರಂತಿ ॥"**

"ಮಾತೆಯೇ, ನನಗೆ ಮಂತ್ರ, ಯಂತ್ರ, ಸ್ತುತಿ, ಆವಾಹನ, ಧ್ಯಾನ, ಮುದ್ರಾ, ದೈನ್ಯ ಭಾವದಿಂದ ಬೇಡಿಕೊಳ್ಳುವದು, ಯಾವುದೂ ಗೊತ್ತಿಲ್ಲ; ನಿನಗೆ ಶರಣು ಬರುವದರಿಂದ ಸಕಲ ದುಃಖ ಪರಿಹಾರವಾಗುವದೆಂಬುದನ್ನು ಮಾತ್ರ ನಾ ಬಲ್ಲೆ. ನನ್ನನ್ನು ಉದ್ಧರಿಸು." "ದುರ್ಗೆ, ಸಂಕಟಗಳಲ್ಲಿ ಸಿಲುಕಿದ ನಾನು, ನಿನ್ನ ಸ್ಮರಣೆಯನ್ನು ಮಾಡುತ್ತಿದ್ದೇನೆ. ಇದು ಡಾಂಭಿಕತನವೆಂದು ತಿಳಿಯಬೇಡ. ಹಸಿವೆ ಮತ್ತು ನೀರಡಿಕೆಯಿಂದ ಬಳಲಿದಾಗಲೇ ಮಕ್ಕಳು ಮಾತೆಯನ್ನು ಸ್ಮರಿಸುವದಿಲ್ಲವೇ ? ನನ್ನನ್ನು ಉದ್ಧರಿಸು. "

"ಈ ಜಗತ್ತಿನಲ್ಲಿ ನನಗೆ ಸಮಾನನಾದ ಪಾಪಿ ಇಲ್ಲ; ನಿನಗೆ ಸಮಾನರಾದ ಪಾಪನಾಶಕರಿಲ್ಲ. ಇದನ್ನು ಚನ್ನಾಗಿ ತಿಳಿದುಕೊಂಡು, ನಿನಗೆ ಸರಿ ಕಂಡಂತೆ ಮಾಡು" ಎಂದು ದೈನ್ಯದಿಂದ ಬೇಡಿಕೊಂಡರು.

ಈ ರೀತಿ ಮಾರ್ತಂಡ ದೀಕ್ಷಿತರು ಅಲ್ಲಿ ಕಾಲ ಕಳೆಯುತ್ತಿರಲು, ಅವರ ದರ್ಶನಾರ್ಥ ಬಂದ ತಡಕೋಡದ ಕೆಲ ಪ್ರತಿಷ್ಠಿತ ವ್ಯಕ್ತಿಗಳು, ಮಾರ್ತಂಡ ದೀಕ್ಷಿತರ ದೈವೀ ತೇಜಸ್ಸಿಗೆ ಮನಸೋತು ಬೇಡಿಕೊಂಡರು.

"ಪೂಜ್ಯ ದೀಕ್ಷಿತರೇ ನಮ್ಮ ಊರಲ್ಲಿ ವೈದಿಕ ವಿದ್ಯೆಯೇ ಲೋಪವಾಗುವ ಸಮಯ ಬಂದಿದೆ; ತಾವು ನಮ್ಮಲ್ಲಿಗೆ ಬಂದು, ವೈದಿಕ ವಿದ್ಯಾ ಪ್ರಸಾರ ಮಾಡಿ, ನಮ್ಮನ್ನು ಪುನೀತರನ್ನಾಗಿ ಮಾಡಬೇಕು. ನಾವು ಎಲ್ಲ ರೀತಿಯಿಂದಲೂ ತಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುವೆವು. ತಮ್ಮ ಪಾದಧೂಳಿಯಿಂದ ನಮ್ಮ ಗ್ರಾಮವನ್ನು ಉದ್ಧರಿಸಿರಿ" ಈ ನುಡಿಗಳನ್ನು ಕೇಳಿ, ಮಾರ್ತಂಡ ದೀಕ್ಷಿತರು ಯೋಚಿಸಿದರು. "ಮೊದಲು ನನ್ನ ತಮ್ಮನಾದ ನಾಗೇಶನನ್ನು ದಾರಿಗೆ ಹಚ್ಚುವದು ನನ್ನ ಕರ್ತವ್ಯ; ಹೇಗೋ ಇದೊಂದು ಸುವರ್ಣ ಸಂಧಿ ಸಿಕ್ಕಿದೆ. ಇದರಿಂದ ನಾಗೇಶನ ಕಲ್ಯಾಣವಾಗುವದಲ್ಲದೇ, ತಡಕೋಡದ ನಿವಾಸಿಗಳಿಗೂ ಧಾರ್ಮಿಕ ಆಚರಣೆಯನ್ನು ಸಾಗಿಸಲು ಉಪಯುಕ್ತವಾಗುವದು." ಈ ರೀತಿ ಯೋಚಿಸಿ ಪ್ರತಿಷ್ಠಿತ ವ್ಯಕ್ತಿಗಳನ್ನು ಕರೆದು, ಹೇಳಿದರು.

" ಮಹನಿಯರೇ ನಿಮ್ಮ ಅಭಿಪ್ರಾಯವು ನನಗೆ ತಿಳಿಯಿತು, ನಿಮ್ಮ ಭಕ್ತಿ, ಶ್ರದ್ಧೆ, ಆದರಾತಿಥ್ಯಗಳನ್ನು ಕಂಡು ನಾನು ಸಂತುಷ್ಟನಾಗಿದ್ದೇನೆ. ನನ್ನ ತಮ್ಮನಾದ ನಾಗೇಶಭಟ್ಟನು ನಿಮ್ಮ ಇಚ್ಛೆಯನ್ನು ಪೂರ್ಣ ಮಾಡುವನು. ಇವನು

ವೇದಾಧ್ಯಯನ ಮಾಡಿದ್ದಾನೆ. ಯಾಜ್ಞಿಕ ಪ್ರಯೋಗವಂತೂ ಸಂಪೂರ್ಣ ಇವನ ಕೈವಶವಾಗಿದೆ. ನೀವು ಇವನನ್ನು ನಿಮ್ಮೂರಿಗೆ ಕರೆದುಕೊಂಡು ಹೋಗಿರಿ, ನಿಮ್ಮ ಇಚ್ಛೆಯಂತೆ, ನಿಮ್ಮ ಊರಲ್ಲಿ ವೈದಿಕ ವಿದ್ಯಾಪ್ರಸಾರ ಮಾಡಲು, ಸಹಾಯ ಮಾಡುವನು. ಅವನ ಯೋಗಕ್ಷೇಮವನ್ನು ಸರಿಯಾಗಿ ವಹಿಸಿಕೊಂಡು, ನೀವು ಸದ್ಧರ್ಮದಿಂದ ಕಾಲಹರಣ ಮಾಡಿರಿ. ಪರಮೇಶ್ವರನು ನಿಮಗೆ ಕಲ್ಯಾಣ ಮಾಡುವನು''

ಅನಂತರ ತಮ್ಮ ತಮ್ಮನನ್ನು ಕರೆದು "ಆಯುಷ್ಯವಾನ್‌ಭವ; ವಿಜಯೀ ಭವ'' ಎಂದು ಆಶೀರ್ವದಿಸಿ, ಅವನನ್ನು ಪುರಜನರ ಕೂಡ ತಡಕೂಡಿಗೆ ಕಳುಹಿಸಿಕೊಟ್ಟರು ಅಂದಿನಿಂದ ಶ್ರೀ ನಾಗೇಶಭಟ್ಟರು. ತಡಕೋಡದಲ್ಲಿ ಇದ್ದು, ಶ್ರೌತ ಪ್ರಯೋಗದಲ್ಲಿ ಅನೇಕರನ್ನು ಪರಿಣತರನ್ನಾಗಿ ಮಾಡಿದರು, ಇಂದಿಗೂ ಅವರ ವಂಶಜರು ವಿದ್ಯಾವಂತರಾಗಿ ಬಾಳುತ್ತಿದ್ದಾರೆ,

**"ಅಮರಕಲ್ಯಾಣಕ್ಕೆ (ಮುರಗೋಡಿಗೆ) ಆಗಮನ"**

ಈ ರೀತಿ, ಮೂವರು ತಮ್ಮಂದಿರಿಗೆ ಸುಖವಾಗಿ ಜೀವನ ಸಾಗಿಸಲು ದಾರಿ ಮಾಡಿಕೊಟ್ಟ ಮೇಲೆ, ಮಾರ್ತಂಡದೀಕ್ಷಿತರಿಗೆ ಪರಮಸಂತೋಶವಾಯಿತು. ತಂದೆಯವರಿಗೆ ವಚನಕೊಟ್ಟಂತೆ, ವಿದ್ಯಾರ್ಜನೆಯನ್ನು ಮಾಡಿಕೊಂಡಂತೆ ಆಯಿತು. ಯೋಗಕ್ಷೇಮವನ್ನು ಸರಿಯಾಗಿ ನೋಡಿಕೊಂಡಂತೆಯೂ ಆಯಿತು. ಎಂದು ಭಾವಿಸಿ, ತಮ್ಮ ಜೀವನ ಸಾರ್ಥಕವಾಯಿತೆಂದು ತಿಳಿದು ತಾವೂ ಕೆಲ ದಿನ ತಡಕೂಡದಲ್ಲಿಯೇ ಉಳಿದರು. ಮುಂದೆ ಕೆಲ ದಿನಗಳನಂತರ ಮುರಗೋಡದ ದೇಶಪಾಂಡೆ ಮನೆತನದವರು, ಇವರ ಕೀರ್ತಿಯನ್ನು ಕೇಳಿ ತಡಕೋಡಿಗೆ ಬಂದು, ಮಾರ್ತಂಡ ದೀಕ್ಷಿತರಿಗೆ ಬಿನ್ನವಿಸಿಕೊಂಡರು.

ಪೂಜ್ಯರೇ ತಮ್ಮ ತಪೋಬಲ, ತಮ್ಮ ದೈವಿ ತೇಜಸ್ಸು, ತಮ್ಮ ಧಾರ್ಮಿಕ ದಿನಚರಿ, ತಮ್ಮ ಅಮೃತಸದೃಶವಾದ ಉಪದೇಶ, ತಮ್ಮ ಅಧ್ಯಾತ್ಮಿಕ ಚಿಂತನೆ, ಇವೆಲ್ಲವುಗಳು ನಮ್ಮನ್ನು ಮಂತ್ರ ಮುಗ್ಧರನ್ನಾಗಿ ಮಾಡಿವೆ. ತಮ್ಮ ನೇತ್ರತ್ವದಲ್ಲಿ ನಮ್ಮೂರಲ್ಲಿ ವೈದಿಕ ಪಾಠಶಾಲೆಯೊಂದು ನಡೆದು, ವೈದಿಕ ವಿದ್ಯಾ ಪ್ರಸಾರಕ್ಕೆ ಹಾಗೂ ವಿಧಾನೋಕ್ತ ಧಾರ್ಮಿಕ ಆಚರಣೆಗೆ ಅನಕೂಲವಾಗಬೇಕು. ನಿಮ್ಮಿಂದ ನಮ್ಮೂರು ಪಾವನ ಕ್ಷೇತ್ರವಾಗಬೇಕು; ವಿದ್ಯಾಕೇಂದ್ರವಾಗಬೇಕು. ತಪೋ

ಭೂಮಿಯಾಗಬೇಕು. ತಮ್ಮ ಚರಣಧೂಲಿಯು ನಮ್ಮ ಊರನ್ನು ಪುನೀತವನ್ನಾಗಿ ಮಾಡಬೇಕು ಎಂದು ನಮ್ಮ ಆಕಾಂಕ್ಷೆ ಇದೆ. ತಾವು ಅದನ್ನು ಈಡೇರಿಸಬೇಕು" ಎಂದು ಸಾಷ್ಟಾಂಗ ನಮಸ್ಕಾರಪೂರ್ವಕವಾಗಿ ಬೇಡಿಕೊಂಡ ಮೇಲೆ, ಮಾರ್ತಂಡ ದೀಕ್ಷಿತರು ತಮ್ಮ ಮಡದಿಯನ್ನು ಕರೆದುಕೊಂಡು, ನಿಶ್ಚಿಂತರಾಗಿ ಯಜ್ಞೇಶ್ವರನ ಸೇವೆಯನ್ನು ಸಾಗಿಸಬೇಕೆಂದು ಅಗ್ನಿಹೋತ್ರದ ಸಕಲ ಸಾಧನೆಗಳನ್ನು ತೆಗೆದುಕೊಂಡು, ಸುಮುಹೂರ್ತದಲ್ಲಿ ಮುರಗೋಡಕ್ಕೆ ಬಂದರು. ಪುರಜನರೆಲ್ಲರೂ ಸಂಭ್ರಮದ ಸ್ವಾಗತ ಮಾಡಿ, ಅವರ ಸಂಪೂರ್ಣ ಯೋಗಕ್ಷೇಮವನ್ನು ವಹಿಸಿಕೊಂಡರು. ಈ ಮುರಗೋಡಕ್ಕೆ ಪುರಾಣದಲ್ಲಿ "ಅಮರ ಕಲ್ಯಾಣ" ವೆಂಬ ಹೆಸರಿದೆ. ಮೂರು ಕಡೆಯಿಂದಲೂ ಗುಡ್ಡದ ಭಾಗಗಳು ಇಲ್ಲಿ ಇವೆಯೆಂದು, ಮೂರುಗುಡ್ಡ ಮುರಗೋಡ ಎಂಬ ಹೆಸರು ಪ್ರಾಪ್ತವಾಗಿದೆ. ಸಂಸ್ಕೃತದಲ್ಲಿ ಇದಕ್ಕೆ "ತ್ರಿಶಿಂಗಪುರ" ವೆಂದು ಹೆಸರು ಇದೆ. (ತ್ರಿ–ಮೂರು ಶೃಂಗ–ಗುಡ್ಡದ ತುದಿ ಪುರ–ಪಟ್ಟಣ–ಮುರಗೋಡ). ಇದರ ಬಳಿಯಲ್ಲಿಯೇ ಗಿರಿಜಾಕಲ್ಯಾಣ– ಅಥವಾ ಸೊಗಲವೆಂಬ ಕ್ಷೇತ್ರವಿದೆ. ಗಿರಿಜೆಯ ವಿವಾಹ ಮಂಗಲವು ಇಲ್ಲಿ ನೆರವೇರಿತೆಂದು, ಇದಕ್ಕೆ ಗಿರಿಜಾ ಕಲ್ಯಾಣವೆಂದು ಹೆಸರು ಬಂದಿದೆ. ಶಿವಪಾರ್ವತಿಯರ ವಿವಾಹ ಮಂಗಲವನ್ನು ನೋಡಲು ಸಮಸ್ತ ದೇವತೆಗಳೂ ಬಂದಿದ್ದರೆಂದು ಪುರಾಣದಲ್ಲಿ ಹೆಸರಾಗಿದೆ. ಇದಲ್ಲದೆ ಇಲ್ಲಿ ಸುಗೋಲ ಎಂಬ ಋಷಿಯು ಇಲ್ಲಿ ತಪಶ್ಚರ್ಯ ಮಾಡಿದ್ದರಿಂದ ಇವಕ್ಕೆ ಸೊಗಲ ಎಂಬ ಹೆಸರು ಬಂದಿದೆಯಂತೆ. ಇಲ್ಲಿ ಪರಶುರಾಮನು ಇಪ್ಪತ್ತೊಂದು ಸಲ ಕ್ಷತ್ರಿಯ ಸಂಹಾರ ಮಾಡಿದ ಪಾಪ ಪ್ರಕ್ಷಾಲನೆಯನ್ನು ಮಾಡಲೋಸುಗ ಸೋಮಯಾಗವನ್ನು ಮಾಡಿ, "ಸೋಮೇಶ್ವರನ" ದೇವತಾ ಸ್ಥಾಪನೆಯನ್ನು ಮಾಡಿರುವನಂತೆ, ಈಗಲೂ ಈ ಸೋಮೇಶ್ವರ ದೇವಾಲಯವು ಇಲ್ಲಿದೆ. ಪ್ರತಿ ವರುಷವು ಮಾಘಶುದ್ಧ ೧೪ನೇ ದಿನ, ವೈಭವದ ಉತ್ಸವವಾಗುತ್ತದೆ. ಪಾರ್ವತಿ ಪರಮೇಶ್ವರ ವಿವಾಹದ ಸಂಕೇತವಾಗಿ ಸಾವಿರಾರು ವಿವಾಹ ಸಮಾರಂಭಗಳು ನೆರವೇರುವವು. ಮುರಗೋಡದ ಸುತ್ತ ಮುತ್ತಲಿನ ಈ ಭಾಗಕ್ಕೆ ಅಮರಕಲ್ಯಾಣವೆಂದು ಹೆಸರು ಇದೆ. ಶ್ರೀ ರಾಜಾರಾಮ ಮಹಾರಾಜರು ಈ ಮುರ್ಗೋಡ ಗ್ರಾಮವನ್ನು ಬಹು ಸುಂದರವಾಗಿ. ತಮ್ಮ ಅಭಂಗಗಳಲ್ಲಿ ವರ್ಣಿಸಿದ್ದಾರೆ. ಸಂಪೂರ್ಣ ಚಕಬಂದಿಯನ್ನೇ ಕೊಟ್ಟಿದ್ದಾರೆ.

" ದಕ್ಷಿಣ ಪೈ ದೇಶ ಕರ್ನಾಟಕ ಪ್ರಾಂತ ।
ತೇಥೇ ಭಗವಂತ ಪ್ರಗಟಲಾ ॥೧॥
ಮಹಾಪುಣ್ಯಭೂಮಿ ಅಮರ–ಕಲ್ಯಾಣ ।
ನಾಮ ಅಭಿಧಾನ ಗ್ರಂಥೀ ಅಸೇ ॥೨॥
ಪ್ರವರ್ತತೇ ಅಸೇ ಮುರಗೋಡ ನಾಮ ।
ತೇಥೇ ಸರ್ವೋತ್ತಮ ಲೀಲಾ ಕರೀ ॥೩॥
ಗಿರಿಜಾ ಕಲ್ಯಾಣ ಸಂನಿಧ ಡೋಂಗರ ।
ತೇಥೇ ಸೋಮೇಶ್ವರ ದೇವ ಅಸೇ ॥೪॥
ಮಲಾಪಹಾರೀ ನದೀ ನಾಮ ದೇಖ ।
ಯೋಜನ ತೇ ಏಕ ದಕ್ಷಿಣೇಸೀ ॥೫॥
ದೋನ ತೇ ಯೋಜನ ಗ್ರಾಮಾ ಹೋ ಪಾಸೂನೀ ।
ಘಟಪ್ರಭಾ ಜಾಣ ಪಶ್ಚಿಮೇಸೀ ॥೬॥
ಯೋಜನ ಹೋ ಸಾತ ದಿಶಾತೇ ಉತ್ತರ ।
ಮಹಾನದೀ ಥೋರ ಕೃಷ್ಣಾ ಅಸೇ ॥೭॥
ಪೂರ್ವ ಅಗ್ನೀಕೋಣ ಜಮದಗ್ನೀಕಾಂತಾ ।
ಪರಶುರಾಮ ಮಾತಾ ರೇಣುಕಾತೇ ॥೮॥
ಪಂಧರಾ ಯೋಜನ ಉತ್ತರೇಚಾ ಕೋನ ।
ಶ್ರೀ ಕೃಷ್ಣ ಭಗವಾನ ಪಂಢರಿನಾಥ ॥೯॥
ದಾಸ ಮ್ಹಣೆ ಐಸಾ ಮಧ್ಯೇ ತೇ ನಗರ ।
ತೇಥೇ ಚಿದಂಬರ ಪ್ರಗಟಲಾ ॥೧೦॥

ವರದ ಅಭಂಗ ೧೮೫ (ರಾಜಾರಾಮ).

ಇಂತಹ ಪವಿತ್ರವಾದ ಮುರಗೋಡ ಕ್ಷೇತ್ರವು, ತಮ್ಮ ಅಗ್ನಿಹೋತ್ರವು ನಿರಂತರವಾಗಿ ಸಾಗಲು ಯೋಗ್ಯವೆಂದು ಭಾವಿಸಿ, ಮಾರ್ತಂಡ ದೀಕ್ಷಿತರು ತಮ್ಮ ಧರ್ಮಪತ್ನಿಯೊಡನೆ ಅಲ್ಲಿ (ಶಕೆ ೧೬೬೫ ರಿಂದ ಅಂದರೆ ಇ. ಸ. ೧೭೪೩ ರಿಂದ) ದೇಶಪಾಂಡೆಯವರ ಭವ್ಯವಾಡೆಯಲ್ಲಿ ಇರಹತ್ತಿದರು. (ಯಾವ ವಾಡೆ ಯಲ್ಲಿ ಶ್ರೀ ಚಿದಂಬರನ ಜನ್ಮವಾಯಿತೋ, ಯಾವ ಖೋಲಿಯಲ್ಲಿ ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕನಾದ ಚಿದಂಬರನ ತೊಟ್ಟಿಲವು ತೂಗಿತೋ,

ಅಂತಹ ವಾಡೆ, ಆ ಖೋಲಿ ಈಗ್ಯೂ ಶ್ರೀ ಶಾಮರಾವ ದೇಶಪಾಂಡೆಯವರ ವಶದಲ್ಲಿದ್ದು, ಚಿದಂಬರ ಭಕ್ತರಿಗೆ ಪವಿತ್ರ ಯಾತ್ರಾ ಸ್ಥಳವಾಗಿದೆ.)

ಮಾರ್ತಂಡದೀಕ್ಷಿತರು ವೇದಪಾರಂಗತರೂ, ಶಾಸ್ತ್ರವಿಶಾರದರೂ, ಮಹಾ ಜ್ಞಾನಿಗಳೂ ಆದ್ದರಿಂದ ಇವರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು. ಮುರಗೋಡದಲ್ಲಿ ಪಾಠಪ್ರವಚನಗಳನ್ನೂ, ಜಪತಪ ಅನುಷ್ಠಾನವನ್ನೂ ಆಚರಿಸುತ್ತ ತಂದೆಯವರಿಂದ ಮತ್ತು ಪೂಜ್ಯ ಸ್ವಯಂಪ್ರಕಾಶ ಗುರುಗಳಿಂದ ಉಪದಿಷ್ಟವಾದ ಗಾಯತ್ರೀ, ಶಿವಪಂಚಾಕ್ಷರೀ, ಬಾಲಾ, ನಕುಲೀ, ಖಡ್ಗಮಾಲಾ, ಗಣಪತೀ, ಪಂಚದಶೀ, ಷೋಡಶೀ ಮುಂತಾದ ಮಂತ್ರ ಪಾರಾಯಣ ಮಾಡುತ್ತ, ಕುಲಸ್ವಾಮಿಯಾದ ಮಾರ್ತಂಡಭೈರವನ ಆರಾಧನೆ ಮಾಡುತ್ತ ಕಾಲಹರಣ ಮಾಡಹತ್ತಿದರು. ಇವರ ಆಚರಣೆಯನ್ನು ಕಂಡು, ಮುರಗೋಡಪುರವಾಸಿಗಳು ಹರ್ಷಭರಿತರಾದರು. ಇಂತಹ ಸದ್ಗುರುಗಳು ತಮಗೆ ದೊರೆತಪ್ಪಕ್ಕೆ ತಾವು ಧನ್ಯರೆಂದು ಭಾವಿಸಿದರು. ಅಲ್ಲಿಯ ಶ್ರೀ ಜೇರೆ, ಶ್ರೀ ಜೋಶಿ, ಶ್ರೀ ದೇಶಪಾಂಡೆ ಮೊದಲಾದ ಪ್ರತಿಷ್ಠಿತರ ಸಹಾಯ ಸಹಾನುಭೂತಿಗಳಿಂದ ಸುಖವಾಗಿ ಜೀವನ ಸಾಗಿಸಹತ್ತಿದರು. ಆದರೆ ಸಂತಾನವಾಗದ್ದರಿಂದ ಮನಸ್ಸು ಅಸಮಾಧಾನ ಹೊಂದಿತು. ಇದಲ್ಲದೇ ಭಾರತದಲ್ಲಿಯ ಆಗಿನ ದುಃಖಮಯ ಪರಿಸ್ಥಿತಿಯನ್ನು ಕಂಡು, ಮರಮರ ಮರುಗಿದರು. ಔರಂಗಜೇಬನ ಆಳಿಕೆಯ ನಂತರ ಮುಂದಿನ ರಾಜರು ದುರ್ಬಲರಾಗಿ, ಕೇವಲ ಕೈಗೊಂಬೆಗಳಂತೆ ನಡೆಯಹತ್ತಿದ್ದರಿಂದ, ಶಾಂತಿ, ಸುವ್ಯವಸ್ಥೆಯು ಉಳಿಯಲಿಲ್ಲ. ದೀನದಲಿತರ ಗೋಳನ್ನು ಕೇಳುವವರು ಯಾರೂ ಇರಲಿಲ್ಲ. ಧರ್ಮರಕ್ಷಣೆಯನ್ನು ಮಾಡುವವರು ಯಾರೂ ಉಳಿಯಲಿಲ್ಲ. ಜನತೆಯ ಗೋಳನ್ನು ಕಂಡು,

"ದೇವಾ, ಈ ಅಸತ್ಯ, ಈ ಅನ್ಯಾಯ, ಈ ಕೊಲೆ, ಈ ಸುಲಿಗೆಗಳಿಗೆ ಕೊನೆ ಇಲ್ಲವೇ? ನಿನ್ನ ಭಕ್ತರ ಆರ್ತ ಕೂಗು ನಿನಗೆ ಕೇಳುವದಿಲ್ಲವೇ? ಶಾಂತಿ ಸ್ಥಾಪನೆಯನ್ನು ಮಾಡಿ, ಸಜ್ಜನರನ್ನು ರಕ್ಷಿಸಲಾರೆಯಾ?" ಎಂದು ಪರಮಾತ್ಮನಿಗೆ ಮೊರೆ ಇಟ್ಟರು. ಇಂತಹ ದುಃಖಮಯ ಪರಿಸ್ಥಿತಿಯಲ್ಲಿ ಇವರ ಅಸಮಾಧಾನಕ್ಕೆ ಇನ್ನೂ ಒಂದು ಕಾರಣವಾಯಿತು.

## ಯಜ್ಞೇಶ್ವರನ ಸೇವೆಗೆ ವಿಘ್ನ

"ತಾನೊಂದು ಬಗೆದರೆ ದೈವವೊಂದು ಬಗೆಯಿತಂತೆ" ಎನ್ನುವ ಉಕ್ತಿಯಂತೆ, ಇವರ ಧರ್ಮಪತ್ನಿಯು ಕಾಲವಶಳಾದಳು. ಅಗ್ನಿಹೋತ್ರ ಕಾರ್ಯಕ್ಕೆ ವಿಘ್ನವು ಪ್ರಾಪ್ತವಾಯಿತು. ವೈರಾಗ್ಯಶಾಲಿಗಳಾದ ಮಾರ್ತಂಡದೀಕ್ಷಿತರು ಇದರಿಂದ ಎದೆಗುಂದಲಿಲ್ಲ. ಆತ್ಮಜ್ಞಾನ ಮಾಡಿಕೊಂಡು, ಪ್ರಪಂಚದ ಬಂಧನದಿಂದ ಮುಕ್ತರಾಗಲು ಅನುಕೂಲವೇ ಆಯಿತೆಂದು ಭಾವಿಸಿದರು. ಆದರೆ ಗುರುಗಳ ಆಜ್ಞೆಯ ಮೇರೆಗೆ ತಾವು ಗೃಹಸ್ಥಾಶ್ರಮಿಯೇ ಆಗಿ ಬಾಳಬೇಕೆಂದು ತಿಳಿದು, ಎರಡನೆಯ ಮದುವೆಯನ್ನು ಮಾಡಿಕೊಂಡರು. ಮತ್ತೆ ಅಗ್ನಿಹೋತ್ರ ಕಾರ್ಯವು ಸೂಸೂತ್ರವಾಗಿ ಸಾಗಿ, ಯಜ್ಞೇಶ್ವರನ ಸೇವೆ ಪ್ರಾರಂಭಿಸಿದರು, ಆದರೆ "ವಿಪತ್‌ವಿಪದಮನುಬಧ್ನಾತಿ," 'ಸಂಕಟಗಳು ಬರಲು ಪ್ರಾರಂಭವಾದರೆ ಅವುಗಳ ಪರಂಪರೆಯೇ ಪ್ರಾರಂಭವಾಗುವದು' ಎಂಬ ಉಕ್ತಿಯಂತೆ ಕೆಲವೇ ದಿನಗಳಲ್ಲಿ ಮಾರ್ತಂಡದೀಕ್ಷಿತರ ಎರಡನೆಯ ಪತ್ನಿಯೂ ತನ್ನ ಇಹಲೋಕಯಾತ್ರೆಯನ್ನು ಮುಗಿಸಿದಳು. ದುರ್ದೈವದಿಂದ ಪ್ರಾಪ್ತವಾದ ಆಪತ್ತನ್ನು ಧೈರ್ಯದಿಂದ ಎದುರಿಸಿ, ದ್ವಿತೀಯ ಪತ್ನಿಯ ಅಂತ್ಯೇಷ್ಟಿಸಂಸ್ಕಾರಗಳನ್ನು ಮುಗಿಸಿದರು.

## ಲಕ್ಷ್ಮೀಬಾಯಿಯ ಪಾಣಿಗ್ರಹಣ

ಪರಸಗಡ ತಾಲೂಕ (ಸವದತ್ತಿ) ಬೆಟಸೂರ ಎಂಬ ಗ್ರಾಮದಲ್ಲಿ, ಜಕ್ಕನಗೌಡರು ಎಂಬ ಓರ್ವ ವತನದಾರರು ಇದ್ದರು. ಇವರಿಗೆ ಲಕ್ಷ್ಮೀಬಾಯಿ ಎಂಬ ಒಬ್ಬ ಮಗಳಿದ್ದಳು. ಇವರ ವಂಶಾವಳಿ ಹೀಗಿದೆ.

( ವಂಶಾವಳಿಯನ್ನು ಮುಂದಿನ ಪುಟದಲ್ಲಿ ನೋಡಿರಿ)


ಮೂಲ ಪುರುಷ
ಜಕ್ಕನಗೌಡರು.
(ಬೆಟಸೂರು)
ಬಡಾರುದ್ರಗೌಡರು (ಅಸುಂಡಿ)
ವೀರನಗೌಡರು (ಬೆಟಸೂರ)
ಲಿಂಗನಗೌಡರು
ರುದ್ರಗೌಡರು
ವೀರನಗೌಡರು,
ಜಕ್ಕನಗೌಡರು
(ಬೆಟಸೂರ ರುದ್ರಗೌಡರಿಗೆ ದತ್ತಕ)
ಜಕ್ಕನಗೌಡರು (ದತ್ತಕ)
ಅಣ್ಣಪ್ಪಗೌಡರು
ಲಕ್ಷ್ಮೀಬಾಯಿ
ಲಿಂಗನಗೌಡರು
ಮಲ್ಲನಗೌಡರು
(ಮಾರ್ತಂಡದೀಕ್ಷಿತರ ಖನೇಯು ಕುಟುಂಬ
ಮಹಾಸ್ವಾಮಿಯವರ ತಾಯಿ)
ಚಿಕ್ಕನಗೌಡರು
ಅಪ್ಪಣಗೌಡರು
ಲಿಂಗನಗೌಡರು
ಶಂಕರಗೌಡರು
ಮಲ್ಲನಗೌಡರು
ಬಾಬನಗೌಡರು (ಉರ್ಫ ಚಿಕ್ಕನಗೌಡರು
ಅಸುಂಡಿಗೆ ದತ್ತಕ)
ಟಿ. ಸಿ. ಪಾಟೀಲ
ಎಲ್. ಎಲ್. ಬಿ.
ಎಲ್. ಸಿ. ಪಾಟೀಲ
ಎಮ್. ಎ.
ಜಿ. ಸಿ. ಪಾಟೀಲ
ಡಾಕ್ಟರ
ಕೆ. ಸಿ. ಪಾಟೀಲ

ಶ್ರೀ ಜಕ್ಕನಗೌಡರ ಮಗಳಾದ ಈ ಲಕ್ಷ್ಮೀಬಾಯಿಯು ಸುಶೀಲಳೂ, ಸತ್ತ್ವಸಂಪನ್ನಳೂ, ಧಾರ್ಮಿಕ ಮನೋಭಾವನೆಯುಳ್ಳವಳೂ ಇದ್ದಳು. ಸದಾಚಾರ ಸಂಪನ್ನರಾದ, ವಿದ್ವನ್ಮಣಿಗಳಾದ, ವೇದಶಾಸ್ತ್ರಸಂಪನ್ನರಾದ ಮಾರ್ತಂಡ ದೀಕ್ಷಿತರಿಗೆ ತಮ್ಮ ಮಗಳನ್ನು ಕೊಟ್ಟರೆ, ತಮ್ಮ ಕುಲಕೋಟಿಗಳ ಉಧ್ಧಾರ ವಾಗುವದೆಂದು ತಿಳಿದು, ಜಕ್ಕನಗೌಡರು ದೀಕ್ಷಿತರ ವಪ್ಪಿಗೆಯಿಂದ, ತಮ್ಮ ಮಗಳನ್ನು ಸಾಲಂಕೃತ ಕನ್ಯಾದಾನ ಮಾಡಿ, ಒಳ್ಳೆ ವೈಭವದಿಂದ ವಿವಾಹ ಸಮಾರಂಭವನ್ನು ಬೆಡಸೂರಲ್ಲಿ ನೆರವೇರಿಸಿದರು. ಅಂದಿನಿಂದ ಲಕ್ಷ್ಮೀ ಬಾಯಿಯು ಮಾರ್ತಂಡದೀಕ್ಷಿತರ ಧರ್ಮಪತ್ನಿಯಾಗಿ ಪರಂಪರಾಗತವಾಗಿ ಬಂದ ಅಗ್ನಿಹೋತ್ರ ಕಾರ್ಯದಲ್ಲಿ ಸಹಾಯಕಳಾಗಿ, ಪತಿಯ ಸೇವೆಯನ್ನು ನಿಷ್ಠೆಯಿಂದ ಮಾಡಹತ್ತಿದಳು. ಆದರೆ ದುರ್ದೈವದಿಂದ, ಪ್ರಾಕ್ತನ ಕರ್ಮ ವಶಾತ್, ಎಷ್ಟೋ ದಿನಗಳು ಕಳೆದರೂ, ಲಕ್ಷ್ಮೀಬಾಯಿಯಿಂದಲೂ ಮಾರ್ತಂಡ ದೀಕ್ಷಿತರಿಗೆ ಸಂತಾನಪ್ರಾಪ್ತಿಯಾಗಲಿಲ್ಲ. ಅವರು ದುಃಖಿತರಾದರು. ಸಮಾಜಕ್ಕೆ ಕಲ್ಯಾಣವಾಗಲೆಂದೂ, ಸ್ವಶಾಖೀಯರಿಗೆ ಸೌಕರ್ಯವಾಗಲೆಂದೂ ಭಾವಿಸಿ, ಕಾತ್ಯಾಯನ ಸೂತ್ರಕ್ಕನುಸಾರವಾಗಿ ಷೋಡಶ ಶ್ರೌತಪ್ರಯೋಗಗಳನ್ನು ರಚಿಸಲು ಪ್ರಾರಂಭಿಸಿದರು,

## ಷೋಡಶ ಪ್ರಯೋಗ ರಚನೆ

**ಮಾರ್ತಂಡ ಇವ ಸಃ ಸಾಕ್ಷಾತ್ ವೇದ-ವೇದಾಂಗಪಾರಗಃ ।**
**ಶಾಂತೋ ದಾಂತಃ ತಪಸ್ವೀ ಯಃ ಅಗ್ನಿಹೋತ್ರಪರಾಯಣಃ ॥**
**ಯಜ್ಞ್ವಾಽನೇಕಕ್ರತೂನ್ ಕೃತ್ವಾ ಶಿಷ್ಯಾನಧ್ಯಾಪಯತ್ ಬಹೂನ್ ।**
**ಸೂತ್ರಭಾಷ್ಯ ಪ್ರಮಾಣೇನ ಪ್ರಯೋಗಃ ಷೋಡಶಃ ಕೃತಃ ॥**
**ಶ್ರೀ ಚಿ. ಮ. (ರಾ. ಭೋ. ದೇಶಪಾಂಡೆ)**

ಆಚಾರಮಾರ್ತಂಡ, ಶಾಂತಿಮಾರ್ತಂಡ, ದಾನಮಾರ್ತಂಡ, ಉತ್ಸರ್ಗ ಮಾರ್ತಂಡ, ಪ್ರತಿಷ್ಠಾಮಾರ್ತಂಡ, ಸಂಸ್ಕಾರಮಾರ್ತಂಡ ಮೊದಲಾದ ಪ್ರಯೋಗಗಳನ್ನೂ, ಷೋಡಶ ಸಂಸ್ಕಾರಗಳನ್ನೂ (ಗರ್ಭಾಧಾನ, ಪುಂಸವನ, ಇತ್ಯಾದಿ), ರಾಜಸೂಯಾಂತದವರೆಗೆ ವಿಧಾನಗಳನ್ನೂ ರಚಿಸಿದರು. ಸಕಲ

ರಿಗೂ ತಿಳಿಯುವಂತೆ ಸರಳ ಭಾಷೆಯಲ್ಲಿ, ಸಪ್ರಮಾಣವಾಗಿ ರಚಿಸಿದ್ದರಿಂದ ಈಗಲೂ ಕೂಡ ಈ ಪ್ರಯೋಗಗಳು ಪಂಡಿತರಿಗೂ. ಪಾಮರರಿಗೂ ಮಾನ್ಯ ವಾಗಿವೆ. ವಿದ್ವಾಂಸರ ಮೆಚ್ಚುಗೆಯನ್ನು ಪಡೆದಿವೆ. ಮಾರ್ತಂಡಸೋಮಯಾಜೀ ಪ್ರಯೋಗಗಳೆಂದು ಈಗಲೂ ಪ್ರಸಿದ್ಧಿಯನ್ನು ಪಡೆದಿವೆ.

## ಮುನವಳ್ಳಿಯಲ್ಲಿ ಸೋಮಯಾಗ ಮಾಡಿದ್ದು

ಈ ಪ್ರಯೋಗಗಳ ರಚನೆಯಾದ ಮೇಲೆ, ಮಾರ್ತಂಡದೀಕ್ಷಿತರು, ಲೋಕಕಲ್ಯಾಣಕ್ಕಾಗಿ, ಸೋಮಯಾಗ ಮಾಡಬೇಕೆಂದು ನಿರ್ಧರಿಸಿ, ಮುನ ವಳ್ಳಿಯ ಪ್ರತಿಷ್ಠಿತರ ಸಹಾಯದಿಂದ, ಸುಂದರವಾದ ಯಾಗಮಂಟಪವನ್ನು ನಿರ್ಮಿಸಿ, ಸುಮುಹೂರ್ತದಲ್ಲಿ ಋತ್ವಿಜರ ಸಹಾಯದಿಂದ ಯಜ್ಞವನ್ನು ಪ್ರಾರಂಭಿಸಿದರು. ದೀಕ್ಷಾಬದ್ಧರಾಗಿ, ಯಜ್ಞದ ಕಾರ್ಯವನ್ನು ಯಶಸ್ವಿ ಯಾಗಿ ಮುಗಿಸಿ, ಯಜ್ಞದ ಮಹತ್ತ್ವವನ್ನು ಎಲ್ಲರಿಗೂ ತಿಳಿಸಿ ಕೊಟ್ಟರು. ಅಲ್ಲಿಂದ ಪುನಃ ಮುರಗೋಡಕ್ಕೆ ಬಂದು ವಾಸಿಸಹತ್ತಿದರು. ಸಂತಾನಾಭಾವದ ಮೂಲಕ ಅವರ ಮನಸ್ಸು ದಿನೇದಿನೇ ಹೆಚ್ಚು ಅಸಮಾಧಾನ ಹೊಂದಹತ್ತಿತು. ಕುಲಸ್ವಾಮಿಯ ಅನುಗ್ರಹವಿಲ್ಲದೇ ಪುತ್ರಪ್ರಾಪ್ತಿಯು ಸಾಧ್ಯವಿಲ್ಲವೆಂದು ತಿಳಿದು, ತಮ್ಮ ಪತ್ನಿಯೊಡನೆ ಮಾರ್ತಂಡದೀಕ್ಷಿತರು ದೇವರ ಹಿಪ್ಪರಿಗೆಗೆ ಹೊರಟರು. ಅಲ್ಲಿ ಗಾಯತ್ರೀ ಪುರಶ್ಚರಣವನ್ನು ಪ್ರಾರಂಭಿಸಿದರು. ಗಾಯತ್ರೀ ಪುರಶ್ಚರಣವು ಮುಗಿದ ಮೇಲೆ, (ಪುರಶ್ಚರಣ ೨೪ ಲಕ್ಷ ಗಾಯತ್ರೀ ಮಂತ್ರ ಪಠಣ) ಮಾರ್ತಂಡದೀಕ್ಷಿತರಿಗೆ, ಮಾರ್ತಂಡಭೈರವನ ದೃಷ್ಟಾಂತವಾಯಿತು. "ದೀಕ್ಷಿತವರ್ಯನೇ, ನಿನ್ನ ತಪಶ್ಚರ್ಯವನ್ನು ನಾನು ಬಹುವಾಗಿ ಮೆಚ್ಚಿದ್ದೇನೆ. ನೀನಿನ್ನು ಸಂತತಿಯ ಸಲುವಾಗಿ ಚಿಂತಿಸಬೇಡ. ಇಲ್ಲಿಂದ ನೀನು ದಕ್ಷಿಣ ದೇಶದಲ್ಲಿರುವ "ಆಕಾಶ ಚಿದಂಬರ" ಕ್ಷೇತ್ರಕ್ಕೆ ಹೋಗಿ ತಪಸ್ಸನ್ನಾಚರಿಸು. ಸಾಕ್ಷಾತ್ ಚಿದಂಬರನೇ ನಿನ್ನ ಪುತ್ರನಾಗಿ ಅವತರಿಸುವನು." ಮಾರ್ತಂಡ ದೀಕ್ಷಿ ತರು ಎಚ್ಚತ್ತಮೇಲೆ ಸಂತುಷ್ಟರಾಗಿ, ಈ ವೃತ್ತಾಂತವನ್ನು ತಮ್ಮ ಪತ್ನಿಗೆ ತಿಳಿಸಿ ದರು.ಅವಳಿಗೂ ಕೂಡ ಪರಮಾನಂದವಾಯಿತು. ಕುಲಸ್ವಾಮಿಯ ದೃಷ್ಟಾಂತ ದಂತೆ, ತಪಸ್ಸನ್ನಾಚರಿಸಲು, ಶ್ರೌತಾಗ್ನಿಯನ್ನು ಸಮಾರೋಪ ಮಾಡಿಕೊಂಡು, ಆಕಾಶಚಿದಂಬರ ಕ್ಷೇತ್ರಕ್ಕೆ ಹೊರಟರು.



ಆಕಾಶ ಚಿದಂಬರ ಕ್ಷೇತ್ರದಲ್ಲಿಯ ನಟರಾಜನ ಮೂರ್ತಿಯು

ನಟರಾಜ ಮಹಾದೇವ ಪಾಹಿ ಮಾಂ ಕರುಣಾಕರ ।
ಸರ್ವಸಿದ್ಧಿ ಪ್ರದಾತಾತ್ತ್ವಂ ನಟರಾಜ ನಮೋ ನಮಃ ॥

## ಆಕಾಶ ಚಿದಂಬರ ಕ್ಷೇತ್ರ ವರ್ಣನೆ

ಈ ಕ್ಷೇತ್ರವು ಭಾರತದ ಅತ್ಯಂತ ಪ್ರಾಚೀನ ಕಾಲದ ಕ್ಷೇತ್ರಗಳಲ್ಲಿ ಒಂದಾಗಿದೆ. ಪೂಜ್ಯರಾದ ವ್ಯಾಸ ಮಹರ್ಷಿಗಳು, ಸ್ಕಂದಪುರಾಣದಲ್ಲಿ ಈ ಕ್ಷೇತ್ರವನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ. ಇದು ಮಹಾಸಿದ್ಧಿಸ್ಥಾನವೆಂದೂ, ಭಕ್ತರ ಕಾಮಧೇನುವೆಂದೂ ಬಣ್ಣಿಸಿದ್ದಾರೆ. ಉಪಮನ್ಯು, ಕಣ್ವ ಮೊದಲಾದ ಮಹರ್ಷಿಗಳು, ತಪಸ್ಸನ್ನಾಚರಿಸಿ, ವರವ ಪಡೆದ ಸ್ಥಾನವಿದು. ವ್ಯಾಘ್ರಪಾದ ಮತ್ತು ಪತಂಜಲಿ ಮಹರ್ಷಿಗಳು ತಪಸ್ಸನ್ನಾಚರಿಸಿ, ಆನಂದ ತಾಂಡವ ನೃತ್ಯಗೈಯುತ್ತಲಿದ್ದ ಶಿವನ ದರ್ಶನವನ್ನು ಪಡೆದದ್ದೂ ಇಲ್ಲಿಯೇ. ಕ್ರಿ. ಶ. ೬ನೆಯ ಶತಮಾನದಲ್ಲಿ, ಸಿಂಹವರ್ಮನೆಂಬ ಪಲ್ಲವ ವಂಶದ ರಾಜನು, ಇಲ್ಲಿಯ ಶಿವಗಂಗಾ ತೀರ್ಥದಲ್ಲಿ ಸ್ನಾನ ಮಾಡಿ, ತನ್ನ ಕುಷ್ಠರೋಗ ನಿವಾರಣೆಯನ್ನು ಮಾಡಿಕೊಂಡ ಸ್ಥಾನವಿದು. ಅದಕ್ಕಾಗಿಯೇ ಈ ರಾಜನು ಇಲ್ಲಿಯ ಪ್ರಾಚೀನ ಮಂದಿರದ ಜೀರ್ಣೋದ್ಧಾರ ಮಾಡಿ ಹೊಸ ಗೋಪುರಗಳನ್ನು ಕಟ್ಟಿಸಿದನಂತೆ. ಇಲ್ಲಿಯ ತೀರ್ಥದಲ್ಲಿ ಸ್ನಾನ ಮಾಡಿದ್ದರಿಂದ, ಸಿಂಹವರ್ಮನ ದೇಹವು ಹಿರಣ್ಯದಂತೆ, (ಬಂಗಾರದಂತೆ) ಕಾಂತಿಮಯವಾಯ್ತು. ಆದ್ದರಿಂದ ಅವನಿಗೆ ಹಿರಣ್ಯವರ್ಮನೆಂಬ ಹೆಸರು ರೂಢಿಯಲ್ಲಿ ಬಂದಿತಂತೆ. ಈ ಕ್ಷೇತ್ರದ ಮಹಾತ್ಮ್ಯದ ಬಗ್ಗೆ ಇನ್ನೂ ಒಂದು ಕತೆ ಇದೆ. ಓರ್ವ ಚಕ್ರವರ್ತಿಯು ಭಯಂಕರವಾದ ಗಲಿತಕುಷ್ಠರೋಗದಿಂದ ಬಳಲುತ್ತಿದ್ದನು. ಯಾವ ಔಷಧದಿಂದಲೂ ಅವನ ವ್ಯಾಧಿ ಗುಣವಾಗಲಿಲ್ಲ. ದೇಹದಿಂದ ರಕ್ತ-ಕೀಂವ ಸೋರಹತ್ತಿ, ದುರ್ಗಂಧ ಬರಹತ್ತಿತು. ಚಕ್ರವರ್ತಿಯು ಅತ್ಯಂತ ದುಃಖಿತನಾಗಿ, ತೀರ್ಥಯಾತ್ರೆಯನ್ನು ಕೈಕೊಂಡನು. ಅನೇಕ ಪುಣ್ಯ ಸ್ಥಳಗಳಲ್ಲಿ ಸಂಚರಿಸಿ, ತೀರ್ಥ ಸ್ನಾನಾದಿಗಳನ್ನು ಮಾಡಿದರೂ, ಅವನ ವ್ಯಾಧಿ ಎಳ್ಳಷ್ಟೂ ಕಡಿಮೆಯಾಗಲಿಲ್ಲ. ಕೊನೆಗೆ ರಾಮೇಶ್ವರಕ್ಕೆ ಹೋಗಬೇಕೆಂದೂ, ಅಲ್ಲಿ ತನ್ನ ವ್ಯಾಧಿಯು ಗುಣಮುಖವಾಗದಿದ್ದರೆ, ತನ್ನ ಪ್ರಾಣವನ್ನೇ ತ್ಯಾಗ ಮಾಡಬೇಕೆಂದೂ ನಿರ್ಧರಿಸಿ, ಸೈನ್ಯಸಮೇತನಾಗಿ ಹೊರಟನು. ಮಾರ್ಗದಲ್ಲಿ ವಿಶ್ರಾಂತಿಗಾಗಿ ಒಂದು ಅರಣ್ಯದಲ್ಲಿ ಬಿಡಾರ ಬಿಟ್ಟನು. ತನ್ನ ವ್ಯಾಧಿಯ ಬಗ್ಗೆ ಅತ್ಯಂತ ಚಿಂತಾಕ್ರಾಂತನಾಗಿ ಕುಳಿತಿರಲು, ಸಮೀಪದಲ್ಲಿಯೇ, ಅವನ ಎದುರಿಗೆ ಒಂದು ಹಂದಿಯು ಸೂರ್ಯನ ಪ್ರಖರ ಕಿರಣಗಳ ತಾಪವನ್ನು ಸಹಿಸಲಾರದೇ ಕಲುಷಿತ

ನೀರಿನ ಒಂದು ಹೊಂಡದಲ್ಲಿ, ಉರುಳಾಡಿ ಹೊರಬಂದಿತು. ಅದರ ದೇಹವು ಬಂಗಾರದ ಕಾಂತಿಯುಳ್ಳದ್ದು ಆಯಿತು. ಚಕ್ರವರ್ತಿಯು ಇದನ್ನು ಕಂಡು ಚಕಿತನಾದನು. ಕೂಡಲೇ ತಾನೂ ಎದ್ದು, ವಸ್ತ್ರಗಳನ್ನು ತೆಗೆದಿಟ್ಟು ಹಂದಿಯು ಹೊರಳಾಡಿ ಹೊರಬಂದ ಆ ಹೊಂಡದಲ್ಲಿ ಧುಮುಕಿದನು. ಚಕ್ರವರ್ತಿಗೆ ಒಂದು ವಿಲಕ್ಷಣವಾದ ಆನಂದವಾಯಿತು. ಹೊಂಡದ ಹೊರಬಂದು ನೋಡುತ್ತಾನೆ. ತನ್ನ ದೇಹವೆಲ್ಲವೂ ಬಂಗಾರದಂತೆ ಕಾಂತಿಮಯವಾಗಿತ್ತು. ವ್ಯಾಧಿಯು ಹೇಳಹೆಸರಿಲ್ಲದೇ ಹೋಯಿತು. ಚಕ್ರವರ್ತಿಯು ಪರಮ ಸಂತೋಷದಿಂದ, ಆ ಪುಣ್ಯ ಭೂಮಿಗೆ ಪುನಃಪುನಃ ನಮಸ್ಕಾರ ಮಾಡಿದನು. ಕುತೂಹಲದಿಂದ ಆ ಹೊಂಡದ ಬಳಿಯಲ್ಲಿ ಭೂಮಿಯನ್ನು ಅಗಿಸಿದನು. ಅಲ್ಲಿ ಒಂದು ದೇವಾಲಯವು ಸಿಕ್ಕಿತು. ಅಲ್ಲಿದ್ದ ಶಿಲೆಯೊಂದರ ಮೇಲೆ, "ಇದುವೇ ಪಾತಾಳಗಂಗೆ" ಎಂದು ಬರೆದಿತ್ತಂತೆ. ಇದುವೇ ಆಕಾಶ ಚಿದಂಬರ ಕ್ಷೇತ್ರ. ಸುವರ್ಣ ದೇಹವನ್ನು ಪಡೆದ ಆ ಚಕ್ರವರ್ತಿಗೆ ಸುವರ್ಣ ಚಕ್ರವರ್ತಿ ಎಂಬ ಹೆಸರು ರೂಢವಾಯಿತಂತೆ. ಈ ದೇವಾಲಯದಲ್ಲಿ ಪಂಚ ಸಭೆಗಳಿವೆ.

## ಪಂಚ ಮಹಾಸಭಾಸ್ಥಾನಗಳು

ಈ ಆಕಾಶ ಚಿದಂಬರ ಕ್ಷೇತ್ರವು, ದಕ್ಷಿಣ ರೇಲವೇ ಮಾರ್ಗದಲ್ಲಿರುವ ಮದ್ರಾಸದಿಂದ ೧೫೨ ಮೈಲು ಅಂತರದ ಮೇಲೆ ಇದೆ. "ಚಿದಂಬರಂ" ಎಂಬ ಸ್ಟೇಶನ್ನಿನಿಂದ ಇದು ಆರು ಫರ್ಲಾಂಗು ಅಂತರದ ಮೇಲೆ ಇದ್ದು, ಯಾತ್ರಿಕರು ಈ ಸ್ಟೇಶನ್ನಿನಲ್ಲಿ ಇಳಿದು ಹೋಗಬೇಕಾಗುವದು. ಇತ್ತೀಚೆಗೆ ಈ ಕ್ಷೇತ್ರದಿಂದ 1½ ಮೈಲುಗಳ ಅಂತರದಲ್ಲಿ "**ಅನ್ನಮಲಾಯ** ವಿಶ್ವವಿದ್ಯಾಲಯ" ಸ್ಥಾಪಿತವಾಗಿದೆ. ೧೯೫೧ ನೆಯ ಇಸ್ವಿಯಲ್ಲಿ ಜನಗಣತಿಯ ಪ್ರಕಾರ ಈ ಕ್ಷೇತ್ರದ ಜನಸಂಖ್ಯೆ, ೩೪,೭೪೫ ಇತ್ತು. ಚಿದಂಬರ ದೇವಾಲಯದ ಕ್ಷೇತ್ರವು ೪೦ ಎಕರೆ ವಿಸ್ತೀರ್ಣವಾಗಿದೆ. ಇಲ್ಲಿ ಮುಖ್ಯವಾಗಿ ಐದು ಮಹಾಸಭಾಸ್ಥಾನಗಳಿವೆ.

**೧) ಚಿತ್‌ಸಭಾ ೨) ಕನಕಸಭಾ ೩) ನೃತ್ತ ಸಭಾ ೪) ದೇವಸಭಾ ೫) ರಾಜಸಭಾ**

**೧) ಚಿತ್‌ಸಭಾ:—** ಇದು ಚಿದಂಬರನನ್ನು ನಟರಾಜನೆಂದು ಪೂಜಿಸುವ ಸ್ಥಾನ. ಇಲ್ಲಿ ನಟರಾಜನ ಸುಂದರಮೂರ್ತಿ ಇದೆ. ಶಿಲೆಯ ತಳಪದಿಯ

ಮೇಲೆ, ಕಟ್ಟಿಗೆಯ ಮಂದಿರವಿದ್ದು, ಛಾವಣಿಯನ್ನು ಬಂಗಾರದ ತಗಡುಗಳಿಂದ ಜೋಡಿಸಲಾಗಿದೆ. ಬಲಭಾಗದಲ್ಲಿ "ಚಿದಂಬರ ರಹಸ್ಯ" ಎಂಬ ಸ್ಥಾನವಿದ್ದು, ಅಲ್ಲಿ ಬಂಗಾರದ ಬಿಲ್ವ ಪತ್ರಿಗಳ ಮಾಲೆಯು ಮಾತ್ರ ಕಾಣಿಸುತ್ತದೆ. ಅಲ್ಲಿ ಆಕಾಶಲಿಂಗವೇ ಮುಖ್ಯ ದೇವರು. ಆದುದರಿಂದಲೇ ಇದಕ್ಕೆ ಆಕಾಶಚಿದಂಬರ, ಆಕಾಶಲಿಂಗ ಎಂಬ ಹೆಸರು ಬಂದಿದೆ. ನಟರಾಜನ ಎಡಬದಿಗೆ, ಶಿವನ ಪ್ರಾಣ ವಲ್ಲಭಳಾದ, ಶಿವಕಾಮಸುಂದರಿಯ ವಿಗ್ರಹವಿದೆ, ಸುವರ್ಣ ಭೈರವನ ವಿಗ್ರಹವೂ ಇಲ್ಲಿ ಇದೆ. ನಟರಾಜನ ವಿಗ್ರಹದ ಅಡಿಯಲ್ಲಿ, ಬೆಳ್ಳಿಯ ಪೆಟ್ಟಿಗೆಯೊಂದರಲ್ಲಿ, ಚಂದ್ರ ಮೌಲೀಶ್ವರನ ಲಿಂಗವಿದೆ. ಬಂಗಾರದ ಪೆಟ್ಟಿಗೆಯಲ್ಲಿ ನಟರಾಜನ ಶಿಲಾವಿಗ್ರಹವಿದೆ. ಇದಕ್ಕೆ "ರತ್ನಸಭಾಪತಿ" ಎಂಬ ಹೆಸರು ಇದೆ. ಲಿಂಗಕ್ಕೆ ಷಟ್ಕಾಲ (ಆರು ವೇಳೆ) ಪೂಜೆಯಾಗುತ್ತದೆ. ರತ್ನಸಭಾಪತಿಗೆ ಮಾತ್ರ ಎರಡೇ ವೇಳೆ (ದ್ವಿಕಾಲ) ಪೂಜೆಯಾಗುತ್ತದೆ. ಈ ಚಿತ್‌ಸಭೆಗೆ ಹೋಗಲು ಐದು ಬೆಳ್ಳಿಯ ಪಾವಟಿಗೆಗಳು ಇವೆ. ಇವು "**ನಮಃ ಶಿವಾಯ**" ಎಂಬ ಪಂಚಾಕ್ಷರೀ ಮಹಾಮಂತ್ರದ ಪ್ರತೀಕವೆಂದು ಹೇಳುತ್ತಾರೆ. ಒಂದೊಂದು ಸೋಪಾನವು ಪಂಚಾಕ್ಷರ ಮಂತ್ರದಲ್ಲಿಯ ಒಂದೊಂದು ಅಕ್ಷರದ ಪ್ರತೀಕವೆಂದು ಭಾವಿಸಲಾಗಿದೆ.

೨) **ಕನಕಸಭಾ:—** ಚಿತ್‌ಸಭೆಯ ನಂತರ ಇದಕ್ಕೆ ಹತ್ತಿಕೊಂಡೇ, ಕನಕಸಭೆ ಇದೆ. ಇಲ್ಲಿಯೇ ಪ್ರತಿದಿನ ಷಟ್ಕಾಲ ಪೂಜೆ ಜರಗುತ್ತದೆ. ಚಂದ್ರ ಮೌಲೀಶ್ವರನ ಸ್ಫಟಿಕಲಿಂಗವನ್ನೂ ಹಾಗೂ ರತ್ನಸಭಾಪತಿಯ, (ನಟರಾಜನ) ಶಿಲಾವಿಗ್ರಹವನ್ನು ಚಿತ್‌ಸಭೆಯಿಂದ ತಂದು ಇಲ್ಲಿ ಪೂಜಿಸುತ್ತಾರೆ. ನಟರಾಜ ಮತ್ತು ಶಿವಕಾಮಸುಂದರಿಯರ ವಿಗ್ರಹಗಳನ್ನು ಮಾತ್ರ ಕೇವಲ ಮಹಾಭಿಷೇಕ ಸಮಯದಲ್ಲಿ (ವರ್ಷದಲ್ಲಿ ನಾಲ್ಕು ಸಲ ಮಾತ್ರ) ಇಲ್ಲಿ ತಂದು ಪೂಜಿಸುತ್ತಾರೆ. ಋಷಿಗಳೂ, ದೇವತೆಗಳೂ ಇದೇ ಸಭೆಯಲ್ಲಿ ಶಿವನ ಆನಂದ ತಾಂಡವನೃತ್ಯವನ್ನು ಪ್ರತ್ಯಕ್ಷ ನೋಡಿ ಆನಂದ ಪಡೆದ ಸ್ಥಾನವು ಇದು, ಎಂದು ಈ ಕ್ಷೇತ್ರ ಮಹಾತ್ಮ್ಯದಲ್ಲಿ ಹೇಳಿದೆ.

೩) **ನೃತ್ತಸಭಾ:—** ದೇವಾಲಯದ ಎಲ್ಲ ಭಾಗಗಳಲ್ಲಿ ಈ ಸ್ಥಾನವು ಅತ್ಯಂತ ಸುಂದರವಾಗಿದೆ. ಧ್ವಜಸ್ತಂಭದ ದಕ್ಷಿಣಕ್ಕೆ ಈ ಸಭೆ ಇದೆ. ಚೋಳ

ವಂಶದ ೩ನೆಯ ಕುಲೋತ್ತುಂಗನೆಂಬ ರಾಜನು ಇದನ್ನು ಕಟ್ಟಿಸಿದ ಉಲ್ಲೇಖವಿವೆ. ಈ ಮಂಟಪದ ಎರಡೂ ಬದಿಗೆ, ಗಾಲಿಗಳು ಇದ್ದು, ಉಪ್ಡಾಣ ಮಾಡುತ್ತಲಿರುವ ಸುಂದರ ಕುದುರೆಗಳ ವಿಗ್ರಹಗಳಿಂದ ಅಲಂಕೃತವಾಗಿದೆ. ಇದು ಒಂದು ರಮ್ಯ ರಥದ ಆಕಾರದಂತಿದೆ. ನೃತ್ಯದ ವಿವಿಧ ಭಂಗಿಗಳನ್ನು ಸೂಚಿಸುವ ಕಲಾವಿಗ್ರಹಗಳೂ ಇಲ್ಲಿ ಇವೆ. ಶಿಲ್ಪಶಾಸ್ತ್ರಾನುಸಾರವಾಗಿ ರಚಿಸಿದ ಕೆತ್ತನೆಯ ಕೆಲಸವೂ ಬಹು ರಮ್ಯವಾಗಿದೆ. ಪರದೇಶದ ಪ್ರವಾಸಿಕರಿಗೆ ಹಾಗೂ ಯಾತ್ರಿಕರಿಗೆ ಇದು ಮುಖ್ಯ ಆಕರ್ಷಣ ಸ್ಥಾನವಾಗಿದೆ. ಡಾ. ಫರ್ಗ್ಯೂಸನ್ ಎಂಬವರು ಈ ನೃತ್ತಮಂಟಪದ ವಿಷಯಕ್ಕೆ ಹೀಗೆ ಉದ್ಗಾರ ತೆಗೆದಿದ್ದಾರೆ.

"A Most precious peice of work-manship in sculpture, containg dancing figures, more graceful and more elegantly executed, than any other of their class, so far as I know, in Southern India"

"ದಕ್ಷಿಣ ಭಾರತದಲ್ಲಿ ಇಷ್ಟು ಸುಂದರವಾದ ಶಿಲ್ಪಕಲೆಯುಳ್ಳ ಹಾಗೂ ನೃತ್ಯದ ವಿವಿಧ ಭಂಗಿಗಳನ್ನು ಸೂಚಿಸುವ ರಮಣೀಯ ವಿಗ್ರಹವುಳ್ಳ ಬೇರೆ ಯಾವ ಸ್ಥಾನವೂ ಇಲ್ಲ."

**ಡಾ. ಫರ್ಗ್ಯೂಸನ್.**

೪) **ದೇವಸಭಾ:—** ಚಿತ್‌ಸಭಾ ಮಂಟಪದ ಪೂರ್ವಕ್ಕೆ ಸಮೀಪದಲ್ಲಿಯೇ, ಈ ದೇವಸಭಾ ಮಂಟಪವಿದೆ. ದೇವಸ್ಥಾನದ ಅರ್ಚಕರಾದ ದೀಕ್ಷಿತರು ಇಲ್ಲಿ ಸಭೆ ಸೇರಿಸಿ, ದೇವಸ್ಥಾನದ ಕಾರ್ಯಕಲಾಪದ ಬಗ್ಗೆ ಮೇಲಿಂದ ಮೇಲೆ ಚರ್ಚಿಸುತ್ತಾರೆ. ಉತ್ಸವ ಮೂರ್ತಿಗಳನ್ನು ಸಾಮಾನ್ಯವಾಗಿ ಇಲ್ಲಿಯೇ ಇಟ್ಟಿರುತ್ತಾರೆ.

೫) **ರಾಜಸಭಾ:—** ಸಹಸ್ರ ಸ್ತಂಭಗಳುಳ್ಳ (ಸಾವಿರ ಕಂಬಗಳಿರುವ) ಒಂದು ಸುಂದರ ಮತ್ತು ವಿಶಾಲ ಮಂಟಪವಿದು. ಈ ಮಂಟಪವನ್ನು ಕೂಡ, ಚೋಳವಂಶದ ೩ನೆಯ ಕುಲೋತ್ತುಂಗನೆಂಬ ರಾಜನೇ ಕಟ್ಟಿಸಿದನಂತೆ. ಇದೇ ಮಂಟಪದಲ್ಲಿ ಪ್ರತಿವರುಷ ಎರಡು ಸಲ ಮಹಾಭಿಷೇಕ ಸಮಾರಂಭಗಳಾಗು

ತ್ತವೆ. ಧಾರ್ಮಿಕ ವಿಷಯಗಳ ಬಗ್ಗೆ ಚರ್ಚೆ ಮತ್ತು ಎಲ್ಲ ಉತ್ಸವಗಳಲ್ಲಿ ವಿಶೇಷವಾಗಿ ವ್ಯಾಘ್ರಪಾದ ಮತ್ತು ಪತಂಜಲಿ ಋಷಿಗಳ ಉತ್ಸವದಲ್ಲಿ ಸಂಗೀತ ಕಚೇರಿಗಳೂ ನಡೆಯುವವು.

## ರಮಣೀಯ ಗೋಪುರಗಳು

ಚಿದಂಬರ ದೇವಾಲಯದ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ಸುಂದರ ಗೋಪುರಗಳಿವೆ. ಎಲ್ಲ ಗೋಪುರಗಳಲ್ಲಿ ಒಳಭಾಗದಲ್ಲಿ ಹಾಗೂ ಹೊರಭಾಗದಲ್ಲಿ ಮನೋಹರವಾದ ಕೆತ್ತನೆಯ ಕೆಲಸವಿದೆ.

### (೧) ಪೂರ್ವಗೋಪುರ

ಯಾತ್ರಿಕರು ಸಾಮಾನ್ಯವಾಗಿ ಈ ಗೋಪುರದ ಮಾರ್ಗವಾಗಿಯೇ ದೇವಾಲಯವನ್ನು ಪ್ರವೇಸಿಸುವರು, ಈ ಗೋಪುರದ ಎಡಭಾಗದಲ್ಲಿ ಗಣಪತಿಯು ಹಾಗೂ ಬಲಭಾಗದಲ್ಲಿ "ಮುರಗರ" ನ ವಿಗ್ರಹಗಳು ಇವೆ. ಯಾತ್ರಿಕರಿಂದ ಪ್ರಥಮ ದರ್ಶನ ಮತ್ತು ಪೂಜೆ ಈ ವಿಗ್ರಹಗಳಿಗೆ ಸಲ್ಲುವದು. ಚೋಳ ವಂಶದ **೨ನೆಯ ಕುಲೋತ್ತುಂಗ** ರಾಜನು ಇದನ್ನು ಕಟ್ಟಿಸಿದನೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಗೋಪುರದ ಒಳಮೈಮೇಲೆ, ನೃತ್ಯದ ವಿವಿಧ ಭಂಗಿಗಳನ್ನು ಸೂಚಿಸುವ ರಮಣೀಯ ಶಿಲಾಬಾಲಿಕೆಯರ ವಿಗ್ರಹಗಳಿವೆ.

### (೨) ದಕ್ಷಿಣಗೋಪುರ

ಈ ಗೋಪುರವನ್ನು ಪಲ್ಲವ ವಂಶದ, ಚೊಕ್ಕಸೇನ ಉರ್ಫ ಕುಪ್ಪಾರುಣಜಂಗ (೧) (Chikka Sen, alias Kupparunjunga I) ರಾಜನು (ಇ, ಸ. ೧೨೩೨–೪೩) ಕಟ್ಟಿಸಿದನು. ಈ ಗೋಪುರ ಮಾರ್ಗದಿಂದ ಪ್ರವೇಶಿಸಿದರೆ ಚಿತ್‌ಸಭೆಯಲ್ಲಿರುವ ನಟರಾಜನ ದರ್ಶನವು ನೇರವಾಗಿ ಆಗುವದರಿಂದ ಈ ಗೋಪುರಕ್ಕೆ ಹೆಚ್ಚು ಮಹತ್ತ್ವವಿದೆ. ಇಲ್ಲಿ ನಂದಿಯ ಸುಂದರ ಶಿಲಾವಿಗ್ರಹವಿದೆ.

### (೩) ಪಶ್ಚಿಮ ಗೋಪುರ

ಜಾತವರ್ಮ ಸುಂದರನು (೧೨೫೧–೧೨೭೦) ಇದನ್ನು ಕಟ್ಟಿಸಿದನು. ಭರತನಾಟ್ಯ ಶಾಸ್ತ್ರದ ನಿಯಮಗಳಿಗನುಸಾರವಾಗಿ ವಿವಿಧ ನೃತ್ಯಗಳ ಭಂಗಿಗಳನ್ನು ತೋರಿಸುವ ಅಪ್ರತಿಮ ಸುಂದರ ಶಿಲಾವಿಗ್ರಹಗಳು ಇಲ್ಲಿ ಇವೆ.

ನವಿಲಿನ ಮೇಲೆ ಕುಳಿತ ಷಣ್ಮುಖನ ಸುಂದರ ವಿಗ್ರಹವೂ ಇಲ್ಲಿ ಇದೆ. ಗೋಪುರದ ಬಲಭಾಗದಲ್ಲಿ ಕ್ಷೇತ್ರಪಾಲ ದೇವತೆಗಳ ವಿಗ್ರಹಗಳಿವೆ.

### (೪) ಉತ್ತರ ಗೋಪುರ

ವಿಜಯ ನಗರದ ಕೃಷ್ಣದೇವರಾಯನು (A. D. 1509-30), ಓಡಿಸಾ ದೇಶವನ್ನು ಗೆದ್ದದ್ದಕ್ಕೆ ವಿಜಯಸ್ಮಾರಕವೆಂದು ಇದನ್ನು ಇ. ಸ. 1506 ರಲ್ಲಿ ಕಟ್ಟಿಸಿದನು. ಈ ಗೋಪುರದ ಹೊರಭಾಗದಮೇಲೆ, ಪೌರಾಣಿಕ ಕತೆಗಳನ್ನು ಸೂಚಿಸುವ ವಿಗ್ರಹಗಳಿವೆ. ಪಶ್ಚಿಮಭಾಗದಲ್ಲಿ ಶ್ರೀಕೃಷ್ಣ ದೇವರಾಯನ ವಿಗ್ರಹವಿದೆ.

### ಶಿವಗಂಗಾ ತೀರ್ಥಃ—

ದೇವಾಲಯದ ಬಳಿಯಲ್ಲಿಯೇ ಈ ಶಿವಗಂಗಾ ತೀರ್ಥವಿದೆ. ಇದಕ್ಕೆ "ಹೇಮಪುಷ್ಕರಿಣೀ'' (ಬಂಗಾರದ ಸರೋವರ) ಎಂದೂ ಹೆಸರು ಇದೆ. ಇದು ಪರಮ ಪವಿತ್ರವಾದ ತೀರ್ಥವು. ಇದನ್ನು ಪಾತಾಲಗಂಗೆಯೆಂದು ಭಾವಿಸುತ್ತಾರೆ. ಯಾತ್ರಿಕರು ಮತ್ತು ಅರ್ಚಕರು ಮೊದಲು ಇಲ್ಲಿ ಸ್ನಾನ ಮಾಡಿಯೇ ನಟರಾಜನ ಅರ್ಚನೆಯನ್ನು ನೆರವೇರಿಸುವರು. ಈ ತೀರ್ಥದಲ್ಲಿ ಸ್ನಾನಮಾಡಿ ತನ್ನ ಕುಷ್ಠರೋಗವನ್ನು ಕಳೆದುಕೊಂಡು, ಬಂಗಾರದಂತೆ ಹೊಳೆಯುವ ದೇಹವನ್ನು ಪಡೆದ **ಹೇಮವರ್ಮ**ನೆಂಬ ರಾಜನು, ೬ನೇ ಶತಮಾನದಲ್ಲಿ ಈ ತೀರ್ಥವನ್ನು ವಿಸ್ತರಿಸಿ ಕಟ್ಟಿಸಿದನಂತೆ. ಚೋಳವಂಶದ **"ನವಲೋಕವೀರ"** ನೆಂಬ ರಾಜನು ಈ ತೀರ್ಥಕ್ಕೆ ಸುತ್ತಲೂ ಸುಂದರವಾದ ಸೋಪಾನಗಳನ್ನು ಕಟ್ಟಿಸಿದನು. ವೇದವೇದಾಂಗಪಾರಂಗತನೂ, ಸರ್ವಶಾಸ್ತ್ರವಿಶಾರದನೂ, ಆದ "ವಿಶ್ವರೂಪ"ನೆಂಬ ಬ್ರಾಹ್ಮಣನು, "ಸುಮೇಧಾ" ಎಂಬ ತನ್ನ ಮಡದಿಯೊಡನೆ, ಈ ತೀರ್ಥದಲ್ಲಿ ತ್ರಿಕಾಲ ಸ್ನಾನಮಾಡಿ, ನಟರಾಜನ ಪೂಜನಾದಿಗಳನ್ನು ಮಾಡಿ, ಚಿದಂಬರ ನಾಮ ಜಪದಿಂದ ಶಿವಸಾಯುಜ್ಯವನ್ನು ಪಡೆದನೆಂದು ಸ್ಕಂದ ಪುರಾಣದಲ್ಲಿ, ಶಿವಪಾರ್ವತಿಯರ ಸಂವಾದ ರೂಪವಾದ ಸತ್ಯ ಚಿದಂಬರ ವೃತ ಕಥೆಯು ಎರಡನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಅದರಂತೆ, ವೀರಸೇನನೆಂಬ ರಾಜನು, ತನ್ನ ರಾಣಿಯಾದ ಸುವೃತೆಯೊಡನೆ, ಆಕಾಶ ಚಿದಂಬರಕ್ಕೆ ಬಂದು ಶಿವಗಂಗಾ ತೀರ್ಥದಲ್ಲಿ ಸ್ನಾನ ಮಾಡಿ ಚಿದಂಬರನ ಅರ್ಚನ ಮತ್ತು ಜಪತಪ

ಗಳಿಂದ ಇಹಪರದಲ್ಲಿ ಸದ್ಗತಿಯನ್ನು ಪಡೆದನೆಂದು ಸ್ಕಂದಪುರಾಣದಲ್ಲಿ ವರ್ಣಿಸಲ್ಪಟ್ಟಿದೆ. ಈಗಲೂ ಕೂಡ ಅಸಂಖ್ಯ ಭಕ್ತರು ಈ ತೀರ್ಥದಲ್ಲಿ ಸ್ನಾನ ಮಾಡಿ ಚಿದಂಬರ ನಾಮ ಜಪದಿಂದ ತಮ್ಮ ಜನ್ಮದ ಸಾರ್ಥಕತೆಯನ್ನು ಮಾಡಿ ಕೊಳ್ಳುತ್ತಿರುವರು.

## ಇಂತಹ ಪವಿತ್ರ ಕ್ಷೇತ್ರವಾದ ಆಕಾಶಚಿದಂಬರಕ್ಕೆ ಶ್ರೀ ಮಾರ್ತಂಡ ದೀಕ್ಷಿತರ ಆಗಮನ

ಹಿಪ್ಪರಿಗೆಯಲ್ಲಿ ಮಾರ್ತಂಡಭೈರವನ ದೃಷ್ಟಾಂತದ ಮೇರೆಗೆ ಶ್ರೀ ಮಾರ್ತಂಡ ದೀಕ್ಷಿತರು ತಪಸ್ಸನ್ನಾಚರಿಸಲು, ತಮ್ಮ ಪತ್ನಿಯೊಡನೆ ಕಾಲ್ನಡಿಗೆ ಯಿಂದ ಮಾರ್ಗಕ್ರಮಣ ಮಾಡುತ್ತ ಕೆಲವುದಿನಗಳ ನಂತರ ಆಕಾಶಚಿದಂಬರ ಕ್ಷೇತ್ರವನ್ನು ತಲುಪಿದರು.



## ಆಕಾಶಚಿದಂಬರದಲ್ಲಿ ತಪಶ್ಚರ್ಯದ ಕ್ರಮ

ದಿನಾಲೂ ಬ್ರಾಹ್ಮೀ ಮುಹೂರ್ತದಲ್ಲಿ (ರಾತ್ರಿಯ ಕೊನೆಯ ಪ್ರಹರದಲ್ಲಿ) ಎದ್ದು ಪ್ರಾತಃಸ್ಮರಣ, ಶೌಚಕರ್ಮ, ದಂತಧಾವನ ಮಾಡಿಕೊಂಡು, ಶಿವಗಂಗಾ

ತೀರ್ಥದಲ್ಲಿ ಸ್ನಾನ ಮಾಡಿಕೊಂಡು, ಸಂಧ್ಯಾ, ಸೂರ್ಯ ನಮಸ್ಕಾರಗಳನ್ನು, ಮುಗಿಸಿಕೊಂಡು, ತಾಂಡವೇಶ್ವರನ ಅರ್ಚನೆಯನ್ನು ಮಾಡುತ್ತಿದ್ದರು. ಅನಂತರ ದರ್ಭಾಸನದ ಮೇಲೆ ಕುಳಿತುಕೊಂಡು. ಭೂಶುದ್ಧಿಯನ್ನು ಮಾಡಿಕೊಂಡು, ಅಂತರ್ಹಬಾಹ್ಯಮಾತೃಕಾನ್ಯಾಸ ಮಾಡಿಕೊಂಡು, ವಿಧಾನ ಪೂರ್ವಕ ಸಂಕಲ್ಪ ಮಾಡಿಕೊಂಡು, ಗಾಯತ್ರೀ ಜಪವನ್ನು ಮಾಡುತ್ತಿದ್ದರು. ಮಧ್ಯಾಹ್ನದಲ್ಲಿ ಪುನಃ ಸ್ನಾನ ಮಾಡಿ, ಮಧ್ಯಾಹ್ನ ಕಾಲದ ಅಹ್ನಿಕವನ್ನು ತೀರಿಸಿಕೊಂಡು, ಪುನಃ ನಿಯಮಿತ ಸಂಖ್ಯೆಯಷ್ಟು ಗಾಯತ್ರೀಮಂತ್ರ ಜಪಿಸಿ, ಸ್ವಲ್ಪ, ವಿಶ್ರಾಂತಿಯನ್ನು ಪಡೆದು, ಉಪಾಹಾರ ಮಾಡುತ್ತಿದ್ದರು, ಕೇವಲ ದೂರ್ವಾರಸ (ಕರಿಕಿಯ ರಸ) ಮತ್ತು ಬಿಲ್ವರಸವನ್ನು ಮಾತ್ರ ಉಪಾಹಾರವೆಂದು ಸ್ವೀಕರಿಸುತ್ತಿದ್ದರು. ಪ್ರದೋಷ ಸಮಯದಲ್ಲಿ ಪುನಃ ಸ್ನಾನ ಮಾಡಿಕೊಂಡು, ನಟರಾಜನ ಪ್ರದೋಷಕಾಲದ ಪೂಜೆಯನ್ನು ನೆರವೇರಿಸುತ್ತಿದ್ದರು. ಪೂಜೆಯಾದ ಮೇಲೆ ಪುನಃ ಜಪವನ್ನು ಮಾಡಿ, ಅದನ್ನು ಪರಮೇಶ್ವರನಿಗೆ ಅರ್ಪಿಸಿ, ರಾತ್ರಿಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಈ ರೀತಿ ತಪಶ್ಚರ್ಯವು ಸಾಗಿರಲು, ಗಾಯತ್ರೀ ಪುರಶ್ಚರಣವು ಪೂರ್ಣವಾಗುವ ಸಮಯವು ಬಂದಿತು. ಚಿದಂಬರನು ಮಾರ್ತಂಡ ದೀಕ್ಷಿತರ ತಪಶ್ಚರ್ಯಕ್ಕೆ ಮೆಚ್ಚಿ ಪ್ರತ್ಯಕ್ಷನಾದನು.

**"ಏವಂ ಕಾಲಕ್ರಮಣತೋ ಜ್ಞಾತ್ವಾ ತಸ್ಯ ತಪಃಕೃತಿನ್ ।**
**ಶಂಕರಃ ಶ್ರೀ ಪಾರ್ವತೀಶಃ ಪ್ರತ್ಯಕ್ಷೋಽಭೂತ್**
**ಚಿದಂಬರಃ ॥"**

**ಶ್ರೀ ಚಿ. ಮಾ. ಅ. ೨, ಶ್ಲೋ. ೫೨**

ಶಂಕರನು ಪ್ರತ್ಯಕ್ಷನಾಗಿ, "ದೀಕ್ಷಿತವರ್ಯನೇ, ನಾನು ನಿನ್ನ ಘೋರತರವಾದ ತಪಶ್ಚರ್ಯದಿಂದ ಹಾಗೂ ಅನನ್ಯ ಭಕ್ತಿಯಿಂದ ಸಂತುಷ್ಟನಾಗಿದ್ದೇನೆ. ನಿನ್ನ ಇಚ್ಛೆ ಏನಿದೆ ಹೇಳು; ನಾನದನ್ನು ಸತ್ಯವಾಗಿ ಪೂರ್ಣ ಮಾಡುವೆನು" ಎಂದು ನುಡಿದನು, ಆಗ ಮಾರ್ತಂಡದೀಕ್ಷಿತರು ಧ್ಯಾನಾಸಕ್ತರಾದ್ದರಿಂದ ಪರಮೇಶ್ವರನ ನುಡಿಗಳು ಅವರಿಗೆ ಕೇಳಿಸಲಿಲ್ಲ. ಸಮಾಧಿಯ ಅವಸ್ಥೆಯಲ್ಲಿಯೇ ಇದ್ದರು. ದಯಾಸಾಗರನಾದ ಚಿದಂಬರನು, ತನ್ನ ಭಕ್ತಶ್ರೇಷ್ಠನಾದ ಮಾರ್ತಂಡ ದೀಕ್ಷಿತರ ತಲೆಯಮೇಲೆ ಹಸ್ತವನ್ನಿಟ್ಟು, ಅವರನ್ನು ಅಲ್ಲಾಡಿಸಿ, ಏಳು,

ವತ್ಸಾ, ನಿನ್ನ ಊರ್ಜಿತ ಕಾಲವು ಸಮೀಪಿಸಿದೆ, ಏಳು" ಎಂದು ನುಡಿದನು. ಆಗ್ಗೆ ಸಮಾಧಿಯಿಂದ ಎಚ್ಚತ್ತ ಮಾರ್ತಂಡದೀಕ್ಷಿತರು, ಚಂದ್ರಚೂಡನೂ, ಜಟಾಧಾರಿಯೂ, ಭಸ್ಮಭೂಷಿತನೂ, ರುದ್ರಾಕ್ಷಮಾಲಾಧರನೂ, ಆದ ಪಂಚ ಮುಖವುಳ್ಳ ಸಾಂಬನನ್ನು ಕಂಡರು. ಬ್ರಹ್ಮ, ವಿಷ್ಣು, ರುದ್ರಾದಿಗಳು ಆತನ ಪೂಜೆಯನ್ನು ಮಾಡುತ್ತಿದ್ದದನ್ನೂ, ಅಪ್ಸರಗಣವು ಪೂಜಿಸುತ್ತಿರುವದನ್ನೂ, ಮುನಿಗಳು ನಮಸ್ಕಾರ ಮಾಡುತ್ತಿರುವದನ್ನೂ ಕಂಡು ಮಾರ್ತಂಡದೀಕ್ಷಿತರು ಸಂತುಷ್ಟರಾದರು. ಸಕಲೈಶ್ವರ್ಯ ಸಂಪನ್ನವಾದ ಆ ದಿವ್ಯ ಮೂರ್ತಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು, ಸಾಂಬಚಿದಂಬರನು ಮಾರ್ತಂಡದೀಕ್ಷಿತರನ್ನು ಎಬ್ಬಿಸಿ, ಪ್ರೇಮದಿಂದ ಅಪ್ಪಿಕೊಂಡು ಮಸ್ತಕವನ್ನು ಮೂಸಿ ನೋಡಿ, ನುಡಿದನು.

**"ಜ್ಞಾತಂ ಮನೋರಥಂ ತೇಽದ್ಯ ಧರ್ಮಸಂಸ್ಥಾಪನಾಯ ಹಿ।**
**ಜನಿಷ್ಯೇ ತ್ವದ್ಗೃಹೇ ವಿಪ್ರ ತಪೋಮಂಗಲಮಾಚರ ॥"**
**ಶ್ರೀ ಚಿ. ಮಾ. ಅ. ೨, ಶ್ಲೋ. ೫**

"ನಿನ್ನ ಮನೋರಥವು ನನಗೆ ತಿಳಿದಿದೆ- ಧರ್ಮಸಂಸ್ಥಾಪನೆಗಾಗಿ ನಾನು ನಿನ್ನ ಮನೆಯಲ್ಲಿ ಹುಟ್ಟಿ ಬರುವೆನು; ನೀನು ಇನ್ನು ನಿನ್ನ ತಪಶ್ಚರ್ಯದ ಮಂಗಲವನ್ನು ಆಚರಿಸು."

ಈ ರೀತಿ ವರವನ್ನು ಕೊಟ್ಟು ಶಂಕರನು ಅಲ್ಲಿಯೇ ಗುಪ್ತನಾದನು. ಮಾರ್ತಂಡದೀಕ್ಷಿತರಿಗೆ ಪರಮ ಸಂತೋಷವಾಯಿತು. ನಡೆದ ವೃತ್ತಾಂತವನ್ನೆಲ್ಲ ತಮ್ಮ ಪತ್ನಿಗೆ ತಿಳಿಸಿದರು. ಲಕ್ಷ್ಮೀಮಾತೆಯು ತನ್ನ ಜನ್ಮವೇ ಸಾರ್ಥಕವಾಗುವ ದೆಂದು ಹರ್ಷಭರಿತಳಾದಳು. ಮಾರ್ತಂಡದೀಕ್ಷಿತರು ಅನುಷ್ಠಾನವನ್ನು ಪೂರ್ಣ ಮಾಡಿ, ಯಥಾ ಶಕ್ತಿ ಬ್ರಾಹ್ಮಣ ಭೋಜನವನ್ನು ಮಾಡಿಸಿ, ದಕ್ಷಿಣೆ ಯನ್ನು ಕೊಟ್ಟು, ಗಾಯತ್ರೀ ಪುರಶ್ಚರಣದ ಮಂಗಲವನ್ನು ನೆರವೇರಿಸಿದರು. ಒಂದು ದಿನ ಸುಮುಹೂರ್ತದಲ್ಲಿ ತಮ್ಮ ನಿತ್ಯಾಹ್ನಿಕವನ್ನು ತೀರಿಸಿಕೊಂಡು, ನಟರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಮಾರ್ತಂಡದೀಕ್ಷಿತರು ಮಡದಿ ಯೊಡನೆ ಪುನಃ ಮುರಗೋಡಿಗೆ ಬಂದರು.

**ಸುಗೋಲ (ಸೊಗಲ) ಕ್ಷೇತ್ರದಲ್ಲಿ ಗಾಯತ್ರೀ ಪುರಶ್ಚರಣ**

ಗಾಯತ್ರೀ ಮಂತ್ರದಲ್ಲಿ ಅಖಂಡ ವಿಶ್ವಾಸವಿದ್ದುದರಿಂದಲೂ ಹಾಗೂ ಬ್ರಹ್ಮಚರ್ಯಾಶ್ರಮದಿಂದಲೇ ಅನುಷ್ಠಾನ ಮಾಡುವ ಪ್ರವೃತ್ತಿ ಇದ್ದುದರಿಂದ

ಲೋಕೋದ್ಧಾರಕ್ಕಾಗಿ ಪರಮಾತ್ಮನು ಶೀಘ್ರವೇ ಅವತರಿಸಿ ಬರಬೇಕೆಂದು ಪುನಃ ಗಾಯತ್ರೀ ಪುರಶ್ಚರಣ ಮಾಡಲು ನಿರ್ಧರಿಸಿ, ಮುರಗೋಡದಿಂದ ನಾಲ್ಕು ಮೈಲು ಅಂತರದಲ್ಲಿರುವ ಸುಗೋಲ ಕ್ಷೇತ್ರಕ್ಕೆ (ಸೊಗಲಕ್ಕೆ) ಬಂದರು. ಈ ಸೊಗಲದಲ್ಲಿ ಸೋಮೇಶ್ವರ ದೇವಾಲಯವಿದ್ದು ಗಂಗೆಯು ಗುಪ್ತಗಾಮಿನಿಯಾಗಿ ಬಂದು ದಭದಭೆಯಾಗಿ ಧುಮುಕುತ್ತಿದ್ದಾಳೆ. ಮಲಾಪಹಾರೀ ಮಹಾತ್ಮ್ಯದಲ್ಲಿ ಈ ಕ್ಷೇತ್ರದ ರಮ್ಯ ವರ್ಣನೆ ಇದೆ. ಪರಶುರಾಮನು ೨೧ ಸಲ ಕ್ಷತ್ರಿಯರನ್ನು ಸಂಹರಿಸಿ, ತದ್ದೋಷಪರಿಹಾರಾರ್ಥವಾಗಿ, ಈ ಕ್ಷೇತ್ರದಲ್ಲಿ ಸೋಮಯಾಗ ಮಾಡಿ, ಸೋಮೇಶ್ವರನ ದೇವಾಲಯವನ್ನು ಸ್ಥಾಪಿಸಿದನಂತೆ. ಇಲ್ಲಿ ಸುಗೋಲನೆಂಬ ಋಷಿಯು ತಪಶ್ಚರ್ಯವನ್ನು ಆಚರಿಸಿದ್ದರಿಂದ, ಇದಕ್ಕೆ 'ಸೊಗಲ' ಎಂಬ ಹೆಸರು ಪ್ರಾಪ್ತವಾಯಿತಂತೆ. ರಾಜಾರಾಮನು ಇದಕ್ಕೆ "ಗಿರಿಜಾಕಲ್ಯಾಣ ಡೋಂಗರ" ಪಾರ್ವತಿಯ ವಿವಾಹ ಜರುಗಿದ ಸ್ಥಾನವೆಂದು ಕರೆದಿದ್ದಾನೆ. ಪ್ರತಿವರುಷ ಮಾಘಮಾಸದಲ್ಲಿ ಮನ್ವಾದಿತಿಥಿಯಲ್ಲಿ ಶಿವ-ಪಾರ್ವತಿಯರ ವಿವಾಹ ಜರುಗಿ, ದೊಡ್ಡ ಉತ್ಸವ ಸಮಾರಂಭವಾಗುವದು. ರಾಜಾರಾಮನು ತನ್ನ ಅಭಂಗಗಳಲ್ಲಿ ಈ ಕ್ಷೇತ್ರವನ್ನು ಹೀಗೆ ವರ್ಣಿಸಿದ್ದಾನೆ.

**"ಪವಿತ್ರ ತೆ ಸ್ಥಾನ ಅಸೆ ಋಷೀ ಜಾಗಾ ।**
**ಪೂರ್ವೀ ಯಜ್ಞಯಾಗ ಋಷೀ ಕರಿತೀ ॥ ೧ ॥**
**ತಪಶ್ಚರ್ಯಾ ಕರೀ ಬಹುತ ಋಷೀಶ್ವರ ।**
**ಗಿರೀ ತೇ ಕಂದರೀ ಗುಂಫಾ ಅಸತೀ ॥ ೨ ॥**
**ಮಹಾ ಘೋರ ತಪ ಪಾರ್ವತೀನೆ ಕೇಲೆ ।**
**ಲಗ್ನ ಕರೂ ಆಲೆ ಸಾಂಬ ತೇಥೇ ॥ ೩ ॥**
**ಈಶ್ವರ ಪಾರ್ವತೀ ಲಗ್ನ ತೇ ಲಾಗಲೇ ।**
**ಸರ್ವ ದೇವ ಆಲೇ ಸಮುದಾಯೇಸೀ ॥ ೪ ॥**
**ಪರಶುರಾಮೇ ಕೇಲಾ ಸೋಮಯಾಗ ಥೋರ ।**
**ದೇವ ಸೋಮೇಶ್ವರ ಸ್ಥಾಪೀಯಲಾ" ॥ ೫ ॥**

**ವರದ ಅಭಂಗ ೧೭೪**

ಈಗಲೂ ಕೂಡ ಇಲ್ಲಿಯ ಸೃಷ್ಟಿಸೌಂದರ್ಯವು ರಮ್ಯವಾಗಿದೆ. ಜುಳು ಜುಳು ಹರಿಯುವ ಝರಿಗಳೂ, ಸುಂದರವಾದ ಗಿಡಬಳ್ಳಿಗಳೂ, ಕೇದಿಗೆಯ

ಬನವೂ, ಗುಡ್ಡಗಳ ಸಾಲೂ, ದುರ್ಗಾಮಾತೆಯ ಮಂದಿರ ಮೊದಲಾದವು ಗಳಿಂದ ಈ ಕ್ಷೇತ್ರವು ಬಹು ರಮ್ಯವಾಗಿದೆ. ಮಾರ್ತಂಡದೀಕ್ಷಿತರು ಇಲ್ಲಿಗೆ ಬಂದು ದುರ್ಗಾದೇವಿಯ ಮಂದಿರದ ಬಳಿಯಲ್ಲಿ ಗಾಯತ್ರೀ ಪುರಶ್ಚರಣ ಪ್ರಾರಂಭಿಸಿದರು. ಅನುಷ್ಠಾನ ಕಾರ್ಯದಲ್ಲಿ ಮಡದಿಯಾದ ಲಕ್ಷ್ಮೀಬಾಯಿ ಯವರು ಯಾವತ್ತೂ ಸಿದ್ಧತೆಯನ್ನು ಮಾಡಿ ಕೊಡುತ್ತಿದ್ದರು. ಅನನ್ಯ ಭಕ್ತಿ ಯಿಂದ ದಂಪತಿಗಳು ಸೋಮೇಶ್ವರನ ಆರಾಧನೆಯನ್ನು ಮಾಡಹತ್ತಿದರು. ಅಲ್ಲಿ ಮಾರ್ತಂಡದೀಕ್ಷಿತರು ೩ ಗಾಯತ್ರೀ ಪುರಶ್ಚರಣಗಳನ್ನು ಮಾಡಿದರು. ಅನುಷ್ಠಾನ ಮಂಗಲವನ್ನು ಮುಗಿಸಿ, ಪುನಃ ಕುಲದೇವರಾದ ಮಾರ್ತಂಡಭೈರ ವನ ದರ್ಶನಾರ್ಥವಾಗಿ ದೇವರ ಹಿಪ್ಪರಿಗೆಗೆ ಬಂದರು.

## ಹಿಪ್ಪರಿಗೆಯಲ್ಲಿ ಮಾರ್ತಂಡಭೈರವನ ಪ್ರತ್ಯಕ್ಷ ದರ್ಶನ

ಹಿಪ್ಪರಿಗಿಯಲ್ಲಿ ಮಾರ್ತಂಡಭೈರವನನ್ನು ವಿಧ್ಯುಕ್ತ ಪೂಜೆ ಮಾಡಿ, ಮಲ್ಲಾರಿ-ಕವಚ, ಮಲ್ಲಾರಿ ಮಾಹಾತ್ಮ್ಯಪಠಣ, ಮಲ್ಲಾರಿ ಸಹಸ್ರನಾಮಪಠಣ, ಮಲ್ಲಾರಿ ಮೂಲಮಂತ್ರ ಪಠಣಾದಿಗಳನ್ನು ನಿಶ್ಚಲ ಮನಸ್ಸಿನಿಂದ ಮಾಡು ತ್ತಿರಲು, ಒಂದು ದಿನ ಮಾರ್ತಂಡಭೈರವನು ಈ ದಂಪತಿಗಳ ಭಕ್ತಿಗೆ ಮೆಚ್ಚಿ, "ವಾಘಯ್ಯನ" ವಗ್ಗಯ್ಯನ ರೂಪದಿಂದ ಪ್ರತ್ಯಕ್ಷನಾಗಿ ನುಡಿದನು. "ಭಕ್ತಶ್ರೇಷ್ಠನೇ, ನಿನ್ನ ತಪಸ್ಸಿಗೆ ಮೆಚ್ಚಿ, ನಿನಗೆ ಇನ್ನೊಂದು ವರವ ನೀಡು ವೆನು. ಸ್ವೀಕರಿಸು. ನಿನಗೆ ಸೂರ್ಯನ ಅಂಶದಿಂದ ಇನ್ನೊಬ್ಬ ಮಗನು ಜನಿಸು ವನು. ಅವನಿಗೆ ಪ್ರಭಾಕರನೆಂಬ ಹೆಸರನ್ನಿಡು. ನೀನು ಮೊಮ್ಮಕ್ಕಳನ್ನು ಕೂಡ ಪಡೆಯುವಿ" ಎಂದು ಹೇಳಿ ಗುಪ್ತನಾದನು.

**"ದ್ವಿತೀಯ ಪುತ್ರ ಹಾ ಭಾನು ಅಂಶರೇ ।**
**ಪ್ರಭಾಕರಾಖ್ಯ ಹೇ ನಾಮ ತ್ಯಾಸ ರೇ ॥**
**ಪೌತ್ರ ಹೀ ಬರೇ ಹೋತಿ ತೂಜಲಾ ।**
**ಸಾಂಗುನೀ ಅಸೇ ಗುಪ್ತ ಜಾಹಲಾ ॥**

**ಶ್ರೀ ಮಚ್ಚರಿತ್ರ ಪಾ. ೧, ಅ. ೫. ಶ್ಲೋ. ೨೪.**

ಈ ರೀತಿ ವರವನ್ನು ಪಡಕೊಂಡು, ಶಕೆ ೧೬೭೪ಕ್ಕೆ ಅಂದರೆ, ಇ. ಸ, ೧೭೫೭ರಲ್ಲಿ ಪುನಃ ಮುರಗೋಡಿಗೆ ಬಂದರು. ಬ್ರಹ್ಮತೇಜದ ಬಲದಿಂದ ಪರ

ಮಾತ್ಮನ ಅನುಗ್ರಹ ಪಡೆದ ದಂಪತಿಗಳು ಸುಖದಿಂದ ವಾಸಿಸಹತ್ತಿದರು. ಶಕೆ ೧೬೬೯ ಮಾಘ ಶುದ್ಧದಲ್ಲಿ, ಲಕ್ಷ್ಮೀಬಾಯಿಯು ಗರ್ಭವತಿಯಾದಳು. ಮಾರ್ತಾಂಡದೀಕ್ಷಿತರ ಅಖಂಡ ತಪಶ್ಚರ್ಯದ ಪುಣ್ಯ ಸಂಚಯವೇ ಲಕ್ಷ್ಮೀ-ಮಾತೆಯ ಗರ್ಭವನ್ನಲಂಕರಿಸಿತೆಂದು, ರಾಜಾರಾಮ, ರಾಮಚಂದ್ರ ದೇಶಪಾಂಡೆ, ಶ್ರೀ ಸಾಂಬದೀಕ್ಷಿತರು, ಶ್ರೀ ಸಖಾರಾಮ ಗರ್ದೆ ಮೊದಲಾದವರು ತಮ್ಮ ಗ್ರಂಥಗಳಲ್ಲಿ ಸ್ಪಷ್ಟವಾದ ಅಭಿಪ್ರಾಯ ಪಟ್ಟಿದ್ದಾರೆ.

**"ಕುಟುಂಬಿನ್ಯೋದರೆ ತೇಜ ಸಮುದ್ಭೂತಂ ಮಹತ್ತರಂ ।**
**ಸತ್ಯಾಂ ದೌಹೃದಚಿನ್ಹಾನಿ ಶೋಭನಾನಿ ಚಕಾಶಿರೇ ॥**

**ಶ್ರೀ ಚಿ. ಮಹಾತ್ಮ್ಯ**

"ಸಾಧ್ವೀ ಶಿರೋಮಣಿ ಲಕ್ಷ್ಮೀಮಾತೆಯ ಉದರದಲ್ಲಿ ಮಹತ್ತರವಾದ ತೇಜವೊಂದು ಉತ್ಪನ್ನವಾಯಿತು. ಅವಳಲ್ಲಿ ಉದಾತ್ತವಾದ ಬಯಕೆಗಳೂ ತೋರಿದವು."

**ಶುದ್ಧೀ ಮಾಘದಿನೀ ಸುಪುತ್ರ ಜನನೀ ಝಾಲೀ ಜನೀ ಗರ್ಭಿಣೀ ।**
**ದಾವೀ ಗರ್ಭಕಳಾ ದಿನೀದಿನಿ ಬಹೂ ಲೋಕಾಹಿತಾಕಾರಿಣೀ ॥**
**ಲಕ್ಷ್ಮೀ ನಾಮ ಕ್ರಿಯೇಸ ಸಾರ್ಥಕ ಕರೀ ಪೂರ್ಣತ್ವ ಸಾಂಗೋಪಮಾ ।**
**ಡೋಹಾಳೀ ಪುರವೀ ಸು ಉತ್ತಮ ಪತೀ ತ್ಯಾಚೀ ತಯಾ ಊಪಮಾ ॥**

**ಶ್ರೀ ಮಚ್ಚರಿತ್ರ ಅ. ೫, ಶ್ಲೋ. ೨೭.**

**"ಶಂಕರ ಪ್ರವೇಶೇ ಪತಿವ್ರತಾ ಉದರೀ ।**
**ಲಕ್ಷ್ಮೀಮಾತಾ ಝಾಲೀ ಗರೋದರೀ ॥"**

**ಶ್ರೀ ಸಾಂಬದೀ ಅ. ೩, ಓವೀ ೫೧**

"ಸಾಕ್ಷಾತ್ ಶಂಕರನೇ ಲಕ್ಷ್ಮೀಮಾತೆಯ ಉದರವನ್ನು ಪ್ರವೇಶಿಸಿದನು."

ದಿನೇದಿನೇ ಲಕ್ಷ್ಮೀಮಾತೆಯ ಗರ್ಭವು ಬೆಳೆಯತೊಡಗಿತು. ಲಕ್ಷ್ಮೀಮಾತೆಯು ಚಿದಂಬರ ಧ್ಯಾನದಲ್ಲಿ ತನ್ಮಯಳಾಗಿ ಕುಳಿತುಕೊಳ್ಳುತ್ತಿದ್ದಳು. ಸಾಮಾನ್ಯ ಸ್ತ್ರೀಯರಿಗಾಗುವಂತೆ, ಆಹಾರ–ವಿಹಾರಗಳ ವಿಷಯವಾಗಿ, ಯಾವ ಬಯಕೆಗಳೂ ಆಕೆಗೆ ಆಗಲಿಲ್ಲ. ಮಾರ್ತಂಡದೀಕ್ಷಿತರು ಧ್ಯಾನಸ್ಥಳಾದ ಪತ್ನಿಯನ್ನು ಕಂಡು, "ಪ್ರಿಯೇ ನೀನೇನು ಯೋಚಿಸುತ್ತಿರುವಿ? ನಿನ್ನ ಬಯಕೆ ಏನಿದೆ ಹೇಳು; ನಾನದನ್ನು ಸತ್ಯವಾಗಿ ಪೂರ್ಣ ಮಾಡುವೆ" ಎಂದು ಕೇಳಿದರು. ಆಗ್ಗೆ ಲಕ್ಷ್ಮೀಮಾತೆಯು ನುಡಿದಳು. "ನಿರೀಚ್ಛಳಾಗಿರುವ ನನಗೆ ಯಾವ ಬಯಕೆ ಎಂದು ಕೇಳುವಿರಾ? ನಾನು ಸರ್ವತ್ರದಲ್ಲಿಯೂ ಇರುವೆನು; ನಾನು ಸ್ವಾನಂದ ಸಾಮ್ರಾಜ್ಯದಲ್ಲಿ ನಲಿಯುತ್ತಿರುವೆ. ನನಗೆ ಧರ್ಮಸ್ಥಾಪನೆಯನ್ನು ಮಾಡಬೇಕಾಗಿದೆ. ಕಲಿಯ ಗರ್ವಹರಣ ಮಾಡಬೇಕಾಗಿದೆ; ಇದೇ ನನ್ನ ಬಯಕೆ," ಈ ನುಡಿಗಳನ್ನು ಕೇಳಿ ಮಾರ್ತಂಡದೀಕ್ಷಿತರು ಅಚ್ಚರಿಗೊಂಡರು.

ಆಗಾಗ್ಗೆ ಮಡದಿಯ ಭಾವಾವೇಶವನ್ನು ಕಂಡು ಸಂತುಷ್ಟರಾಗುತ್ತಿದ್ದರು. ಸುಮುಹೂರ್ತದಲ್ಲಿ ಸೀಮಂತೋನ್ನಯನ (ಉಡಿ ತುಂಬುವ) ಸಂಸ್ಕಾರವನ್ನು ಮಾಡಿದರು. ದಿನದಿನವೂ ಲಕ್ಷ್ಮೀಮಾತೆಯ ಉದರದಲ್ಲಿ ಗರ್ಭವು ಬೆಳೆದಂತೆ, ಅವಳ ಮುಖದ ಕಾಂತಿಯೂ ಕೂಡ ಹೆಚ್ಚಿತು. ಸರ್ವಾಂತರ್ಯಾಮಿ, ಸರ್ವಾಂಗಸುಂದರನಾದ ಚಿದಂಬರನ ತೇಜವೇ ಅವಳ ಮುಖದಲ್ಲಿ ಕಾಣುವಂತಿತ್ತು. ಮುಂಗೋಡ ಪುರವಾಸಿಗಳೆಲ್ಲ ಹರ್ಷಭರಿತರಾದರು. ನವ ಮಾಸಗಳು ತುಂಬಿದ ಮೇಲೆ, ಹತ್ತನೆಯ ತಿಂಗಳಲ್ಲಿ, ಶಕೆ ೧೬೫೦ ಬಹುಧಾನ್ಯ ಸಂವತ್ಸರದ ಕಾರ್ತಿಕ ವದ್ಯ ಷಷ್ಠಿ, (೧೭೫೮ ಇ. ಸ.) ಸೋಮವಾರ ಸೂರ್ಯೋದಯದ ನಂತರ, ೧೦ ಗಳಿಗೆ, ೫೫ ಪಳಗಳಲ್ಲಿ ಪರಬ್ರಹ್ಮ ಸ್ವರೂಪನಾದ ಚಿದಂಬರನು ಲಕ್ಷ್ಮೀಮಾತೆಯ ಉದರದಿಂದ ಜನಿಸಿದನು. ಲಕ್ಷ್ಮೀಮಾತೆಗೆ ಯಾವ ಪ್ರಸೂತಿ ವೇದನೆ ಇಲ್ಲದೆ, ಚಿದಂಬರನು ಅಷ್ಟವರ್ಷಾತ್ಮಕ ಬಾಲಕನಾಗಿ ಶಂಖಚಕ್ರಧಾರಿಯಾಗಿ, ಸೋಮವಾರ ಅವತರಿಸಿದನು. ಮರುದಿನ ಪ್ರಾತಃಕಾಲಕ್ಕೆ (ಮಂಗಳವಾರ) ಶಿಶುರೂಪವನ್ನು ತಾಳಿದನೆಂದು, ಶ್ರೀ ರಾಜಾರಾಮ ಹಾಗೂ ಶ್ರೀಮತಿ ವಿಠಾಬಾಯಿ ತಮ್ಮ ಅಭಂಗಗಳಲ್ಲಿ ಹೇಳಿದ್ದಾರೆ. ಸಧ್ಯ ಚಿದಂಬರ ಭಕ್ತರಿಗೆ, ಚಿದಂಬರ ಜನ್ಮ ಸೋಮವಾರವೋ, ಮಂಗಳವಾರವೋ ಎಂದು ಒಂದು ಸಮಸ್ಯೆಯಾ–

ಗಿತ್ತು. ಆದರೆ ರಾಜಾರಾಮನು ರಚಿಸಿದ ಅವತಾರ ಅಭಂಗಗಳಿಂದಲೂ ಹಾಗೂ ವಿಠಾಬಾಯಿಯ ಅಭಂಗಗಳಿಂದದಲೂ, ಚಿದಂಬರನು ಸೋಮವಾರ ಅಷ್ಟ-ವರ್ಷಾತ್ಮಕನಾಗಿ ಅವತರಿಸಿ, ಮಂಗಳವಾರ ಶಿಶುರೂಪವನ್ನು ತಾಳಿದನೆಂಬುವದು ಸ್ಪಷ್ಟವಾಗುತ್ತದೆ. ಈ ಬಗ್ಗೆ ಇಲ್ಲಿ ಮೂಲ ಅಭಂಗಗಳನ್ನೇ ಕೊಡುವೆ. ಮೊದಲು ಸಖಾರಾಮ ತ್ರ್ಯಂಬಕ ಗರ್ದೆ ಅವರು ಕೊಟ್ಟ ಜನ್ಮಕುಂಡಲಿಯನ್ನೂ ಹಾಗೂ ಅವರು ರಚಿಸಿದ ಜನ್ಮಶ್ಲೋಕವನ್ನು (ಅವತಾರ ಸೂಚಿಸುವ) ಶ್ಲೋಕನ್ನು ಕೊಡುವೆ.

**"ಸ್ವಸ್ತಿ ಶ್ರೀ ನೃಪಶಾಲಿವಾಹನ ಶಕೀ ಸೋಳಾಂಕ**
**ಐಂಶೀವರೀ ।**
**ಮಾಸೀ ಊರ್ಜ ಸುಕೃಷ್ಣ ಷಷ್ಠಿ ತಿಥಿ ಹೇ**
**ಶುಭ್ರಾಂಶುಚ್ಯಾವಾಸರೀ ॥**
**ಯೋಗ ಬ್ರಹ್ಮಹಿ ಕರ್ಣತೋ ವಣಿಜ ಹಾ ಬಹ್ವಾನ್ನ**
**ಸಂವತ್ಸರೀ ।**
**ಭೋಗೀ ತಿಷ್ಯ ದಿವಾ ಚಿದಂಬರ ಗುರೂ ಪ್ರತ್ಯಕ್ಷ ಯೇ**
**ಜಾಗರೀ ॥"**

**ಶ್ರೀ ಮಚ್ಚರಿತ್ರ ಪಾ. ೧, ಅ. ೫**

**ಸೋಳಾಂಕ ಐಂಶೀವರೀ—೧೬೮೦ ಶಾ. ಶಕೆ, ಊರ್ಜಮಾಸೀ—ಕಾರ್ತಿಕಮಾಸದಲ್ಲಿ, ಕೃಷ್ಣ ಷಷ್ಠಿ ತಿಥಿ, ವದ್ಯ ಷಷ್ಠಿ, ಶುಭ್ರಾಂಶುಚ್ಯಾ ವಾಸರೀ— ಶುಭ್ರಾಂಶು—ಚಂದ್ರ, ವಾಸರೀ—ವಾರದಲ್ಲಿ ಸೋಮವಾರ ದಿನ**

ಯೋಗ ಬ್ರಹ್ಮ-ಬ್ರಹ್ಮನಾಮ ಯೋಗದಲ್ಲಿ; ವಣಿಜಾಕರಣ-ವಣಿಜಾಕರಣದಲ್ಲಿ. ಬಹ್ವಾನ್ನ ಸಂವತ್ಸರೀ-ಬಹುಧಾನ್ಯ ಸಂವತ್ಸರದಲ್ಲಿ, ತಿಷ್ಯ-ಪುಷ್ಯ, ನಕ್ಷತ್ರದಲ್ಲಿ, ಪ್ರತ್ಯಕ್ಷ ಯೇ ಜಾಗರೀ-ಪರಮಾತ್ಮನು ಪ್ರತ್ಯಕ್ಷನಾದನು. (ಅವತರಿಸಿದನು.)

ಮೇಲಿನ ಶ್ಲೋಕದಲ್ಲಿ ಶ್ರೀ ಗರ್ದೆಯವರು, ಸಂವತ್ಸರ, ಮಾಸ, ಪಕ್ಷ, ತಿಥಿ, ವಾರ, ಯೋಗ, ಕರಣ ಮೊದಲಾದವುಗಳನ್ನು ಕೊಟ್ಟಿದ್ದಾರೆ. ಅಲ್ಲದೇ ಜನ್ಮಕುಂಡಲಿಯನ್ನೂ ಬರೆದಿದ್ದಾರೆ.

ಓಂ

## ಜನ್ಮಲಗ್ನ ಕುಂಡಲಿ.




ಶಾ. ಶಕೆ ೧೬೮೦ (ಇ. ಸ. ೧೭೫೮ ರಲ್ಲಿ) ಕಾರ್ತಿಕ ವದ್ಯ ಷಷ್ಠಿ, ಸೋಮವಾರ ಮುಂಜಾನೆ, ೧೦ ಘ. ೫೫ ಪ. ಚಿದಂಬರ ಜನ್ಮ.

ಇನ್ನು ರಾಜಾರಾಮ ಹಾಗು ವಿಠಾಬಾಯಿಯ ಅಭಂಗಗಳನ್ನು ಕೊಡುವೆ

ಅವತಾರ ಧರೀ ಮಾರ್ಝಾ ಚಿದಂಬರ।
ಪ್ರಥಮ ಚರಣ ಕಲಿಯುಗ॥ ॥ ೧ ॥
ಸೋಳಾಸೇತೇ ಐಂಶೀ ಬಹುಧಾನ್ಯ ಸಂವತ್ಸರ।
ಮಾಸ ತೋ ಜಾಣ ಕಾರ್ತಿಕ ಪೈ ॥ ೨ ॥
ಕೃಷ್ಣಪಕ್ಷ ಷಷ್ಠಿ ಸೋಮವಾರ ಜಾಣ।
ಅಷ್ಟವರ್ಷಾತ್ಮಕ ಪ್ರಗಟಲಾ ॥ ೩ ॥
ಪ್ರಸವವೇದನಾ ನಾಹಿ ಮಾತೆ ಲಾಗಿ ಪಾಹೀ।
ಪುಢೇ ಉಭಾ ರಾಹೀ ಪ್ರತ್ಯಕ್ಷ ತೋ ॥ ೪ ॥

**ನ್ಹಾತಾನ್ಹುಣೇ ಸ್ವಾಮೀ ಲಹಾನ ಹ್ವಾವೆ ಆಪಣ ।**
**ಮ್ಹಣೂಲಾಗಲೀ ಜಾಣ ವೇಳೋವೇಳೀ ॥ ೫ ॥**
**ಸರ್ವಸಾಂಗೂನ ಸ್ವಾಮಿ ಏಕದಿವಸ ಜಾಣ ।**
**ಝಾಲಾ ಬಾಳರೂಪ ಮಂಗಳವಾರ ॥ ೬ ॥**
**ಮ್ಹಣೋನಿಯಾ ಜಾಣ ಮಂಗಳವಾರೀ ಖೂಣ ।**
**ದಾವೀತಸೇ ಜಾಣ ಬಾಳಪಣೀಚಾ ॥ ೭ ॥**
**ದಾಸ ಮ್ಹಣೆ ಮುಳೆ ಜನ್ಮಲಾಚಿ ನಾಹಿ ।**
**ತ್ಯಾಸೀ ಮರಣ ನಾಹೀ ಸಮಜಾ ತುಹ್ಮೀ ॥ ೮ ॥**

ಈ ಅಭಂಗಗಳ ಅಭಿಪ್ರಾಯದಂತೆ, ಚಿದಂಬರನು ·ಸೋಮವಾರ ಅಷ್ಟ ವರ್ಷಾತ್ಮಕನಾಗಿ ಅವತರಿಸಿದನೆಂದೂ, ತಾಯಿಯು ಶಿಶುರೂಪವನ್ನು ತಾಳ ಬೇಕೆಂದು ಮತ್ತೆಮತ್ತೆ ಮೊರೆ ಇಟ್ಟದ್ದರಿಂದ, ಮಂಗಳವಾರ ಬೆಳಿಗ್ಗೆ ಶಿಶು ರೂಪವನ್ನು ತಾಳಿದನೆಂಬುವದು ಸ್ಪಷ್ಟವಾಗುತ್ತದೆ, ಇದೇ ಅಭಿಪ್ರಾಯವನ್ನು ಸಾಧ್ವೀ ವಿಠಾಬಾಯಿಯೂ ಕೂಡ ತನ್ನ ಅಭಂಗಗಳಲ್ಲಿ ಸ್ಪಷ್ಟಪಡಿಸಿದ್ದಾಳೆ.

**ಲೌಕಿಕಕರಿತಾ ಗರ್ಭಧರಿತೀ ಲಕ್ಷ್ಮೀ ।**
**ನಸೇ ವೇದನಾ ತಿಲಾ ತಿಲಭರೀ ॥ ೧ ॥**
**ಅಷ್ಟವರ್ಷಾತ್ಮಕ ಪ್ರಗಟೋನಿ ರಾಹತೀ ।**
**ಸಾಷ್ಟಾಂಗ ಕರಿತೀ ಉಭಯತಾನೀ ॥ ೨ ॥**
**ದೇವಕೇಚೆ ವೇಳೀ ಇಚ್ಛಾ ತುಮಚೀ ಆಯಿ ।**
**ಬಾಳಲೀಲಾ ಪಾಹಾವೇ ಮ್ಹಣೂನಿಯಾ ॥ ೩ ॥**
**ಹಳಹಳಹೋ ಝಾಲೇ ಬಹುತ ತುಮ್ಹಾ ತೇಂಹ್ವಾ ।**
**ವಾಸನಾಹೋ ಆಮ್ಹಾ ಬಹುತ ಹೋತಾ ॥ ೪ ॥**
**ಮ್ಹಣುನಿ ಸಾಂಗೂನಿ ನಾರಾಯಣ ತೇಂಹ್ವಾ ।**
**ಬಾಳರೂಪ ಝಾಲೇ ಮಂಗಳವಾರೀ ॥ ೫ ॥**

**ಅಭಂಗ ವಿಠಾಬಾಯಿ**

–ಚಿದಂಬರ ಅವತಾರದ ಪೌರಾಣಿಕ ಹಿನ್ನೆಲೆ–

ಇದುವರೆಗೆ ಚಿದಂಬರ ಅವತಾರದ ಐತಿಹಾಸಿಕ ಹಿನ್ನೆಲೆಯನ್ನು ವಿವೇಚಿಸ ಲಾಯಿತು. ಇನ್ನು ಈ ಅವತಾರದ ಪೌರಾಣಿಕ ಹಿನ್ನೆಲೆಯನ್ನು ವಿವೇಚಿಸೋಣ.

ವಸುದೇವದೇವಕಿಯರು, ಏಳು ಜನ್ಮಗಳಲ್ಲಿ ಘೋರ ತಪಶ್ಚರ್ಯ ಆಚರಿಸುತ್ತಿದ್ದರೂ. ಕೂಡ ಸಂತಾನ ಪ್ರಾಪ್ತಿಯಾಗಲಿಲ್ಲ. ಕೊನೆಗೆ ಕಂಸನ ಸೆರೆಮನೆಯಲ್ಲಿರುವಾಗ್ಗೆ, ಶ್ರೀ ಕೃಷ್ಣಪರಮಾತ್ಮನು ಅಷ್ಟವರ್ಷಾತ್ಮಕನಾಗಿ, ದೇವಕಿಯ ಪುತ್ರನಾಗಿ ಪ್ರಕಟನಾಗಲು, ದಂಪತಿಗಳು ಹರ್ಷಭರಿತರಾದರು. ಆದರೆ ಕಂಸನನ್ನು ಕೊಂದು ಧರ್ಮಸ್ಥಾಪನೆಯನ್ನು ಮಾಡಲೋಸುಗ ಸೆರೆಮನೆಯಿಂದ ಪಾರಾಗಿ, ನಂದಯಶೋದೆಯರ ಮಗುವಾಗಿ ಬೆಳೆಯಬೇಕಾಯಿತು. ಕೃಷ್ಣಾವತಾರದಲ್ಲಿ ಬಾಲ್ಯಸುಖ ತಮಗೆ ಸಿಗಲಿಲ್ಲವೆಂದು, ವಸುದೇವದೇವಕಿಯರು, ಕೃಷ್ಣನನ್ನು ದೀನವಾಣಿಯಿಂದ ಬೇಡಿಕೊಂಡರು.

**"ಶೇವಟಿ ಪುತ್ರಾಸೀ ವಿನವೀತಿ ಉಭಯತಾ ।**
**ಕರುಣಾಶಬ್ದ ಮಾತಾ ಬೋಲತಸೇ ॥ ೪ ॥**
**ಕಂಟಕಾಚೇ ಅಗ್ರಿ ಬಾಪಾ ತಪಕೇಲೆ ।**
**ಸಾತಜನ್ಮ ಗೇಲೇ ಅನುಷ್ಠಾನೀಂ ॥ ೫ ॥**
**ತ್ಯಾವರೀ ಹೇ ಕೃಪಾ ಕೇಲೀ ಹೋ ಭಗವಂತಾ ।**
**ಬಂಧಹಾ ಭೋಗಿತಾ ಜನ್ಮ ಗೇಲಾ ॥ ೬ ॥**
**ನವಮಾಸೀ ತರೀ ಉದರೀ ವಾಹೀಲಾ ।**
**ದಾಖವಿಲೀ ಲೀಲಾ ಯಶೋದೇಸೀ ॥ ೭ ॥**
**ದಾಸ ಮ್ಹಣೇ ಐಸೀ ವಿನಂತಿ ಕರೀತಾ ।**
**ರೋಮಾಂಚ ಉಭಯತಾ ಕಂಠ ದಾಟೇ ॥ ೮ ॥**

**ಬಾಲಕ್ರೀಡಾ ಅ. ೩೪, ರಾಜಾರಾಮ**

"ದೇವಾ ಏಳು ಜನ್ಮಗಳಲ್ಲಿ ಘೋರ ತಪಶ್ಚರ್ಯ ಮಾಡಿದ್ದರಿಂದ ಈಗ ನೀನು ಅವತರಿಸಿ ಬಂದಿರುವಿ. ನಮ್ಮ ಜೀವನವೇ ಸೆರೆಮನೆಯಲ್ಲಿ ಕಳೆದು ಹೋಯಿತು. ನಿನ್ನನ್ನು ೯ ತಿಂಗಳು ಹೊಟ್ಟೆಯಲ್ಲಿಟ್ಟುಕೊಂಡೆ; ಆದರೆ ಬಾಲ್ಯ ಸುಖವು ಮಾತ್ರ ಯಶೋದೆಗೆ ಸಿಗುವದು." ಎಂದು ನುಡಿಯುತ್ತಿರಲು ದಂಪತಿಗಳಿಗೆ ರೋಮಾಂಚನವಾಗಿ, ದೇವಕಿಯ ಕಂಠವು ತುಂಬಿ ಬಂದಿತು. ಗದ್ಗದ ಸ್ವರದಿಂದ "ದೇವಾ ನಿನ್ನನ್ನು ತೊಡೆಯಮೇಲೆ ಮಲಗಿಸಿಕೊಂಡು ಎರೆಯಲಿಲ್ಲ; ನಿನಗೆ ಮೊಲೆ ಕುಡಿಸಲಿಲ್ಲಾ; ನಿನ್ನ ಕೂಡ ನಲಿದಾಡಲಿಲ್ಲ; ನಿನ್ನ

ತೊದಲ್ನುಡಿಗಳನ್ನು ಕೇಳಿ ಆನಂದ ಪಡಲಿಲ್ಲ; ಭಗವಂತಾ ನೀನು ನನಗೆ ಮಗನಾಗಿ ಹುಟ್ಟಿದರೂ ನಾನು ಬಂಜೆಯೇ ಸರಿ; ನಾನು ಎಂತಹ ದುರ್ದೈವಿ?" ಎಂದು ಪರಿಪರಿಯಿಂದ ತನ್ನ ದುಃಖವನ್ನು ಕೃಷ್ಣನಲ್ಲಿ ತೋಡಿಕೊಂಡಳು.

**"ನಾಹೀ ನ್ಯಾ ನ್ಹಾಣೀಲೆ ಕಧೀ ಪಾಯಾಾವರೀ ।**
**ಕಡೆ ಖಾಂದ್ಯಾವರೀ ನ ದೇಖೀಲೇ ॥**
**ಆಡವೇ ಘೇವೋನಿ ಕಧೀ ನ ಪಾಜೀಲೇ ।**
**ವಚನ ಆಪುಲೇ ಸತ್ಯ ಕೇಲೇ ॥**
**ದಾಸ ಮ್ಹಣೇ ಐಸೀ ಐಕತಾ ಕರುಣಾ ।**
**ದ್ರವ ನಾರಾಯಣ ಆಲಾ ತೇಂಹ್ವಾ ॥**

**"ಬಾಲಕ್ರೀಡಾ ಅ. ೩೪, ರಾಜಾರಾಮು"**

ಆಗ ನಾರಾಯಣನ ಹೃದಯವು ಕರಗಿ, ತಾಯಿಯಾದ ದೇವಕಿಯನ್ನು ಮೈದಡವಿ ಸಮಾಧಾನ ಮಾಡಿದನು. "ಮಾತೇ ನೀನು ಚಿಂತಿಸಬೇಡ; ನಿನ್ನ ಮನದಾಶೆಯನ್ನು ನಾನು ಪೂರ್ಣ ಮಾಡುವೆನು. ಕಲಿಯುಗದಲ್ಲಿ ನೀವು ಧರ್ಮ ಸ್ಥಾಪನೆಗಾಗಿ, ಬ್ರಾಹ್ಮಣರಾಗಿ, ಚಿದಂಬರ ಕ್ಷೇತ್ರದಲ್ಲಿ (ಆಕಾಶ ಚಿದಂಬರದಲ್ಲಿ) ತಪವನ್ನಾಚರಿಸುವಿರಿ. ಆಗ್ಗೆ ನಾನು ನಿಮ್ಮ ಮಗನಾಗಿ ಹುಟ್ಟಿ ಬಂದು, ನಿಮಗೆ ಬಾಲಲೀಲೆಯ ಸುಖವನ್ನೆಲ್ಲ ಕೊಡುವೆ" ಎಂದು ಅಭಯವಿತ್ತನು.

**"ಕಲಿಯುಗೀ ಆವ್ಹಾ ಅಸೇ ಹೋ ಕಾರಣ ।**
**ಅವತಾರ ಬ್ರಾಹ್ಮಣ ಘೇಣೇ ಲಾಗೇ ॥**
**ತುಮ್ಹಿ ಯಾಾಲ ಪುಢೆ ಬ್ರಾಹ್ಮಣ ಅವತಾರೀ ।**
**ತಪ ಚಿದಂಬರೀ ಕರಿತೇ ವ್ಹಾಲ ॥**
**ದಾಸ ಮ್ಹಣೇ ಐಸೇ ಅಭಯ ತೇ ದಿಲ್ಹೇ ।**
**ತೇಚಿ ಪುರವೀಲೇ ಚಿದಂಬರೇ ॥**

**"ಬಾಲಕ್ರೀಡಾ ಅ. ೩೫"**

ತನ್ನ ವಚನದಂತೆ ಪರಮಾತ್ಮನು, ಕಲಿಯುಗದಲ್ಲಿ, ವಸುದೇವ-ದೇವಕಿಯರ ಅವತಾರಿಗಳಾದ, ಮಲ್ಹಾರ ದೀಕ್ಷಿತ (ಮಾರ್ತಂಡ ದೀಕ್ಷಿತ) ಮತ್ತು ಲಕ್ಷ್ಮೀಮಾತೆಯ ಪುತ್ರನಾಗಿ, ಚಿದಂಬರ ರೂಪದಿಂದ, ಶಕೆ ೧೬೮೦, ಕಾರ್ತಿಕ

ವದ್ಯ ಷಷ್ಠಿ, ಸೋಮವಾರ (ಇ. ಸ. ೧೭೫೮.) ಮುರಗೋಡದಲ್ಲಿ (ಜಿ. ಬೆಳಗಾಂವ) ಅವತರಿಸಿದನು.

ಶ್ರೀ ಮಲ್ಲಾರಿ ದೀಕ್ಷಿತರು ಹಾಗೂ ಲಕ್ಷ್ಮೀದೇವಿಯರು, ವಸುದೇವ ದೇವಕಿಯರ ಅವತಾರವೆಂದು ರಾಜಾರಾಮನೂ ಹೇಳಿದ್ದಾನೆ.

"ವಸುದೇವ ಅವತಾರ ಮಲ್ಹಾರ ದೀಕ್ಷಿತ ।
ನಾಮ ಹೇ ವಿಖ್ಯಾತ ಸಾಜೇ ಜ್ಯಾಸೀ ॥
ತಪಸ್ವೀ ತೋ ಘೋರ ಮಹಾಯೋಗಜ್ಞಾನೀ ।
ಅಗ್ನಿಸೇವಾ ಕರುನೀ ರಾಹೇ ಸದಾ ॥
ಅತ್ರೀಋಷೀ ಐಸಾ ವ್ರತ ತಪಧಾರೀ ।
ನಯೇ ತ್ಯಾಸೀ ಸರೀ ದುಜಾ ಕೋಣೀ ॥
ತಯಾಚೀ ತೇ ಕಾಂತಾ ಮಹಾಪತಿವ್ರತಾ ।
ಲಕ್ಷುಮೀ ವಿಖ್ಯಾತ ನಾಮ ಸಾಜೇ ॥
ಅನಸೂಯಾ ಐಸೀ ಪತಿವ್ರತಾ ಪೂರ್ಣ ।
ಅಂಶ ತೀಹೀ ಜಾಣ ದೇವಕೀಚಾ ॥
ಋಷೀ ಮಾರ್ಗೇ ಐಸೀ ಉಭಯತಾ ವರ್ತತೀ ।
ನಸೇ ತ್ಯಾ ಸಂತತೀ ಪೋಟೀ ಕಾಹೀ ॥
ದಾಸ ಮ್ಹಣೇ ಮಾತಾ ಝುರತೀ ಮನಾಂತ ।
ಕಧೀ ಭಗವಂತ ಪಾವೇ ಮ್ಹಣತೀ ॥

"ಬಾಲಕ್ರೀಡಾ, ಅ. ೩೬"

ಜಯಂತಿಯ ಕಾಲಕ್ಕೆ ಕೆಳಗಿನ ಅವತಾರ ಅಭಂಗವನ್ನು ಹಾಗೂ "ಸ್ವಸ್ತಿಶ್ರೀ ನೃಪ....ಜಾಗರೀ" ಎಂಬುವ ಶ್ಲೋಕ ಅಂದು, ಚಿದಂಬರ ಪ್ರತೀಕವಾದ ಟೆಂಗಿನಕಾಯಿಯ ಮೇಲೆ, ಗುಲಾಲ, ಬುಕ್ಕಿಟ್ಟು ಅರ್ಪಿಸಬೇಕು.

ಐಸೇ ಹೋತಾ ನವಮಾಸ । ಗರ್ಭಾ ಝಾಲೆ ಪೂರ್ಣ ದಿವಸ ॥ ೧ ॥ ಪೂರ್ಣ ಬ್ರಹ್ಮ ಸನಾತನ । ಘೇತಿ ಅವತಾರ ಸಗುಣ ॥ ೨ ॥ ಕಲಿಯುಗ ಪ್ರಥಮ ಚರಣ । ಶಕೇ ಅಸೇ ಶಾಲೀವಾಹನ ॥ ೩ ॥ ಶಕೇ ಸೋಳಾಸೇ ತೇ ಐಂಶೀ । ಜನ್ಮಾಯೇತೀ

ಹೃಷೀಕೇಶೀ ॥ ೪ ॥ ಬಹುಧಾನ್ಯ ಸಂವತ್ಸರೀ । ಯೇತೀ ಅವ
ತಾರ ಹರೀ ॥ ೫ ॥ ಮಾಸ ಕಾರ್ತಿಕ ಪೈ ಥೋರ । ವದ್ಯ ಷಷ್ಠೀ
ಮಂಗಳವಾರ ॥ ೬ ॥ ಪ್ರಸೂತಕಾಳೀ ವ್ಯಥಾ ಕಾಹೀ । ನಸೇ
ಮಾತೇ ಲಾಗೀ ತಾವೀ ॥ ೭ ॥ ಖೋಲೀ ಅಸೇ ಮಾಜಘರೀ ।
ಮಾತಾ ಸುಖೇ ನಿದ್ರಾಕರೀ ॥ ೮ ॥ ಪ್ರಾತಃಕಾಳ ಸವಿಸ್ತರ । ದಿವಸ
ಆಲಾ ದೋನಪ್ರಹರ ॥ ೯ ॥ ತಯೇ ವೇಳೀ ಹೋ ಅವತಾರ ।
ಪ್ರಕಟಲಾ ಚಿದಂಬರ ॥ ೧೦ ॥ ಪ್ರಕಾಶ ಝಾಲಾ ತ್ಯಾ ಮಂದಿರೀ ।
ಮಾತಾವಿಸ್ಮೀತ ಅಂತರಿ ॥ ೧೧ ॥ ಪುಢೇ ಪಾಹೇ ಡೋಳೇಭರೀ ।
ಬಾಳಮೂರ್ತಿ ತೇ ಸಾಜರೀ ॥ ೧೨ ॥ ಹರ್ಷಯುಕ್ತ ಮಾತಾ
ಮನೀ । ಬಾಳ ಪಾಹತೇ ಹಾಸೋನಿ ॥ ೧೩ ॥ ಹರ್ಷ ಪಿತ್ಯಾಸೀ
ಅಂತರೀ । ವಾದ್ಯವಾಜತಾತೀ ದ್ವಾರೀ ॥ ೧೪ ॥ ದೀಕ್ಷಿತ ಕರೀ
ಮಂಗಲಸ್ನಾನ । ವಾಟೀ ಬ್ರಾಹ್ಮಣಾಸೀ ದಾನ ॥ ೧೫ ॥ ಕರಿತೀ
ಜಾತಕ ವರ್ಣನ । ಮ್ಹಣತೀ ಅವತಾರ ಪೂರ್ಣ ॥ ೧೬ ॥ ದಾಸ
ಮ್ಹಣೇ ಸಗುಣ ದೇವ । ಚಿದಂಬರ ಜನ್ಮನಾಮ ॥ ೧೭ ॥

"ಬಾಲಕ್ರೀಡಾ ಅ. ೪೫"

ಇಲ್ಲಿ, "ವದ್ಯ ಷಷ್ಠಿ ಮಂಗಳವಾರ"

ಎಂಬುವ ಶಬ್ದ ಪ್ರಯೋಗ ಮಾಡಿದ್ದಾನೆ ರಾಜಾರಾಮ. ಇಲ್ಲಿ ಒಂದು ಸಂಶಯ ಬರುವದು ಸ್ವಾಭಾವಿಕ. ಚಿದಂಬರನು ಹುಟ್ಟಿದ್ದು ಸೋಮವಾರವೋ ಮಂಗಳವಾರವೋ ಎಂದು. ಈ ಸಂಶಯದ ನಿರಸನವನ್ನು ರಾಜಾರಾಮನು ತನ್ನ ಅಭಂಗದಲ್ಲಿ ಮಾಡಿದ್ದನ್ನು ಹಿಂದೆ ಕೊಟ್ಟಿದ್ದೇನೆ. ತಾತ್ಪರ್ಯ ಇಷ್ಟೇ. ಸೋಮವಾರ ಅಷ್ಟವರ್ಷಾತ್ಮಕನಾಗಿ ಅವತರಿಸಿ, ಮಂಗಳವಾರ ಶಿಶುರೂಪ ಧಾರಣ ಮಾಡಿದನು. ಎರಡೂ ದಿನ ಷಷ್ಠಿ ಇದ್ದುದರಿಂದ, ಕಾರ್ತಿಕ ವದ್ಯ ಷಷ್ಠಿ ಜನ್ಮ ತಿಥಿ ಎನ್ನುವ ವಿಷಯಕ್ಕೆ ಬಾಧೆ ಇಲ್ಲ. "ನಾನು ಮೃದಂಗವಿದ್ದಂತೆ; ಚಿದಂಬರನು ಮೃದಂಗವಾದಕ. ಅವನು ನುಡಿಸಿದಂತೆ ನಾನು ನುಡಿಯುವವ; ಇದರಲ್ಲಿ ಒಂದು ಅಕ್ಷರವಾದರೂ ಸುಳ್ಳು ಇದ್ದರೆ, ನನಗೆ ರೌರವ ನರಕ ಪ್ರಾಪ್ತಿಯಾಗಲಿ" ಎಂದು ಡಂಗುರ ಸಾರಿದ ರಾಜಾರಾಮನನ್ನು ನಾವು ನಂಬಲೇ ಬೇಕು.

ಅವನ ಅಭಂಗವಾಣಿಯನ್ನು ನಂಬಿ ನಾವೆಲ್ಲರೂ ಚಿದಂಬರ ಜಯಜಯಕಾರ ಮಾಡೋಣ.

**"ಔದುಂಬರ ನಿವಾಸೀ ಭಕ್ತಾಭಿಮಾನೀ ರಾಜಾಧಿರಾಜ ಸದ್ಗುರು ಶ್ರೀ ಶಿವ ಚಿದಂಬರೇಶ್ವರ ಗುರುಮಹಾರಾಜಕೀ ಜಯ"**

ಚಿದಂಬರ ಜನ್ಮವಾದ ಕೂಡಲೇ ಮಗುವಿಗೆ ಮಂಗಲಸ್ನಾನ ಮಾಡಿಸಿ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಲಾಯಿತು. ರಾಜಾರಾಮನು "ನಾಹಾಣಿ ಪದ" (ಎರೆಯುವ ಹಾಡು) ಹಾಗೂ "ಪಾಳಣಾ ಪದ" (ಜೋಗುಳ ಪದ) ರಚಿಸಿದ್ದಾನೆ. ಅವುಗಳನ್ನು "ಶ್ರೀ ಚಿದಂಬರ ಜಯಂತೀ ಆಚರಿಸುವ ವಿಧಾನ" ಎಂಬ ಕಿರಣದಲ್ಲಿ ಕೊಟ್ಟಿದ್ದೇನೆ. ಭಕ್ತರು ಅಲ್ಲಿ ನೋಡಿಕೊಂಡು ಅವುಗಳ ಉಪಯೋಗವನ್ನು ಮಾಡಿಕೊಳ್ಳಬೇಕು.

**ಚಿದಂಬರ ಮಹಾದೇವ ಪಾಹಿಮಾಂ ಕರುಣಾಕರ ।**
**ಸರ್ವಸಿದ್ಧಿಪ್ರದಾತಾ ತ್ವಂ ಚಿದಂಬರ ನಮೋಽಸ್ತುತೇ ॥**
**ಚಿದಂಬರ ನಮಸ್ತೇಽಸ್ತು ಚಿಂತಿತಾರ್ಥಪ್ರದಾಯಿನೇ ।**
**ಔದುಂಬರಸದಾವಾಸ ಚಿದಂಬರ ನಮೋಽಸ್ತುತೇ ॥**

**ಜಯ ಚಿದಂಬರ**





# ಶ್ರೀ ಚಿದಂಬರ ಪ್ರಕಾಶ, ಭಾಗ ೧

### ಮೂರನೆಯ ಕಿರಣ

## ಶ್ರೀ ಚಿದಂಬರ ಮಹಾಸ್ವಾಮಿಗಳ ಅವತಾರ ಸಮಯದ ವೈಶಿಷ್ಟ್ಯ

ಮಹಾಸ್ವಾಮಿಗಳು ಅವತರಿಸಿದ ಸಂವತ್ಸರ, ಮಾಸ, ತಿಥಿ, ವಾರ, ನಕ್ಷತ್ರ, ಕರಣ, ಯೋಗ ಮೊದಲಾದವುಗಳು ಪರಿಪೂರ್ಣತೆಯ ದ್ಯೋತಕಗಳಾಗಿವೆ.

೧) ಬಹುಧಾನ್ಯ ಸಂವತ್ಸರ—ಜಗತ್ತಿನಲ್ಲಿ ಧಾನ್ಯವು ಸಮೃದ್ಧಿಯಾಗಿ ಸಕಲರಿಗೂ ಸುಖಶಾಂತಿಗಳು ಸಿಗಲಿ ಎಂದು "ಬಹುಧಾನ್ಯ" ಸಂವತ್ಸರದಲ್ಲಿ ಅವತಾರ.

೨) ಕಾರ್ತಿಕಮಾಸ— ಹರಿಹರರು ಭಿನ್ನರಲ್ಲ ಎಂಬುದನ್ನು ತೋರಿಸಲಿಕ್ಕೆ ಕಾರ್ತಿಕಮಾಸದಲ್ಲಿ ಜನ್ಮ. ಕಾರ್ತಿಕಮಾಸದಲ್ಲಿ, ವೈಕುಂಠ ಚತುರ್ದಶೀ ರಾತ್ರಿಯಲ್ಲಿ ವಿಷ್ಣುವಿನ ಪೂಜೆ ಹಾಗೂ ಬೆಳಗುಮುಂಜಾನೆ ಈಶ್ವರನ ಪೂಜೆಯಾಗುತ್ತವೆ. ಹರಿಹರರ ಪೂಜೆಯು ಅದೇ ದಿನ ನಡೆಯುವದು; ಆದ್ದರಿಂದ ಕಾರ್ತಿಕಮಾಸದಲ್ಲಿ ಅವತಾರ.

೩) ಷಷ್ಠಿ ತಿಥಿ—ಷಷ್ಠಿಗೆ ನಂದಾತಿಥಿಯೆಂದು ಹೆಸರಿದೆ. ಸಕಲ ಚರಾಚರ ಪ್ರಾಣಿಗಳಿಗೆ ಸುಖವಾಗಲೆಂದು ನಂದಾತಿಥಿಯಲ್ಲಿ ಅವತಾರ. ಅಲ್ಲದೇ ಜಗತ್ತಿನಲ್ಲಿರುವ ಷಟ್ಕಗಳೆಲ್ಲ (ಷಟ್ಕ-ಆರರ ಗುಂಪು) ಶ್ರೀ ಚಿದಂಬರ ಮಹಾಸ್ವಾಮಿಯಲ್ಲಿ ತಮಗೆ ಯೋಗ್ಯ ಆಶ್ರಯ ದೊರೆಯುವದೆಂದು ಅವರಲ್ಲಿ ನೆಲೆಸಿದವಂತೆ.

ವೇದದ ಷಡಂಗಗಳು— ಶಿಕ್ಷಾ, ಕಲ್ಪ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಇವೆಲ್ಲವುಗಳು ಚಿದಂಬರನಿಂದ ಪರಿಪೂರ್ಣತೆಯನ್ನು ಪಡೆದವು.

ಷಡ್‌ಋತುಗಳು—ಆಯಾ ಋತುಗಳು ನಿಸರ್ಗಕ್ಕನುಸಾರವಾಗಿ, ಜಲ, ಫಲ, ಧಾನ್ಯ, ಪತ್ರ, ಪುಷ್ಪಾದಿಗಳನ್ನು ಸಮೃದ್ಧಿಯಾಗುವಂತೆ ಮಾಡಲಿ ಎಂದು ಷಷ್ಠಿಯಲ್ಲಿ ಅವತಾರ.

ಷಟ್ಕರ್ಮಗಳು, ಷಡಾಮ್ನಾಯಗಳು, ಷಟ್‌ತಂತ್ರಗಳು, ಷಡ್‌ಯೋಗ ಸಾಧನಗಳು, ಷಡ್ಗುಣಗಳು, ಷಟ್‌ಚಕ್ರಗಳು, ಷಡೂರ್ಮಿಗಳು, ಷಡೈಶ್ವರ್ಯ ಗಳು ಜಗತ್ತಿನಲ್ಲಿ ನೆಲಿಸಲಿ ಎಂದು ಚಿದಂಬರನ ಆಶ್ರಯವನ್ನು ಮಾಡಿದವು ಎಂದು ಶ್ರೀಮಚ್ಚರಿತ್ರಕಾರರಾದ ಸಖಾರಾಮ ಗರ್ದೆಯವರು ವಿವರಿಸಿದ್ದಾರೆ.

೪) ಪುಷ್ಯ ನಕ್ಷತ್ರ—ದೇವತೆಗಳ ಗುರುವಾದ ಬೃಹಸ್ಪತಿಯು ಹುಟ್ಟಿದ್ದು ಪುಷ್ಯ ನಕ್ಷತ್ರದಲ್ಲಿ; ಪುಷ್ಯ ನಕ್ಷತ್ರದಲ್ಲಿ ಹುಟ್ಟಿದ ಚಿದಂಬರನು ಸಕಲರಿಗೂ ಸದ್ಗುರು ಎಂಬುದನ್ನು ಸೂಚಿಸಲಿಕ್ಕೆ ಪುಷ್ಯ ನಕ್ಷತ್ರದಲ್ಲಿ ಅವತಾರ.

೫) ಬ್ರಹ್ಮಯೋಗ—ಈ ಯೋಗದಲ್ಲಿ ಜನಿಸಿದವರಿಗೆ ಬ್ರಹ್ಮಸಾಕ್ಷಾತ್ಕಾ ರದ ಕಡೆಗೆ ಒಲವು ಇರುತ್ತದೆ. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಎಂಬುದನ್ನು ಸೂಚಿಸಲಿಕ್ಕೆ ಬ್ರಹ್ಮಯೋಗದಲ್ಲಿ ಅವತಾರ.

೬) ವಣಿಜಾಕರಣ—ಈ ಕರಣವು ವಿದ್ಯಾದಾಯಕವು. "ಸಾ ವಿದ್ಯಾ ಯಾ ವಿಮುಕ್ತಯೇ" ಎಂಬಂತೆ, ಬಂಧನ ಹರಿದೊಗೆದು ಜ್ಞಾನೋದಯವನ್ನು ಮಾಡಿ ಕೊಡುವದು ಚಿದಂಬರ ಅವತಾರದ ಧ್ಯೇಯವೆಂದು ಸೂಚಿಸುತ್ತದೆ.

೭) ಸೋಮವಾರ— (ಚಂದ್ರವಾರ) ಚಂದ್ರನಂತೆ ಸಕಲರಿಗೂ ಆಲ್ಹಾದ ವನ್ನು ಕೊಡುವವನಾಗಬೇಕೆಂದು ಶುಭ್ರಾಂಶುವಿನ ವಾರದಲ್ಲಿ (ಚಂದ್ರವಾರ ಸೋಮವಾರ) ಜನ್ಮ.

ಈ ರೀತಿ ಚರಾಚರ ವಸ್ತುಗಳಿಗೆಲ್ಲ ಸುಖವಾಗಬೇಕೆಂದು ತಿಳಿದು, ಮೇಲೆ ಹೇಳಿದಂತೆ ವಿಶಿಷ್ಟ ಶುಭ ಸಮಯವನ್ನು ಸಾಧಿಸಿ, ಭಗವಂತನು ಚಿದಂಬರನ ರೂಪದಿಂದ ಅಷ್ಟವರ್ಷಾತ್ಮಕನಾಗಿ ಅವತಾರ ತಾಳಿದನು.





# ಶ್ರೀ ಚಿದಂಬರ ಪ್ರಕಾಶ, ಭಾಗ ೧

## ನಾಲ್ಕನೆಯ ಕಿರಣ

## ಶ್ರೀ ಚಿದಂಬರ ಮಹಾಸ್ವಾಮಿಗಳ ಜಯಂತಿ ಉತ್ಸವ ಆಚರಿಸುವ ವಿಧಾನ

ಶ್ರೀ ಚಿದಂಬರ ಭಕ್ತರು, ಅನೇಕ ಸ್ಥಳಗಳಲ್ಲಿ ಈ ಉತ್ಸವವನ್ನು ಆಚರಿಸುತ್ತ ಬಂದಿದ್ದಾರೆ. ವಿಶೇಷವಾಗಿ, ಕರ್ನಾಟಕ, ಮಹಾರಾಷ್ಟ್ರದಲ್ಲಿ, ಅನೇಕ ಊರುಗಳಲ್ಲಿ, ತತ್ರಾಪಿ ಮಹಾಸ್ವಾಮಿಗಳ ಅವತಾರ ಸ್ಥಳವಾದ, ಯೋಗೀಶ್ವರ ಮಾರ್ತಂಡ ದೀಕ್ಷಿತರ (ಮಹಾಸ್ವಾಮಿಯ ತಂದೆಯವರ) ತಪೋಭೂಮಿಯಾದ, ಮತ್ತು ಮಹಾಸ್ವಾಮಿಗಳ ಲೀಲಾಸ್ಥಾನಗಳಾದ, ಮುರಗೋಡು, ಕೆಂಗೇರಿ, ಗುರ್ಲಹೊಸೂರ, ಬಡಲಿ, ಆನಂದವನ ಮುಂತಾದ ಸ್ಥಾನಗಳಲ್ಲಿ, ಬಹು ವಿಜೃಂಭಣೆಯಿಂದ ಈ ಉತ್ಸವವನ್ನು ನೆರವೇರಿಸುತ್ತ ಬಂದಿದ್ದಾರೆ. ಹೈದ್ರಾಬಾದ, ರಾಯಚೂರ, ಮುಂಬಯಿ, ಪುಣೆ, ಸಾತಾರಾ, ಜಮಖಂಡಿ, ಹುಬ್ಬಳ್ಳಿ ಮುಂತಾದ ಶಹರಗಳಲ್ಲಿ ಭಕ್ತರು ಅನೇಕ ವರುಷಗಳಿಂದ ಈ ಉತ್ಸವವನ್ನು ಆಚರಿಸುತ್ತಲಿದ್ದಾರೆ. ಹೊಸದಾಗಿ ಎಷ್ಟೋ ಕಡೆಗೆ, ಭಕ್ತರನೇಕರು, ಪ್ರತಿವರುಷ ಈ ಉತ್ಸವವನ್ನು ಒಳ್ಳೆ ವೈಭವದಿಂದ ಹಾಗೂ ಭಕ್ತಿಪೂರ್ವಕವಾಗಿ ಆಚರಿಸಹತ್ತಿದ್ದಾರೆ. ನವಚಿದಂಬರ ನಗರ ನಿರ್ಮಾಣವಾಗುವ ಸಮಯದಲ್ಲಿ ಹಾಗೂ ಅನೇಕ ಕಡೆಗೆ ಚಿದಂಬರ ದೇವಾಲಯಗಳು ನಿರ್ಮಾಣವಾಗಲಿರುವ ಈ ಸಮಯದಲ್ಲಿ, ಶ್ರೀ ಚಿದಂಬರ ಜಯಂತಿಯನ್ನು ಆಧಾರಪೂರ್ವಕ, ಯಥಾವಿಧಿಯಾಗಿ ಆಚರಿಸಲು ಅನುಕೂಲವಾಗಲೆಂದು ಈ ಪ್ರಕ

ರಣ ಬರೆಯುತ್ತೇನೆ. ಈ ವಿಷಯದಲ್ಲಿ ಮಹಾಸ್ವಾಮಿಗಳ ಸಮಕಾಲೀನರಾದ, ಸಂತರತ್ನ ಶ್ರೀ ರಾಜಾರಾಮ ಪಾಟೀಲ, ಬಾಭುಳಗಾಂವ, (ಜಿ. ಅಹಮ್ಮದನಗರ) ಕವಿವರ್ಯ ಮತ್ತು ಪಂಡಿತಪ್ರಕಾಂಡ, ಸಖಾರಾಮ ತ್ರ್ಯಂಬಕ ಗರ್ದೆ, ಉರ್ಫ ಆಪ್ಪೂನಾನಾ ಗರ್ದೆ, ಶ್ರೀಮತೀ ಸಾಧ್ವೀ ಶಿರೋಮಣಿ, ವಿಠಾಬಾಯಿ ನಾಯಿಕ (ಪಂಢರಪುರ) ಇವರ ನುಡಿಗಳೇ ನಮಗೆ ಆಧಾರ. ಈ ನುಡಿಗಳಂತೆ, ಎಲ್ಲ ಕಡೆಗೆ ಒಂದು ಸುಸಂಬದ್ಧವಾದ ರೀತಿಯಿಂದ, ಯಥಾವಿಧಿಯಾಗಿ, ಶ್ರೀ ಚಿದಂಬರ ಜಯಂತೀ ಉತ್ಸವದ ಆಚರಣೆಯಾಗಬೇಕೆಂಬುದೇ ಈ ಲೇಖನದ ಮೂಲ ಉದ್ದೇಶ. ಈ ಭಕ್ತತ್ರಯರ ಅಭಿಪ್ರಾಯಗಳನ್ನು ವಿಮರ್ಶಿಸೋಣ.

### ೧ ಶ್ರೀ ರಾಜಾರಾಮನ ಅಭಂಗಗಳ ಆಧಾರ

ರಾಜಾರಾಮನು ಪ್ರಪ್ರಥಮವಾಗಿ ಶ್ರೀ ಚಿದಂಬರ ಮಹಾಸ್ವಾಮಿಗಳ ದರ್ಶನವನ್ನು ಪಡೆಯಲು ಕುಂದಗೋಳ ಗ್ರಾಮಕ್ಕೆ (ಜಿ. ಧಾರವಾಡ) ಶಕೆ ೧೭೨೭ (ಇ. ಸ. ೧೮೦೫) ಶ್ರಾವಣ ವದ್ಯ ಚತುರ್ದಶೀ, ಶುಕ್ರವಾರ ಸಾಯಂಕಾಲ ೩ ಗಂಟೆಯ ಸುಮಾರಿಗೆ ಹೋದನೆಂದು ತನ್ನ ಅಭಂಗಗಳಲ್ಲಿ ಹೇಳಿದ್ದಾನೆ.

**"ಶಕೆ ಸತ್ರಾಸೇ ಸತ್ತಾವೀಸ........ ।**
**ಶ್ರಾವಣತೋ ಮಾಸ ವದ್ಯ ಚತುರ್ದಶೀ ॥**
**ಆಲೋ ಸ್ವಾಮೀಪಾಶೀ ಕುಂದಗೋಳಾಸಿ ।**
**ಶುಕ್ರವಾರ ದಿವಸ ಹೋತಾ ಏಕ ಪ್ರಹರ ।**
**ಯೇವೋನಿ ಸತ್ತ್ವರ ಉತರೀಲೋ ॥**

ಮುಂದೆ, ಮಹಾಸ್ವಾಮಿಗಳು ಅವನಿಗೆ ಏಳನೇ ದಿನ ಪ್ರತ್ಯಕ್ಷ ದರ್ಶನ ಕೊಟ್ಟು, ವರದಹಸ್ತ ಅವನ ತಲೆಯಮೇಲಿಟ್ಟು, ನಾಮ ಮಂತ್ರೋಪದೇಶ ಮಾಡಿ ಅನುಗ್ರಹಿಸಿದರು. ಅಭಂಗ ರಚಿಸಲು ಆಜ್ಞೆ ಮಾಡಿ, ಶಕೆ ೧೭೩೪, ಪುಷ್ಯ ವದ್ಯ ತ್ರಯೋದಶಿ ದಿನ, ಗುರ್ಲಹೊಸೂರಲ್ಲಿ, ಮಲಪ್ರಭಾ ನದೀ ತೀರದ ಮೇಲೆ, ೫೨೭ ಅಭಂಗಗಳನ್ನು ಬರೆಯಿಸಿದರು.

**ಶಕೆ ಸತ್ರಾಸೇಚೌತೀಸ । ನಾಮ ಸಾಜೇ ಆಂಗಿರಸ ॥**
**ಕೃಷ್ಣಪಕ್ಷ ಪೌಷ್ಯಮಾಸೀ । ವದ್ಯ ಅಸೇ ತ್ರಯೋದಶೀ ॥**

**ಜಾಗಾ ಜಾಣ ಗುರ್ಲಹೊಸೂರ । ಮಲಪ್ರಭಾ ನದೀತೀರ ॥**
**ಮಾಯಬಾಪ ಗುಣಗಂಭೀರ । ಜವಳೀ ಧಣೀ ಚಿದಂಬರ ॥**
**ಪಾಂಚ ಶತಹೋ ಅಭಂಗ । ಕರವಿಲೇ ಯಥಾಸಾಂಗ ॥"**

ಐದುನೂರು ಮೂಲ ಅಭಂಗ ಹಾಗೂ ೨೭ ಫಲಶ್ರುತಿ ಅಭಂಗ ಹೀಗೆ ಒಟ್ಟು ೫೨೭ ಅಭಂಗಗಳನ್ನು ಬರೆಯಿಸಿದರು, ಮುಂದೆ ಶಕೆ ೧೭೫೦ ರಲ್ಲಿ (೧೮೨೮ ರಲ್ಲಿ), ೧,೫೧,೮೯೧ ಅಭಂಗಗಳನ್ನು ಮುಗಿಸಿದರು.

**ಚಿದಂಬರ ಕೃಪಾ ಝಾಲೀ । ಅಭಂಗ ಜಾಣ ಸಂಪವಿಲೀ ॥**
**ಶಕೇ ಸತ್ರಾಸೇಪನ್ನಾಸ । ಸರ್ವಧಾರೀ ಸಂವತ್ಸರ ॥**
**ಚೈತ್ರಶುದ್ಧ ರವಿವಾರ । ದಿವಸ ಜಾಣ ತಿಸರಾ ಪ್ರಹರ ॥**
**ದಾಸ ಮ್ಹಣೆ ಚಿದಂಬರೆ । ಸಂಪವಿಲಿ ಏಕಂದರೆ ॥**

ಈ ರೀತಿ ಶ್ರೀ ಚಿದಂಬರ ಸ್ವಾಮಿಗಳ ಪರಮ ಅನುಗ್ರಹಕ್ಕೆ ಪಾತ್ರನಾದ ರಾಜಾರಾಮನು, ಅವರ ಸಲಹೆಯಂತೆಯೇ ರಚಿಸಿದ ತನ್ನ ಅಭಂಗಗಳಲ್ಲಿ ಶ್ರೀ ಚಿದಂಬರ ಜಯಂತಿ ಬಗ್ಗೆ ಹೀಗೆ ಹೇಳಿದ್ದಾನೆ.

"ಈ ಉತ್ಸವವನ್ನು ಕಾರ್ತಿಕ ವದ್ಯ ಪ್ರತಿಪದೆಯಿಂದ, ದಶಮಿಯವರೆಗೆ ನವರಾತ್ರಿ ಉತ್ಸವದಂತೆ ಆಚರಿಸಬೇಕು, ಆರನೆಯ ದಿನ ಜಯಂತೀ ಉತ್ಸವ ಮಾಡಬೇಕು. ಪ್ರತಿಪದೆಯ ದಿನ ಸ್ವಸ್ತಿ ಪುಣ್ಯಾಹವಾಚನಾದಿಗಳನ್ನು ಮಾಡಿಕೊಂಡು ಘಟಸ್ಥಾಪನೆಯನ್ನು ವಿಧಿಪೂರ್ವಕ ಮಾಡಿ, ೨ ನಂದಾದೀಪಗಳನ್ನು ಇಡಬೇಕು. ಜಯಂತೀ ದಿನ ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಅಖಂಡ ಭಜನ ಕೀರ್ತನಾದಿಗಳನ್ನು ಮಾಡಿಸಬೇಕು. ಪ್ರಾರಂಭದಿಂದಲೇ ಉಪೋಷಣವಿದ್ದು ಜಯಂತಿ ನಂತರ (ತೊಟ್ಟಿಲದಲ್ಲಿ ಹಾಕಿದ ನಂತರ) ಪಾರಣೆ ಮಾಡಬೇಕು, ಅವತಾರ ಮಾಲಿಕಾ ಅಭಂಗಗಳನ್ನು ಅನ್ನಬೇಕು ಈ ಅಭಂಗಗಳು ರಾಜಾರಾಮನು ರಚಿಸಿದ ಬಾಲಕ್ರೀಡಾ ಎಂಬ ವಿಭಾಗ ಸಂಗ್ರಹಗಳಲ್ಲಿವೆ. ಇವಕ್ಕೆ ಅವತಾರ ಅಭಂಗಗಳೆಂದು ಅನ್ನುತ್ತಾರೆ. ಚಿದಂಬರ, ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ರಾಮ, ಪರಶುರಾಮ, ಕೃಷ್ಣ ಮುಂತಾದ ಅವತಾರಗಳನ್ನು ತಾಳಿ ಧರ್ಮಸ್ಥಾಪನೆಯ ಮಾಡಿದ ವರ್ಣನೆ ಇದೆ. ಚಿದಂಬರ ಜನ್ಮಕಥಾ ನಿರೂಪಣ ಮಾಡಬೇಕು. ಶ್ರೀಫಳ (ಟೆಂಗಿನಕಾಯಿ) ಶ್ರೀ ಚಿದಂಬರ ಪ್ರತೀಕವೆಂದು ತಿಳಿದು ಅದಕ್ಕೆ

ಅಭ್ಯಂಗ ಸ್ನಾನ ಮಾಡಿಸಿ (ಎರೆದು) ವಸ್ತ್ರಾದಿಗಳಿಂದ ಅಲಂಕರಿಸಿ ತೊಟ್ಟಿಲಲ್ಲಿ ಹಾಕಬೇಕು. ದೀವಟಿಗೆಗಳನ್ನು ಹಚ್ಚಬೇಕು. ಜೋಗುಳ ಪದವನ್ನು ಹಾಡಬೇಕು. ("ಬಾಳಾ ಜೋಜೋರೆ ಚಿದಂಬರಾ" ಎಂಬ ಜೋಗುಳ ಪದವನ್ನು ಕೊನೆಗೆ ಕೊಟ್ಟಿದ್ದೇನೆ.) ನೆರೆದಂಥ ಸಮಸ್ತ ಭಕ್ತರ ಕೈಯಲ್ಲಿ ಗುಲಾಲು ಅಥವಾ ಬುಕ್ಕಿಟ್ಟು ಕೊಟ್ಟು ಅದನ್ನು ಶ್ರೀಫಳ ರೂಪದ ಚಿದಂಬರನಿಗೆ ಅರ್ಪಿಸಬೇಕು. ಜನ್ಮಾರತಿಯನ್ನು ಅನ್ನಬೇಕು. ಈ ಆರತಿ ಪದ್ಯವನ್ನೂ ಕೊನೆಗೆ ಕೊಡಲಾಗಿದೆ. ಸುವಾಸಿನಿಯರಿಗೆ ಉಡಿ ತುಂಬಬೇಕು. ದ್ವಿಜರಿಗೆ ಹಾರ ತುರಾ, ಫಲ ತಾಂಬೂಲಾದಿಗಳನ್ನು ಕೊಟ್ಟು ಸತ್ಕರಿಸಬೇಕು. ಶುಂಠಿ ಸಕ್ಕರಿ ಬೆರಸಿ ಪ್ರಸಾದ ಕೊಡಬೇಕು. ಬ್ರಾಹ್ಮಣರಿಗೆ, ಭಕ್ತರಿಗೆ, ಆಪ್ತೇಷ್ಟರಿಗೆ ಊಟ ಹಾಕಬೇಕು. ದೇವರಿಗೆ ಜಯಂತಿಯ ದಿನ ಕರಿಗಡಬು ನೈವೇದ್ಯ ತೋರಿಸಬೇಕು. ಷಷ್ಠಿಯ ದಿನ (ಜಯಂತಿಯ ದಿನ) ಪಾರಣೆಯನ್ನು ಮಾಡಬೇಕು. ಸಪ್ತಮಿಯ ದಿನವೂ ಅನ್ನಸಂತರ್ಪಣೆ ಮಾಡಬೇಕು. ಅಷ್ಟಮೀ, ನವಮೀ, ದಶಮೀ ದಿನಗಳಂದು ಗೋಪಾಳಕಾಲಾ ಮಾಡಬೇಕು. ದೇವಪಾದುಕೆಗಳಿಂದ ಕೂಡಿಕೊಂಡು, ಪತಾಕಾದಿಗಳನ್ನು ತಕ್ಕೊಂಡು, ಮಂಗಲ ವಾದ್ಯದೊಂದಿಗೆ, ನದೀ ತೀರಕ್ಕೆ (ಪವಿತ್ರ ಜಲಾಶಯಕ್ಕೆ) ಹೋಗಿ, ಅಲ್ಲಿ ಮಂಗಲ ಸ್ನಾನ ಮಾಡಿಕೊಂಡು, ಪುನಃ ಮನೆಗೆ (ದೇವಾಲಯಕ್ಕೆ) ಬರಬೇಕು. ನೈವೇದ್ಯ, ಆರತಿ, ಮಂತ್ರ ಪುಷ್ಪಾದಿಗಳನ್ನು ಮಾಡಿಕೊಂಡು, ಕ್ಷಮಾರ್ಪಣೆ ಮಾಡಿಕೊಂಡು, ಅನ್ನ ಸಂತರ್ಪಣೆ ಮಾಡಬೇಕು. ಈ ರೀತಿ ೧೦ ದಿನಗಳ ವರೆಗೆ ಈ ಉತ್ಸವವನ್ನು ಆಚರಿಸಬೇಕು. ಇದಕ್ಕೆ "ಚಿದಂಬರ ನವರಾತ್ರಿ" ಎಂದು ಹೆಸರು. ಪ್ರತಿಪದೆಯ ದಿನವೇ "ವಿಜಯಿದಾಸ ಚಿದಂಬರ" ಎಂಬ ಮುದ್ರಾಂಕಿತ ಧ್ವಜವನ್ನು ಏರಿಸಿ, ದಶಮಿಯ ದಿನ ಅದನ್ನು ಇಳಿಸಿ ಉತ್ಸವ ಮುಗಿಸಬೇಕು. ಈ ರೀತಿ ಉತ್ಸವ ಆಚರಿಸುವವರ ೧೦೧ ಕುಲಗಳು ಉದ್ಧಾರವಾಗುವವೆಂದೂ ಮತ್ತು ಅವರಿಗೆ ಅಕ್ಷಮ್ಯ ಸುಖವು ಸಿಗುವದೆಂದೂ ಅಭಂಗಗಳಲ್ಲಿ ಹೇಳಿದೆ, ನೋಡಿರಿ.

## ಜಯಂತೀ ಅಭಂಗಗಳು

"ನಿರ್ವಿಕಾರ ಬ್ರಹ್ಮ ಶುದ್ಧ ಚಿದಂಬರ ।
ಕಲಿಯುಗೀ ಅವತಾರ ಸಗುಣ ಝಾಲಾ ॥ ೧ ॥

ಜಯಂತೀ ಉತ್ಸವ ಕಾರ್ತಿಕ ತೇ ಮಾಸಿ ।
ಸಂಪ್ರದಾಯ ಐಸೀ ಝಾಲೀ ಅಸೇ ॥ ೨ ॥

ಮದ್ಯ ಪ್ರತಿಪದಾ ಘಟಮಾಳಾ ಸ್ಥಾಪನಾ ।
ನಂದಾದೀಪ ಜಾಣ ದೋನೀಕಡೆ ॥ ೩ ॥

ಷಷ್ಠೀ ತೇ ಬ್ರಾಹ್ಮಣ ನಿತ್ಯ ಯಥಾಶಕ್ತಿ ।
ಷಷ್ಠಿ ತೇ ಜಯಂತೀ ಜನ್ಮದಿವಸ ॥ ೪ ॥

ಆನಂದೇ ಭಜನ ಕೀರ್ತನ ಗಜರ ।
ಸುಂಠೋಡಾ ಸಾಖರ ಸಿದ್ಧ ಕರಿತೀ ॥ ೫ ॥
ಅವತಾರ ಮಾಲಿಕಾ ಅಭಂಗ ಮ್ಹಣೋನಿ ।
ಜನ್ಮ ತೇ ಮಧ್ಯಾನ್ಹೀ ಐಲೀಕಡೆ ॥ ೬ ॥

ಗುಲಾಲ ತೋ ಬುಕ್ಕಾ ಸಮುದಾಯ ಸಿದ್ಧ ಹಾತೀ ।
ದೇವಾವರ ಟಾಕಿತೀ ಜನ್ಮವೇಳೀ ॥ ೭ ॥

ಶ್ರೀಫಳ ತೇ ಬಾಳ ಬಾಹೇರ ಆಣಿತೀ ।
ನ್ಹಾಣೋನಿ ಘಾಲಿತೀ ಪಾಳಣ್ಯಾಂತ ॥ ೮ ॥

ಕರೋನಿ ಪಂಚಾರತೀ ಸುಂಠೋಜಾ ವಾಟಿತೀ ।
ದ್ವಾರೀ ತೇ ಗರ್ಜತೀ ವಾದ್ಯಘೋಷ ॥ ೯ ॥
ಸಹಾವೇ ದಿವಸೀ ಪಾರಣ ಷಷ್ಠೀಸಿ ।
ಕರಿತೀ ಆನಂದೇ ಭಕ್ತಜನ ॥ ೧೦ ॥

ಥೋರ ಸಮುದಾಯ ಬ್ರಾಹ್ಮಣ ಭೋಜನ ।
ಕರಿತೀ ಸಂತರ್ಪಣ ಸಪ್ತಮೀಸಿ ॥ ೧೧ ॥

ಅಷ್ಟಮೀ ನವಮೀ ದಸಮೀ ದಹೀಕಾಲಾ ।
ಬಾಳಗೋಪಾಳಾಂ ವಾಟತಾತೀ ॥ ೧೨ ॥

ಪತಾಕಾಚಾಭಾರ ಪಾದುಕಾ ಸಹಿತ ।
ಆನಂದೇಸಿ ಜಾತ ನದೀತೀರಿ ॥ ೧೩ ॥

ವಂದನ ಕರೋನಿ ಯೇತೀ ದೇವಾಪಾಶೀ ।
ಆರತೀ ನೈವೇದ್ಯ ಸಮರ್ಪಣ ॥ ೧೪ ॥

ಕಾನೋಲೆ ಪುರಣಾಚೆ ಬ್ರಾಹ್ಮಣ ಭೋಜನ ।
ದಹಾ ದಿವಸ ಜಾ ಉತ್ಸವ ಹೇ ॥ ೧೫ ॥

ಚಿದಂಬರ ಭಕ್ತ ಜಯಂತೀ ಕರಿತೀ ।
ಕುಳ ಉದ್ಧರೀತಿ ಏಕೋತ್ತರಸೇ ॥ ೧೬ ॥

ದಾಸ ಮ್ಹಣೇ ತ್ಯಾಸೀ ಪ್ರಸನ್ನ ಚಿದಂಬರ ।
ಸುಖ ನಿರಂತರ ಅಕ್ಷಯ್ಯಾಚೆ ॥ ೧೭ ॥



ಈ ಅಭಂಗಗಳ ಸಾರಾಂಶವನ್ನು ಮೇಲೆ ಕೊಡಲಾಗಿದೆ. ಹದಿನಾರನೆಯ ನುಡಿಯಲ್ಲಿ "ಕುಳ ಉದ್ಧರಿತೀ ಏಕೋತ್ತರಸೇ" ಎಂದು ಹೇಳಿದ್ದಾನೆ, ಚಿದಂಬರ ಜಯಂತಿಯನ್ನು ಭಕ್ತಿಯಿಂದ ಮಾಡುವ ಭಕ್ತನ ೧೦೧ ಕುಲಗಳು ಉದ್ಧಾರವಾಗುತ್ತವೆಂದು ರಾಜಾರಾಮನ ಅಭಿಪ್ರಾಯ, ಈ ನೂರಾ ಒಂದು ಕುಲಗಳು ಯಾವವು? ಎಂಬುವದನ್ನು ರಾಜಾರಾಮನೇ ತನ್ನ ಇನ್ನೊಂದು ಅಭಂಗದಲ್ಲಿ ಹೇಳಿದ್ದಾನೆ, ನೋಡಿರಿ,

"ಭಕ್ತ ಝಾಲಾ ಕೋಣೀ ಅಂತರಾಪಾಸೋನಿ ।
ಸದಾ ಧ್ಯಾನೀ ಮನೀ ಚಿದಂಬರ ॥ ೧ ॥

ಏಕೋತ್ತರಸೇ ಕುಳ ಉದ್ಧರಿತೀ ಜಾಣ ।
ಐಕಾ ತೇ ನಿವಡೂನ ಸಾಂಗತಸೆ ॥ ೨ ॥

ಪಿತ್ಯಾಚೇ ಚೋವೀಸ ಮಾತೇಚೆಹೋ ವೀಸ ।
ಸೋಳಾ ತೇ ಕಾಂತೇಹೇ ಕುಳಜಾಣಾ ॥ ೩ ॥

ಭಗಿನೀಚೇ ಬಾರಾ ಕನ್ಯೇಚೇ ಅಕರಾ ।
ಆತೇಚೆ ಉದ್ಧಾರ ಕುಳದಹಾ ॥ ೪ ॥

**ನಾವಶೀಚೆ ಆಠ ಏಕೋತ್ತರಸೇ ಏಕ ।**
**ಉದ್ಧರಿತೀ ಕುಳ ದೇವಜಾಣ ॥ ೫ ॥**
**ಐಸೀ ಸಾಕ್ಷ ಅಸೇ ನಿರ್ಣಯು ಸಿಂಧೂಸೀ ।**
**ಭಕ್ತಿಮಹಿಮಾ ಐಸೀ ಅಪಾರ ತೇ ॥ ೬ ॥**
**ವಂಶೀ ಝಾಲಾ ಕೋಣೀಹಿ ಹರಿಭಕ್ತ ಏಕ ।**
**ಉದ್ಧರಿತೀ ದೇಖ ಕುಳ ಐಸೆ ॥ ೭ ॥**
**ದಾಸ ಮ್ಹಣೇ ಐಸಾ ವಿರಳ ಭಕ್ತರಾಜ ।**
**ಚಿದಂಬರ ನಿಜ ಸಾಪಡಲೀಯಾ ॥ ೮ ॥"**

**ಪಂಚಪದೀ ಪು. ೫, ಅ. ೧೫**

(೧೦೧ ಕುಲಗಳು–ತಂದೆಯ ೨೪ ಕುಲಗಳು, 'ತಾಯಿಯ ೨೦ ಕುಲಗಳು, ಹೆಂಡತಿಯ ೧೬ ಕುಲಗಳು, ಭಗಿನಿಯ ೧೨ ಕುಲಗಳು, ಮಗಳ ೧೧ ಕುಲಗಳು, ಸೋದರತ್ತೆಯ ೧೦ ಕುಲಗಳು, ಅಬಚಿಯ ೮ ಕುಲಗಳು, ಹೀಗೆ ಒಟ್ಟು ೧೦೧ ಕುಲಗಳನ್ನು ಭಕ್ತಶ್ರೇಷ್ಠನು ಉದ್ಧಾರ ಮಾಡುವನು. ನಿರ್ಣಯ ಸಿಂಧುವಿನಲ್ಲಿ ಈ ಅಭಿಪ್ರಾಯ ಹೇಳಿದೆ ಎಂದು ರಾಜಾರಾಮನು ಮೇಲಿನ ತನ್ನ ಅಭಂಗದಲ್ಲಿ ವಿವರಿಸಿದ್ದಾನೆ.)

ಈ ರೀತಿ ೧೦ ದಿನಗಳವರೆಗೆ ಈ ಚಿದಂಬರ ನವರಾತ್ರಿಯ ಉತ್ಸವವನ್ನು ಚಿದಂಬರ ರಾಜಾರಾಮ ವಾರಕರೀ ಪಂಥದವರು ಈಗ್ಯೂ ಮಾಡುತ್ತಾರೆ. ಇನ್ನು ಇಷ್ಟು ವಿಸ್ತಾರವಾಗಿ ಯಾರಿಗೆ ಮಾಡಲು ಸಾಧ್ಯವಿಲ್ಲವೋ ಅವರು **ಕೇವಲ ಷಷ್ಠಿಯ ಒಂದು ದಿನ ಮಾತ್ರ ಎಲ್ಲ ವಿಧಾನಗಳನ್ನು ಮೇಲೆ ಹೇಳಿದಂತೆ ಮಾಡಬೇಕು.** ಇದು ರಾಜಾರಾಮ ಅಭಿಪ್ರಾಯ. ಇನ್ನು ಶ್ರೀ ಮಚ್ಚರಿತ್ರ ಲೇಖಕರಾದ ಸಖಾರಾಮ ತ್ರ್ಯಂಬಕ ಗರ್ದೆ ಇವರ ಅಭಿಪ್ರಾಯ ಏನಿದೆ ನೋಡೋಣ.

## ಸಖಾರಾಮ ತ್ರ್ಯಂಬಕ ಗರ್ದೆ ಇವರ ಅಭಿಪ್ರಾಯ

ಶ್ರೀ ಗರ್ದೆಯವರು ಈ ವಿಷಯದ ಬಗ್ಗೆ ೧ ಸಂಪೂರ್ಣ ಅಧ್ಯಾಯವನ್ನೇ ಬರೆದಿದ್ದಾರೆ. ಅದಕ್ಕೆ ಜನ್ಮಾಧ್ಯಾಯ ಎಂದು ಹೆಸರು ಕೊಟ್ಟಿದ್ದಾರೆ. ಆ ಅಧ್ಯಾಯದ ಸಾರಾಂಶ ಮಾತ್ರ ಇಲ್ಲಿ ಕೊಡುವೆ.

ಕಾರ್ತಿಕ ವದ್ಯ ಪ್ರತಿಪದೆಯಿಂದ ಈ ಉತ್ಸವವನ್ನು ಪ್ರಾರಂಭ ಮಾಡ ಬೇಕು. ಪ್ರಾತಃಕಾಲದಲ್ಲಿ ಕಾಕಪಾರತಿ ಮಾಡಿಕೊಂಡು, ಅಭ್ಯಂಗ ಸ್ನಾನ ಮಾಡಿ, ಸ್ವಸ್ತಿ ಪುಣ್ಯಾಹವಾಚನಾದಿಗಳನ್ನು ಮಾಡಿಕೊಂಡು, ಎರಡು ನಂದಾ ದೀಪಗಳನ್ನು ಇಡಬೇಕು. ಹರಿಯನ್ನಾಗಲೀ, ಹರನನ್ನಾಗಲೀ, ಸದ್ಗುರು ಪಾದುಕೆಗಳನ್ನಾಗಲೀ, ಶ್ರೀ ಸೂಕ್ತ ಪುರುಷಸೂಕ್ತ, ರುದ್ರ, ಈಶಾನ ಸೂಕ್ತ ಪೂರ್ವಕವಾಗಿ, ಷೋಡಶೋಪಚಾರದಿಂದ ಪೂಜಿಸಬೇಕು. ಷಷ್ಠಿಯ ದಿನ ಜಯಂತಿ ಆಚರಿಸಬೇಕು, ಪ್ರಾರಂಭದಿಂದಲೇ ಉಪೋಷಣ ವ್ರತ ಕೈಕೊಳ್ಳ ಬೇಕು. ಚಿದಂಬರನನ್ನು ತೊಟ್ಟಿಲಲ್ಲಿ ಹಾಕಿದ ನಂತರ ಪಾರಣಿ ಮಾಡಬೇಕು. ಷಷ್ಠಿಯ ದಿನ ಪ್ರಾತಃಕಾಲದಲ್ಲಿ ಮನೆಯನ್ನು ಗೋಮಯದಿಂದ ಸ್ವಚ್ಛವಾಗಿ ಸಾರಿಸಬೇಕು. ಸುಂದರವಾದ ಮಂಟಪವನ್ನು ನಿರ್ಮಾಣ ಮಾಡಬೇಕು. ತಳಿರು ತೋರಣಗಳಿಂದ ಅಲಂಕರಿಸಬೇಕು. **“ವಿಜಯದಾಸ ಚಿದಂಬರ”** ಎಂಬ ಮುದ್ರಾಂಕಿತ ಧ್ವಜವನ್ನು ಪ್ರತಿಪದೆಯ ದಿನವೇ ಏರಿಸತಕ್ಕದ್ದು. ಅದನ್ನೂ ಪೂಜಿಸಬೇಕು. ಮಂಟಪಕ್ಕೆ ಬಾಳೆಯ ಕಂಭಗಳನ್ನೂ, ಹಣ್ಣಿನ ಗೊಂಚಲು ಗಳನ್ನೂ, ತಳಿರು ತೋರಣಗಳನ್ನೂ ಕಟ್ಟಿ ಸುಂದರವಾಗಿ ಶೋಭಿಸುವಂತೆ ಮಾಡಬೇಕು. ಸ್ವಚ್ಛವಾದ ತಬಕಗಳಲ್ಲಿ (ತಟ್ಟೆಗಳಲ್ಲಿ) ಬಿಲ್ವ, ತುಲಸಿ, ಶಮೀ, ಜಂಬೀರ ಪತ್ರ, ನೆಲ್ಲೀ ಪತ್ರ, ನಿರ್ಗುಂದೀ ಪತ್ರ, ಪುನ್ನಾಗ ಕೇಶರಿ, ಮಲ್ಲಿಗೆ ಪತ್ರ, ಕಮಲ, ಸೇವಂತಿಗೆ, ಸಂಪಿಗೆ, ಗುಲಾಲು, ಬುಕ್ಕಿಟ್ಟು ಮೊದಲಾದ ಪೂಜಾ ಸಾಹಿತ್ಯವನ್ನು ಸಿದ್ಧ ಮಾಡಿಕೊಳ್ಳಬೇಕು. ಹರಿಯನ್ನಾಗಲೀ ಹರ ನನ್ನಾಗಲೀ, ಸದ್ಗುರುಗಳ ಪಾದುಕೆಗಳನ್ನಾಗಲೀ ಮಂಟಪದಲ್ಲಿ ಇಟ್ಟು ಶ್ರೀ ಸೂಕ್ತ, ಪುರುಷ ಸೂಕ್ತ, ಈಶಾನ ಸೂಕ್ತ, ರುದ್ರ ಪಠಣಪೂರ್ವಕ ಷೋಡಶೋಪಚಾರಗಳಿಂದ ವೇದೋಕ್ತವಾಗಿ ಪೂಜಿಸಬೇಕು. ಭಕ್ತಿಯಿಂದ ಧೂಪ, ಬುಕ್ಕಿಟ್ಟು, ಅಷ್ಟಗಂಧ, ಸುವಾಸನೆಯುಳ್ಳ ಹೂಗಳ ಹಾರಗಳನ್ನು, ಅರಿಷಿಣ, ಕುಂಕುಮ, ಕಸ್ತೂರಿಯನ್ನು ಅರ್ಪಿಸಬೇಕು. ಸುಗಂಧ ಚಂದನ ಲೇಪನ ಮಾಡಬೇಕು. ಹರಿ–ಹರರಿಗೆ ಪ್ರಿಯವಾದ ಅಷ್ಟಗಂಧವನ್ನು ಸಮ ರ್ಪಿಸಬೇಕು. ಉತ್ತಮವಾದ ಪಕ್ವಾನ್ನಗಳನ್ನೂ ಹಾಲು ಸಕ್ಕರಿಯನ್ನೂ ನೈವೇದ್ಯ ತೋರಿಸಬೇಕು. ಕಾಯಿಪಲ್ಲೆ, ಸಂಡಿಗೆ, ಹಪ್ಪಳ, ಕಾಯಿರಸ, ಚಟ್ನಿ, ಕೋಸಂಬರಿ ಮೊದಲಾದವುಗಳನ್ನು ಮಾಡಬೇಕು. ದಾನ–ಧರ್ಮಾದಿಗಳನ್ನು ಮಾಡಬೇಕು.

ಸಮಸ್ತ ಭಕ್ತವೃಂದರ ಮನಸ್ಸು ರಂಜಿಸುವಂತೆ ಚಿದಂಬರನ ಜನ್ಮಕಥಾ ನಿರೂಪಣ ಮಾಡಬೇಕು. ತತ್ಪೂರ್ವದಲ್ಲಿ ಭಗವಂತನು ನಿರ್ಗುಣನಿದ್ದಾಗ್ಯೂ ಸದ್ಧರ್ಮ ಸ್ಥಾಪನೆಗಾಗಿ, ಸಗುಣ ರೂಪ ತಾಳಿ, ವಿವಿಧ ಅವತಾರಗಳನ್ನು ಮಾಡಿ, ದುಷ್ಟರನ್ನು ದಂಡಿಸಿ, ಶಿಷ್ಟರನ್ನು ಪಾಲಿಸಿದ ಕತೆಗಳನ್ನು ಹೇಳಬೇಕು. ಹರಿಹರ ಗುರು ಸಾಧು ಸಂತರ ಲೀಲಾ ಕಾರ್ಯಗಳನ್ನು ವರ್ಣಿಸಬೇಕು. ನಗಾರಿ, ನೌಬತ್ತು, ಬಜಂತ್ರಿ ಮೊದಲಾದ ಮಂಗಲ ವಾದ್ಯಗಳನ್ನು ಮೊಳಗಿಸಬೇಕು. ವಿದ್ವಾಂಸರನ್ನು ಹೂ–ಹಾರಗಳಿಂದ ಸತ್ಕರಿಸಬೇಕು. ಸುವಾಸಿನಿಯರಿಗೆ ಉಡಿ ತುಂಬಬೇಕು. ದ್ವಿಜರಿಗೆ ವಸ್ತ್ರ, ಗೋ, ಧನ, ಕನಕಾದಿಗಳನ್ನು ಯಥಾಶಕ್ತಿ ದಾನ ಮಡಬೇಕು. ಚಿದಂಬರ ಜನ್ಮಕಥಾ ನಿರೂಪಣವಾದ ಮೇಲೆ, ಚಿದಂಬರನನ್ನು (೧ ಟೆಂಗಿನಕಾಯಿಯನ್ನು) ತೊಟ್ಟಿಲಲ್ಲಿ ಹಾಕುವ ಕಾರ್ಯಕ್ರಮ ಮಾಡಬೇಕು. ಸಮಸ್ತ ಭಕ್ತವೃಂದದ ಕೈಯಲ್ಲಿ ಗುಲಾಲು, ಬುಕ್ಕಿಟ್ಟು ಕೊಡಬೇಕು. ಒಂದು ಶ್ರೀಫಳ (ಟೆಂಗಿನಕಾಯಿಯನ್ನು) ಚಿದಂಬರ ಪ್ರತೀಕವೆಂದು ತಿಳಿದು ಅದಕ್ಕೆ ಅಭ್ಯಂಗ ಸ್ನಾನ ಮಾಡಿಸಿ (ಎರೆದು) ವಸ್ತ್ರಾದಿಗಳಿಂದ ಅಲಂಕರಿಸಿ, ತೊಟ್ಟಿಲಲ್ಲಿ ಇಟ್ಟು ಪೂಜಿಸಿ ಜನ್ಮಶ್ಲೋಕವನ್ನು ಅಂದು, ಗುಲಾಲು, ಬುಕ್ಕಿಟ್ಟು ಸಮರ್ಪಿಸಬೇಕು.

## ಜನ್ಮಶ್ಲೋಕ

**"ಸ್ವಸ್ತಿ ಶ್ರೀ ನೃಪ ಶಾಲಿವಾಹನ ಶಕೆ ಸೋಳಾಂಕ**
**ಐಂಶೀವರೀ ।**
**ಮಾಸೀ ಊರ್ಜಸು ಕೃಷ್ಣ ಷಷ್ಠಿ ತಿಥಿ ಹೇ**
**ಶುಭ್ರಾಂಶುಚ್ಯಾವಾಸರೀ ॥**
**ಯೋಗಬ್ರಹ್ಮಹಿ ಕರ್ಣತೋ ವಣಿಜಹಾ ಬಹ್ವಾನ್ನ**
**ಸಂವತ್ಸರೀ ।**
**ಭೋಗೀ ತಿಷ್ಯ ದಿವಾ ಚಿದಂಬರ ಗುರೂ ಪ್ರತ್ಯಕ್ಷಯೋ**
**ಜಾಗರೀ ॥**

ಈ ಶ್ಲೋಕದ ಅರ್ಥ ಹೀಗಿದೆ. ;—

"ಶಾಲಿವಾಹನ ಶಕೆ ೧೬೮೦ ಬಹುಧಾನ್ಯ ಸಂವತ್ಸರ ಕಾರ್ತಿಕ ವದ್ಯ ಷಷ್ಠಿ ಸೋಮವಾರ ಹಗಲು (ಸೂರ್ಯೋದಯಾತ್ ೧೦–೫೫ ಪ) ಬ್ರಹ್ಮಯೋಗ

ದಲ್ಲಿ, ವಣಿಜಾಕರಣದಲ್ಲಿ, ಪುಷ್ಯ ನಕ್ಷತ್ರದಲ್ಲಿ ಪರಮಾತ್ಮನು ಚಿದಂಬರ ರೂಪ ದಿಂದ ಅವತಾರ ತಾಳಿದನು."

ಈ ಜನ್ಮ ಶ್ಲೋಕವನ್ನು ಅಂದು ಗುಲಾಲು ಬುಕ್ಕಿಟ್ಟು ಚಿದಂಬರನಿಗೆ ಸಮರ್ಪಿಸಿ, ಔದುಂಬರ ನಿವಾಸಿ, ಭಕ್ತಾಭಿಮಾನಿ, ರಾಜಾಧಿರಾಜ, ಸದ್ಗುರು ಶ್ರೀ ಶಿವಚಿದಂಬರೇಶ್ವರ ಮಹಾರಾಜಕೀ ಜಯ ಎಂದು ಜಯ ಜಯಕಾರ ಮಾಡಬೇಕು. ಆರತಿ ಮಂಗಲಾರತೀ, ಭಜನಾದಿಗಳನ್ನು ಮಾಡಬೇಕು.

**"ಚಿದಂಬರ ನಮಸ್ತೇಽಸ್ತು ಚಿಂತಿತಾರ್ಥ ಪ್ರದಾಯಿನೇ ।**
**ಔದುಂಬರ ಸದಾವಾಸ ಚಿದಂಬರ ನಮೋಽಸ್ತುತೇ ॥"**

ಎನ್ನುತ್ತ ಸ್ವೀಕಾರ ಮಾಡಬೇಕು. ಭಕ್ತರಿಗೆಲ್ಲ ಅನ್ನಸಂತರ್ಪಣ ಮಾಡಿ, ಬ್ರಾಹ್ಮಣರಿಗೆ ದಕ್ಷಿಣೆ ತಾಂಬೂಲಾದಿಗಳನ್ನು ಕೊಟ್ಟು ಆಶೀರ್ವಾದ ಪಡೆಯ ಬೇಕು. ಆನಂತರ ಸಕುಟುಂಬ ಸಪರಿವಾರ ಆಪ್ತೇಷ್ಟರಿಂದ ಕೂಡಿಕೊಂಡ ಊಟ ಮಾಡಬೇಕು. ರಾತ್ರಿಯಲ್ಲಿ ಜಾಗರಣ ಮಾಡಿ, ಭಜನೆ, ಸ್ತೋತ್ರ, ಆರತಿ, ಮಂತ್ರ ಪುಷ್ಪಾದಿಗಳನ್ನು ಮಾಡಬೇಕು. ಮರುದಿನ ಪ್ರಾತಃಕಾಲ ಪುನಃ ಪೂಜಾದಿಗಳನ್ನು ನೆರವೇರಿಸಿ ದೇವತಾ ವಿಸರ್ಜನೆ ಮಾಡಬೇಕು. ಚಿದಂಬರ ರಾಜಾರಾಮ ವಾರಕರೀ ಮಂಡಲಿಯವರು, ಜಯಂತಿ ನಂತರ ಸಪ್ತಮೀ ಅಷ್ಟಮೀ, ನವಮೀ ದಶಮೀ, ಹೀಗೆ ನಾಲ್ಕುದಿನ, ದಹೀಕಾಲಾ ಗೋಪಾಳ ಕಾಲಾ ಮಾಡಿಕೊಂಡು, ದಶಮಿಯದಿನ ಧ್ವಜಾವತರಣವನ್ನು ಮಾಡಿ ಈ ನವರಾತ್ರಿ ಉತ್ಸವವನ್ನು ಮುಗಿಸಬೇಕೆಂದು **ರಾಜಾರಾಮನ** ಅಭಿಪ್ರಾಯ.

## ಶ್ರೀಮತೀ ವಿಠಾಬಾಯಿಯ ಅಭಿಪ್ರಾಯ.

ಸಾಧ್ವೀ ಶಿರೋಮಣಿ ವಿಠಾಬಾಯಿ ಕೂಡ, ಇವೇ ಅಭಿಪ್ರಾಯವನ್ನು ತನ್ನ ಅಭಂಗಗಳಲ್ಲಿ ಹೇಳಿದ್ದಾಳೆ. ಹರಿಹರರಲ್ಲಿ ಸರ್ವಥೈವ ಭೇದವನ್ನು ಕಲ್ಪಿಸ ಬಾರದು. ಭೇದವನ್ನು ಮಾಡಿದರೆ ಪಾಪಾಚರಣೆ ಮಾಡಿದಂತೆ. **"ಭೇದಕೃತ್ ಪಾಪಕೃತ್ ಭವೇತ್"** ಕೃಷ್ಣನೇ ಚಿದಂಬರನಾಗಿ ಅವತರಿಸಿದ್ದನ್ನು ಹಿಂದೆ ಹೇಳಿದ್ದೇವೆ. ಕೃಷ್ಣಾವತಾರದಲ್ಲಿ ವಸುದೇವ ದೇವಕಿಯರಿಗೆ, ಕೃಷ್ಣನ ಬಾಲ್ಯದ ಸುಖವು ದೊರೆಯಲಿಲ್ಲವೆಂದೂ, ಮುಂದೆ ಕಲಿಯುಗದಲ್ಲಿ ಕೃಷ್ಣನೇ ಚಿದಂಬರ ನಾಗಿ ಅವತರಿಸಿ, ವಸುದೇವ ದೇವಕಿಯರ ಸ್ವರೂಪವಾದ, ಮಾರ್ತಂಡದೀಕ್ಷಿ

ತರು ಮತ್ತು ಲಕ್ಷ್ಮೀಮಾತೆಗೆ ಬಾಲ್ಯದ ಸುಖವನ್ನು ಕೊಟ್ಟು, ತನ್ನ ವಚನವನ್ನು ಪಾಲಿಸಿದನೆಂದೂ, ರಾಜಾರಾಮ, ಶ್ರೀಮತೀ ವಿಠಾಬಾಯಿ, ಶ್ರೀ ಗರ್ದೆ, ಶ್ರೀ ಸಾಂಬದೀಕ್ಷಿತ ಮೊದಲಾದವರು ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ವಿವರಿಸಿದ್ದಾರೆ. ಸ್ಥಳಾಭಾವದ ಮೂಲಕ ಆಧಾರಭೂತವಾದ ಎಲ್ಲ ನುಡಿಗಳನ್ನು ಇಲ್ಲಿ ಕೊಡಲು ಸಾಧ್ಯವಿಲ್ಲ. ಶ್ರೀಮತೀ ವಿಠಾಬಾಯಿಯು, ತಾನು, ರಾಜಾರಾಮ ಹಾಗೂ ಚಿದಂಬರ ಯಾವ ಯಾವ ಅವತಾರಗಳಲ್ಲಿ ಯಾವ ಯಾವ ರೂಪಗಳನ್ನು ತಾಳಿದ್ದರೆಂಬುವದನ್ನು ತನ್ನ ಅಭಂಗಗಳಲ್ಲಿ ವರ್ಣಿಸಿದ್ದಾಳೆ. ವಿಠಾಬಾಯಿಯ ಬಗ್ಗೆ ವಿಶೇಷ ಸಂಚಿಕೆಯಲ್ಲಿ ಈ ಎಲ್ಲ ಅಭಂಗಗಳನ್ನು ಕೊಡುವೆವು.

| | | |
|---|---|---|
| ಚಿದಂಬರ | ರಾಜಾರಾಮ | ವಿಠಾಬಾಯಿ |
| ನರಸಿಂಹ | ಪ್ರಲ್ಹಾದ | ಪದ್ಮಿನೀ |
| ರಾಮ | ಅಂಗದ | ಮಂಥರಾ |
| ಕೃಷ್ಣ | ಉದ್ಧವ | ಕುಬ್ಜಾ |
| ವಿಠ್ಠಲ | ನಾಮದೇವ | ಜನಾಬಾಯಿ |

ಅವಳ ಅಭಂಗಗಳ ಸಾರಾಂಶ ಈ ರೀತಿ ಇದೆ. ಇನ್ನು ರಾಜಾರಾಮ, ಗರ್ದೆ, ವಿಠಾಬಾಯಿಯವರ ಜೋಗುಳ ಪದ, ಜನ್ಮಾರತೀ, ಆರತೀ ಇತ್ಯಾದಿ ಕೆಲವು ಪದ್ಯಗಳನ್ನು ಈ ಜಯಂತೀ ಆಚರಣೆಗೆ ಉಪಯುಕ್ತವಾಗುವಂತೆ ಇಲ್ಲಿ ಕೊಟ್ಟಿದ್ದೇವೆ. ಭಕ್ತರು, ಆ ಆ ಪದ್ಯಗಳನ್ನು ಸಮಯಕ್ಕನುಸಾರವಾಗಿ ಉಪಯೋಗ ಮಾಡಿಕೊಳ್ಳಬೇಕು. ಹಾಗೂ ಎಲ್ಲ ಕಡೆಗೂ ಒಂದು ಸುಬದ್ಧವಾದ ರೀತಿಯಿಂದ ಈ ಉತ್ಸವವನ್ನು ಆಚರಿಸಬೇಕೆಂದು ಬಿನ್ನಹ.

**ಜಯ ಚಿದಂಬರ**

## ಪಾಳಣಾ (ಜೋಗುಳ ಪದ)

ಜಯಂತೀ ದಿನ ಚಿದಂಬರನನ್ನು ತೊಟ್ಟಿಲದಲ್ಲಿ ಹಾಕಿದ ಮೇಲೆ ಈ ಪದವನ್ನು ಅನ್ನಬೇಕು. ಇದಕ್ಕೊಂದು ವಿಶಿಷ್ಟವಾದ ಧಾಟೀ ಇದೆ. ಅದನ್ನು ಗುರುಮುಖದಿಂದ ಕಲಿಯಬೇಕು. ಇಲ್ಲವಾದರೆ ಬಲ್ಲವರು ತಮಗೆ ಬೇಕಾದ ರೀತಿಯಲ್ಲಿ ಅನ್ನಬಹುದು.

ಜೋ ಜೋ ಜೋ ಜೋರೆ । ಚಿದಂಬರಾ ।
ಸ್ವಾಮೀ ವಿಶ್ವಂಭರಾ ।
ಹಾಲವಿ ನಿಜಮಾಯಾ । ಸುಂದರಾ ।
ಧರುನೀ ಜ್ಞಾನ ದೋರಾ ॥ ೧ ॥ ಬಾಳಾ ಜೋ....

ಅನಂತಕೋಟೀ ತೂ । ವ್ಯಾಪಕ । ಬ್ರಹ್ಮಾಂಡನಾಯಕ ।
ಬ್ರಹ್ಮಾ ವಿಷ್ಣು ಹೇ, ಶಿವ ದೇಖ । ಆಜ್ಞೇಚೆ ಪಾಯಿಕ ॥
ತೋತೂ ಝಾಲಾಸಿ, ಸಮ್ಯಕ್ ।
ಬ್ರಾಹ್ಮಣ ಬಾಳಕ ॥ ೨ ॥ ಬಾಳಾ....

ನಾನಾಸ್ವರೂಪೇ, ಅವತಾರ । ಧರಿಸೀ ತೂ ಅಪಾರ ।
ಸತ್ತಾಮಾತ್ರ ಹೇ, ಚರಾಚರ । ಹಾಲವಿಸೀ ಸಾಚಾರ ॥
ಹೋಸೀ ನಿಜಭಕ್ತಾ, ಗೋಚರ ।
ಕಲಿಯುಗಿ ಅವತಾರ ॥ ೩ ॥ ಬಾಳಾ....

ಬಹುತಾ ಪ್ರಕಾರೆ, ಸ್ವರ್ಗಾಸೀ । ಇಂದ್ರಾದಿ ದೇವಾಸೀ ॥
ಭೇಟೀ ಇಚ್ಛೀತೀ ತೇ ಋಷಿ ॥ ಸಹಸ್ರ ಅಠ್ಯಾಂಶೀ ॥
ಧನ್ಯ ಮ್ಹಣತೀ ಯಾ । ಲೋಕಾಸೀ ।
ಕರಿತೀ ಪುಷ್ಪವೃಷ್ಟೀಸಿ ॥
ಕರೀತೀ ಪಾಲಖಾ, ವಿಶೇಷೀ ।
ಮಾತಾ ಪಿತಯಾಸೀ ॥ ೪ ॥ ಬಾಳಾ....

ಐಸಾ ಆನಂದ, ಅಪೂರ್ವ । ದೇಖತಾತೀ ಸರ್ವ ।
ಭಕ್ತ ಜನಾಸೀ, ಸದ್ಭಾವ । ಹರ್ಷೇ ಭಾನೂದೇವ ॥
ಝಾಲಾ ಭೂಮೀಸಿ, ಉತ್ಸಾಹ ।
ಗರ್ಜತಿ ಗಂಧರ್ವ ॥ ೫ ॥ ಬಾಳಾ....

ಬಾಳ ವೇಷೇಹೇ, ಸ್ವರೂಪ । ಹೋಸೀ ಅಪರೂಪ ॥
ವರ್ಣೀ ಮಹಿಮಾ ತೋ ।
ಫಣಿ ಸರ್ಪ ಗೇಲೀ ಕೋಟೀಕಲ್ಪ ॥

ದಾಸಾಲಾಗೀ ತೂ, ಸಕೃಪ ।
ದಾವಿಸಿ ನಿಜರೂಪ ॥ ೬ ॥ ಜೋ ಜೋ ॥



ಮೇಲಿನ ಪದ್ಯದ ಕನ್ನಡ ಅನುವಾದ

ಜೋ ಜೋ ಜೋ ಜೋ ರೇ, ಚಿದಂಬರಾ ।
ಸ್ವಾಮೀ ವಿಶ್ವಂಭರಾ । ಬಾಳಾ, ಜೋ ಜೋರೆ ॥ ಪ ॥
ಜ್ಞಾನ ಹಗ್ಗವನು, ಜಗದಂಬಾ ।
ಹಿಡಿದೂ ತೂಗುವಳು ॥ ೧ ॥ ಬಾಳಾ ....
ಸೃಷ್ಟಿಯನೆಲ್ಲಾ ನೀ, ವ್ಯಾಪಿಸಿ । ಬ್ರಹ್ಮಾಂಡನಾಯಕನೇ ।
ಬ್ರಹ್ಮಾವಿಷ್ಣುಮಹೇಶ್ವರರೂ । ನಿನ್ನಯ ಸೇವಕರು ॥
ಜನಿಸಿರುವೀ, ಬ್ರಾಹ್ಮಣ ಬಾಲಕಾ ॥ ೨ ॥ ಬಾಳಾ....
ನಾನಾ ಅವತಾರ, ನೀ ತಾಳೀ । ನಡೆಸುವಿ ವಿಶ್ವವನೂ ॥
ಕಲಿಯುಗದೀ, ಭಕ್ತರಿಗೇ ।
ದರುಶನ ನೀ ಕೊಡುವೀ ॥ ೩ ॥ ಬಾಳಾ....
ಇಂದ್ರಾದಿ ದೇವರು ನೋಡಲೂ । ಉತ್ಸುಕರಾಗಿಹರು ॥
ಅಸಂಖ್ಯ ಋಷಿಗಳು, ಹೂವಿನ ।
ಮಳೆಯ ಸುರಿಸುವರು ॥ ೪ ॥ ಬಾಳಾ....
ಅಖಂಡ ಆನಂದಾ, ಭಕ್ತರಿಗೆ । ಭೂಲೋಕದಲ್ಲೆಲ್ಲ ।
ರವಿಯೂ ನಲಿಯುವನು । ಭೂದೇವೀ ।
ಸಂತಸ ಪಡೆಯುವಳು ॥
ಗಂಧರ್ವಗಣವು, ಸಂತಸದೀ ।
ಗಾಯನ ಮಾಡುವದು ॥ ೫ ॥ ಬಾಳಾ....
ಶೇಷದೇವನು, ನಿನ್ನಯ । ಮಹಿಮೆಯ ಪೊಗಳುತ್ತ ॥
ಕೋಟೀ ಕಲ್ಪಗಳ, ಕಳೆದನೂ ।
ಅಂತವ ತಿಳಿಯದೇ ॥ ೬ ॥ ಬಾಳಾ....
ದಾಸನಿಗಾಗೀ ನೀ, ಪ್ರತ್ಯಕ್ಷ । ತೋರಿದಿ ನಿಜರೂಪಾ ।

ದಯದಿಂದಾ, ಎನ್ನನೂ।
ಸ್ವಾಮೀ ಉದ್ಧರಿಸು ॥ ೭ ॥ ಬಾಳಾ....

## ಜೋಗುಳ ಪದ ೨

ಜೋ ಜೋ ಜೋ ಜೋ ಜೋ ಚಿದಂಬರಾ,
ಜೋ ಜೋ ॥ ಪ ॥

ಜೋ ಜೋ ಜೋ ಜೋ ಜೋ ಚಿದಂಬರಾ।
ಜೋ ಜೋ ಜೋ ಲಕ್ಷ್ಮೀಮಾತೆಯ ಕುವರಾ ॥ ಜೋ ॥
ಸನ್ಮಲ್ಲಕುಮಾರಾ। ಬಾಳಾ।
ಜೋ ಜೋ ಕಲಿಯುಗದಿ, ಮಾಡಿದಿ ಅವತಾರಾ ॥೧॥ ಜೋ ॥

ಜನನೀ ಜನಕರ ತಪಕೆ ಮನಮೆಚ್ಚಿ ನೀನು।
ತನುಮನದಿಂದಲೀ ಕೊಟ್ಟೆ ಬೇಡಿದ ವರವನ್ನು॥
ಜನನಕಾಲದ ನಿನ್ನ ಮಹಿಮೆಯ ಗುರ್ತನ್ನೂ। ಪೇಳಿ।
ಘನಮಹಿಮನೇ ನೀ ಪೊಂದಿ ನರದೇಹವನ್ನು ॥ ೨ ॥ ಜೋ ॥

ಸಾಕ್ಷಾತ್‌ತಪಮೂರ್ತಿ, ವರದಾನದಂತೆ।
ಮೋಕ್ಷದಾಯಕಳೋ, ಶ್ರೀ ಲಕ್ಷ್ಮೀಮಾತೆ॥
ಆಕ್ಷಣದಿ ಗರ್ಭಾಲಂಕರಿಸಿದಳಂತೆ। ಕಂಡೂ।
ದೀಕ್ಷೀತೇಂದ್ರಗೆ ಆತೋ ಸ್ವರ್ಗಸಿಕ್ಕಂತೆ ॥ ೩ ॥ ಜೋ ॥

ಹದಿನಾರನೆ ಶತಪಿಡಿದು, ಎಂಭತ್ತರಲ್ಲಿ।
ಮುದದಿಂ ಕಾರ್ತಿಕ ಮಾಸದಲಿ ಷಷ್ಠಿ।
ಕೃಷ್ಣಪಕ್ಷದಲಿ। ಸುದಿನ ಸೋಮವಾರ। ಮಕರ ಲಗ್ನದಲೀ॥
ಬರುತಿರಲು ಶುಭಪಂಚಗ್ರಹಗಳು ಸ್ವಕ್ಷೇತ್ರದಲ್ಲಿ ॥ ೪ ॥ ಜೋ ॥

ನವಮಾಸಾ ತುಂಬಿದವು ದೇವೀ ಉದರದಲಿ।
ಅವತಾರ ಸಮಯವು ಮುರಗೋಡದಲ್ಲಿ।
ಅವನೀಯೊಳ್ ನೀನೆಂಟು ವರುಷದ ರೂಪದಲೀ। ಬಂದೀ।
ನವಬಿಲ್ವಾಕ್ಷತೆ ಇದ್ದವು ನಿನ್ನ ಕಿವಿಯಲ್ಲಿ ॥ ೫ ॥ ಜೋ ॥

ಭೂಸುರನ ಅದ್ಭುತರೂಪವ ನೋಡುತಲೀ ।
ಪೋಷಿಪ ಜನನೀ ಜನಕರು ಪ್ರಾರ್ಥನೆ ಮಾಡುತಲೀ ॥
ತೋಷಿಸು ಎಂದ್ಹೇಳಿದರು ಹಸುಳನ ರೂಪದಲೀ ॥ ಕೇಳಿ ॥
ಕೂಸಾಗಿ ರೋದಿಸುತಲಿದ್ದೀ ಧರಣಿಯಲ್ಲಿ ॥ ೬ ॥ಜೋ ॥

ಭಕ್ತವತ್ಸಲನೆಂಬ ತೊಟ್ಟಲವ ತಂದು ।
ಭಕ್ತೋದ್ಧಾರಕನೆಂಬ ಚಟ್ಟು ಇರಲೆಂದು ॥
ಭಕ್ತಾಧೀನನೆಂಬ ಸರಪಳಿ ಬೇಕೆಂದೂ । ಹೇಳಿ ।
ಮುಕ್ತಿದಾಯಕ ನಿನಗೆ ಶೃಂಗರಿಸಿದರಂದೂ ॥ ೭ ॥ ಜೋ ॥

ಜೋ ಜೋ ಜೋ ಜೋ ಲಕ್ಷ್ಮೀ ಕಂದ ।
ಜೋ ಜೋ ಜೋ ಜೋ ಮಲ್ಲಾರಿನಂದಾ ॥
ಜೋ ಜೋ ಜೋ ಜೋ ಹರಿಮುಕುಂದಾ ।
ಜೋ ಜೋ ಜೋ ಜೋ ಸರ್ವರಿಗಾನಂದಾ ॥ ೮ ॥ ಜೋ ॥

ಜೋ ಜೋ ಬ್ರಹ್ಮಾ ವಿಷ್ಣು ಮಹೇಶ್ವರಾ ।
ಜೋ ಜೋ ಜೋ ಜೋ ವಿಶ್ವಂಭರಾ ॥
ಜೋ ಜೋ ಜೋ ಜೋ ಮೂಜಗದಾಧಾರಾ । ಬಾಳಾ ।
ಜೋ ಜೋ ಎಂದ್ಹೆ ಸರಿಡುವೆವು ಜೋ ಚಿದಂಬರಾ ॥ ೯ ॥

ಪೊಡವಿಪಾಲನ ಜೋಗುಳವ ಕೇಳಿದ ಜನಕೆಲ್ಲ ।
ದೃಢವಾಗಿ ಲಭಿಸುವದು ಸುಖಸಂಪತ್ತೆಲ್ಲಾ ॥
ಸಡಗರದಿಂ ಮೆರೆಯುವದು ಮೂಜಗದೊಳಗೆಲ್ಲಾ । ಸುದ್ದೀ ।
ಬಡ ಆಲಸ್ಯಶೃಂಗಪುರವಾಸೀ ಬಲ್ಲಾ ॥ ೧೦ ॥ ಜೋ ॥



(ರಚಿಸಿದವರು ಆಲಸ್ಯಶೃಂಗಪುರವಾಸೀ-ತಡಕೋಡದ
ಯಂಕಣ್ಣಾ ಚವಡೀ ಅವರು)

   

## ಭಜನ

೧) ಶಿವಶಿವ ಶಿವಶಿವ ಸಾಂಬಚಿದಂಬರ ।
ಹರಹರ ಹರಹರ ಸಾಂಬಚಿದಂಬರ ॥
ಜಟಾಮಸ್ತಕೀ ಗಂಗಾಧರ ।
ಪಾರ್ವತಿ ಶಂಕರ ಗೌರೀಹರಾ ॥
ಪಾರ್ವತಿ ಶಂಕರ ಉಮಾಮಹೇಶ್ವರ ।
ಕರುಣಾಕರ ಹರ ಸಾಂಬ ಚಿದಂಬರ ॥

೨) ಚಿದಂಬರ ಚರಣೀ ಹೋ ವಿಶ್ರಾಮ ।
ಪಾವೇ ದಾಸ ರಾಜಾರಾಮ ॥
ದಾಸ ರಾಜಾರಾಮ । ಪಾವೇ ದಾಸ ರಾಜಾರಾಮ ।
ಚಿದಂಬರ ಚರಣೀ ಹೋ ವಿಶ್ರಾಮ ಪಾವೇ
ದಾಸ ರಾಜಾರಾಮ ॥

೩) ಚಿದಂಬರ ನಾಮ ಅಮೃತಸಾರ ।
ಘ್ಯಾರೆ ಬಾಪನೋ ವಾರಂವಾರ ॥

೪) ಪಂಢರಿನಾಥ ಪಂಢರಿನಾಥ । ಮೀ ಅಪರಾಧೀ ಘ್ಯಾ ಪದರಾತ ॥

೫) ಕೈಲಾಸನಾಥಾ ದಿಗಂಬರಾ ।
ತ್ರಿಶೂಲಡಮರೂ ಗಿರಿಜಾವರಾ ॥

೬) ಮುಕುಂದ ಮಾಧವ ಗೋವಿಂದ ।
ಜಯ ಚಿದಂಬರ ಆನಂದಾ ॥

೭) ಗೋಪೀವಲ್ಲಭ ಸಾವಿತ್ರೀರಮಣಾ ।
ಕೃಷ್ಣಕೃಷ್ಣ ಜಯ ಚಿದಂಬರಾ ॥

೮) ನರಸಿಂಹ ವಾಮನ ಚಿದಂಬರಾ ।
ಅಧೋಕ್ಷಜಾ ಹರಿ ಚಿದಂಬರಾ ॥

೯) ಚಿದಂಬರಾ ಚಿದಂಬರಾ । ಶ್ರೀಪಾದವಲ್ಲಭ ಚಿದಂಬರಾ ॥

೧೦) ಚಿದಂಬರ ರಾಜಾರಾಮ । ವಿಠೋಬಾ ತುಕಾರಾಮ ॥

೧೧) ಜೈಜೈ ರಾಮಕೃಷ್ಣ ಹರೀ । ಜೈಜೈ ರಾಮಕೃಷ್ಣ ಹರೀ ॥

೧೨) ರಾಜಾರಾಮನ ವೀಣೆಯು ನುಡಿವುದು ।
ಸಾಂಬ ಚಿದಂಬರ ಸಾಂಬ ಚಿದಂಬರ ॥
೧೩) ವಿಠಾಬಾಯಿಯ ಏಕತಾರ ನುಡಿವುದು ।
ರಾಧೇಶಾಮ ಜಯ ರಾಧೇಶಾಮ ॥
೧೪) ತುಕಾರಾಮನ ಮೃದಂಗ ನುಡಿವುದು ।
ಜಯಜಯ ವಿಠ್ಠಲ ಪಾಂಡುರಂಗಾ ॥
೧೫) ರಾಮದಾಸರ ವಾಣಿಯು ನುಡಿವುದು ।
ಶ್ರೀರಾಮ ಜಯರಾಮ ಜಯಜಯರಾಮ ॥
೧೬) ಶಿವಶಾಸ್ತ್ರಿಗಳ ವಾಣಿಯು ಪೇಳ್ವುದು ।
ಸಾಂಬಚಿದಂಬರ ಕೈಲಾಸಪತೇ ॥
ಶಿವಹರ ಶಂಕರ ಸಾಂಬ ಚಿದಂಬರ ।
ಪಾಹಿ ಚಿದಂಬರ ಕರುಣಾಸಿಂಧೋ ॥
೧೭) ರಾಮಕೃಷ್ಣ ಹರಿ ದತ್ತದಿಗಂಬರ ।
ಆದಿಶಕ್ತಿ ಶಿವ ಸಾಂಬ ಚಿದಂಬರ ॥

ಜನ್ಮಾರತೀ (ಶ್ರೀ ಗರ್ದೆ ವಿರಚಿತ)

ಜಯದೇವ ಜಯದೇವ ಜಯಚಿದಂಬರಾ ।
ನಿತ್ಯಾನಂದಾ ಕಂದಾ ಕುರ್ವಂಡೀ ಕರುಕಾಯಾ ॥ ಪ ॥
ಶ್ರೀವತ್ಸ ಕುಳೀ ಮಲ್ಲಾರೀ ದ್ವಿಜ ।
ಲಕ್ಷ್ಮೀನಾಮೋ ತ್ಯಾ ಸಗುಣಾ ಗುಣಭಾಜ ॥
ತದ್ಭಕ್ತೀ ತಜ್ಜಠರೀ ಪ್ರಣವಾಚೇ ಬೀಜ ।
ಪ್ರಕಟಸೀ ಭಕ್ತಾರ್ಥೀ ತೂಹಾ ಗುರುರಾಜ ॥ ೧ ॥ ಜಯ ॥
ಬಹುಧಾನ್ಯ ವತ್ಸರೀ ಕಾರ್ತೀಕ ಮಾಸೀ ।
ಕೃಷ್ಣ ಷಷ್ಠೀ ದಿನ ಮಂಗಲ ಉದ್ಭವಿಸೀ ।
ಮಿಳವೂನೀ ತಾತೇ ಗುಣಿಸಾಧು ಜೋಶಿ ।
ಚಿದಂಬರ ನಾಮ ಠೇವಿತಿ ಭಕ್ತೀಸಿ ॥ ೨ ॥ ಜಯ ॥
ಉತ್ಸವಾ ಆಲೇ ಬಹುವಿಧ ಬಹುಲೋಕ ।
ಪಂಡಿತತೇ ಶಾಸ್ತ್ರಿ ಸಾಗ್ನಿಕ ವೈದಿಕ ॥

ಹರಿಗುರುದಾಸ ಭಕ್ತಭಾವುಕ।
ತನ್ಮಯ ತೇಥೆ ಸಖಾರಾಮ ತ್ರ್ಯಂಬಕ ॥ ೩ ॥ ಜಯ ॥



ಆರತಿ (೨) "ಸ್ವಾಮೀ ಚಿದಂಬರ ಮೂರ್ತಿಗೆ"

ಸ್ವಾಮೀ ಚಿದಂಬರ ಮೂರ್ತಿಗೆ। ಸಾವಿತ್ರೀಗೆ,
ಸರಸ್ವತೀಗೆ ಮಂಗಲ।
ಭಕ್ತೋದ್ಧಾರಕ ನಿಜರೂಪಾಗೆ ಮಂಗಲ ॥ ಪ ॥

ಬ್ರಹ್ಮಾದಿಹರಿಹರ ದೇವಾಗೆ ಮಂಗಲ।
ಬ್ರಹ್ಮಾವಿಷ್ಣುಶಿವ ರೂಪಾಗೆ ಮಂಗಲ ॥ ೧ ॥ ಸ್ವಾಮೀ....

ನಾನಾಲೀಲೆಯ ಮಾಡಿದಾತಾಗೆ ಮಂಗಲ।
ನಾಗಭೂಷಣ ಉಮಾಕಾಂತಾಗೆ ಮಂಗಲ ॥ ೨ ॥ ಸ್ವಾಮೀ....

ಮಲಹಾತೀರ ನಿವಾಸ ರಂಗಾಗೆ ಮಂಗಲ।
ಮಲ್ಲಾರಿಸುತ ಗುರುರಾಯಾಗೆ ಮಂಗಲ ॥ ೩ ॥ ಸ್ವಾಮೀ....



(ಆರತಿ ಸಂಗ್ರಹದಲ್ಲಿ ಇನ್ನೂ ಅನೇಕ ಪದ್ಯಗಳನ್ನು ಕೊಡಲಾಗಿದೆ. ಅವುಗಳಿಂದ ಕೆಲವನ್ನು ಇಲ್ಲಿ ಆರಿಸಿಕೊಂಡು ಅನ್ನಬಹುದು.)

ಕರ್ಪೂರಾರುತಿ

ಜಯದೇವ ಜಯದೇವ ಜಯ ಚಿದಂಬರಾ।
ಕಾಪೂರಾರತಿ ವೋವಾಳೀತೋ ಈಶ್ವರಾ ॥ ಜಯದೇವ ॥ಪ॥

ಶುದ್ಧ ಭಕ್ತಿಜ್ಞಾನ ಕರ್ಪೂರ ಜ್ಯೋತಿ।
ಓವಾಳೀಲಾ ಆತ್ಮಾ ಚಿದಂಬರ ಮೂರ್ತಿ ॥ ೧ ॥ ಜಯ....

ದೇವಭಕ್ತಪಣ ಐಕ್ಯ ನಿಜಜ್ಯೋತಿ।
ಚಿದಂಬರೀ ಲೀನ ದಾಸಾ ನಿಜಶಾಂತೀ ॥ ೨ ॥ ಜಯ....



## ನಮನ

ಘಾಲೀನ ಲೋಟಾಂಗಣ । ವಂದೀನ ಚರಣ ।
ಡೋಳ್ಯಾನೇ ಪಾಹೀನ ರೂಪ ತುಝೆ ॥
ಪ್ರೇಮೇ ಆಲಿಂಗಿನ ಆನಂದೇ ಪೂಜಿನ ।
ಭಾವೇ ಓವಾಳೀನ ಮ್ಹಣೇ ನಾಮಾ ॥ ೧ ॥
ತ್ವಮೇವ ಮಾತಾ ಚ ಪಿತಾ ತ್ವಮೇವ ।
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ಚ ಗುರು ಸ್ತ್ವಮೇವ ।
ತ್ವಮೇವ ಸರ್ವಂ ಮಮ ದೇವ ದೇವ ॥ ೨ ॥
ಕಾಯೇನ ವಾಚಾ ಮನಸೇಂದ್ರಿಯೈರ್ವಾ ।
ಬುಧ್ಯಾತ್ಮನಾ ವಾ ಪ್ರಕೃತಿಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ ।
ಚಿದಂಬರಾಯೇತಿ ಸಮರ್ಪಯಾಮಿ ॥ ೩ ॥



ಜೈ ಚಿದಂಬರ । ಜಯ ಜಯ ಚಿದಂಬರ ।
ಚಿದಂಬರ ರಾಜಾರಾಮ ॥ ವಿಠೋಬಾ ತುಕಾರಾಮ ॥

### ಮಾಗಣೇ ಅಭಂಗ

(೧)

"ತುಝೀ ಮಂಡಳೀ ಹೇ ಜಾಣ । ಯಾಂಚೀ ಕರೀ ಸಂರಕ್ಷಣ॥
ತ್ಯಾಸೀ ಭಕ್ತೀ ತೇ ಲಾವೂನ । ತುಝೇ ಚಾಲವೀ ಭಜನ ॥
ಕರೀ ಉದ್ಧಾರ ಸರ್ವಾಂಚಾ । ಜೀವಜಂತೂ ಮಾನವಾಚಾ॥
ಚಿದಂಬರಾ ಹಾ ದಾಸಾಚಾ । ಮನೋಭಾವ ಅಂತರೀಚಾ !!"



(೨)

ಸರ್ವಾಲಾಗೀ ನಾಮ ಮಾತ್ರಾ ।
ದ್ಯಾವೀ ಭರೋನಿಯಾ ಯಾತ್ರಾ ॥

ಸುಖೀ ವ್ಹಾವೇ ಸರ್ವಜಣ। ಭವರೋಗ ತೋ ಜಾವೂನ॥
ಪ್ರೇಮರಸ ಪಾಜೀ ಜನಾ। ಚಿದಂಬರಾ ನಾರಾಯಣಾ॥
ವ್ಹಾವಾ ಆನಂದ ಸರ್ವಾಸೀ। ದಾಸಮನೀ ಇಚ್ಛಾ ಐಸೀ॥

—೦—

ನಾಮಮಾತ್ರೆಯನು ಸಕಲರಿಗು ನೀ ನೀಡು।
ಭವರೋಗ ದುಃಖವನು ನೀ ದೂರ ಮಾಡು॥
ಪ್ರೇಮರಸವನು ಕುಡಿಸು ಕರುಣೆಯಿಂದಲಿ ದೇವಾ।
ಸಕಲರಿಗು ಆನಂದ, ದಾಸನಾಶೆಯು ದೇವಾ॥
ಸರ್ವೇಽಪಿ ಸುಖಿನಃ ಸಂತು। ಸರ್ವೇ ಸಂತು ನಿರಾಮಯಾಃ।
ಸರ್ವೇ ಭದ್ರಾಣಿ ಪಶ್ಯಂತು।
ಮಾ ಕಶ್ಚಿತ್ ದುಃಖಭಾಗ್ ಭವೇತ್॥
ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ।
ದೇಶೋಽಯಂ ಕ್ಷೋಭರಹಿತೋ ಸಜ್ಜನಾಃ
ಸಂತು ನಿರ್ಭಯಾಃ॥

   

ಶರಣು ಬಂದಿಹೆ ನಾನು ನಿನ್ನಡಿಗೆ ಗುರುದೇವಾ।
ಎನ್ನ ಮನದಾಸೆಯನು ಪೂರೈಸು ಪ್ರಭುದೇವಾ॥
ವಿಷಯವಾಸನೆಯು ಲವಲೇಶವಿಲ್ಲೆನಗೆ।
ನಿನ್ನ ಚರಣದ ಸಾಕ್ಷಿ; ಬಾಗಿ ನಮಿಪೆನು ನಿನಗೆ॥

## ಭಜನ

ಚಿದಂಬರ ರಾಜಾರಾಮ। ವಿಠೋಬಾ ತುಕಾರಾಮ॥
ಜಯ ಚಿದಂಬರ। ಜಯ ಜಯ ಚಿದಂಬರ॥
ಪುಂಡಲೀಕ ವರದ ಹರಿ ವಿಠ್ಠಲ। ಜ್ಞಾನದೇವ ತುಕಾರಾಮ॥

## ಪ್ರಾರ್ಥನಾ

ಪ್ರಾರ್ಥಿಪೇ ಪ್ರಭೋ ಶ್ರೀ ಚಿದಂಬರಾ।
ನಿನ್ನ ಹೃದಯವೂ ಪ್ರೇಮಸಾಗರಾ॥

ನಿನ್ನ ಪಾದವೇ ನನಗೆ ಆಶ್ರಯಾ ।
ರಕ್ಷಿಸೆನ್ನನೂ, ಬಾ ಚಿದಂಬರಾ ॥ ೮ ॥

(ಅಷ್ಟಕಗಳಲ್ಲಿ ಪೂರ್ಣ ಕೊಟ್ಟಿದೆ)



ಮಂಗಲ

ಸಕಲ ಮಂಗಲಾ ಆದಿ ತೂ ಸ್ವಯೇ ।
ಸಕಲ ತೀರ್ಥಹೀ ತೂಚಿ ನಿಶ್ಚಯೇ ॥
ಧ್ಯಾನಮಾನಸೀ ರಾಹತಾ ಸ್ಥಿರ ।
ತರೀ ಕೃಪಾಕರೀ ಶ್ರೀ ಚಿದಂಬರ ॥ ೧ ॥

(ಅಷ್ಟಕಗಳಲ್ಲಿ ಪೂರ್ಣ ಕೊಟ್ಟಿದೆ)

ಮಂಗಲವು ಮಂಗಲವು ಚಿನ್ಮಯಗೆ ಮಂಗಲವು ।
ಮಂಗಲವು ಮಂಗಲವು ಸರಸತಿಗೆ ಮಂಗಲವು ॥
ಮಂಗಲವು ಸಾವಿತ್ರಿರಮಣನಿಗೆ ಮಂಗಲವು ।
ಮಂಗಲವು ಮಂಗಲವು ನಿತ್ಯ ಶುಭಮಂಗಲವು ॥ ೨ ॥



ಮಂಗಲವು ಶಿವಶಾಸ್ತ್ರಿ ಪೂಜಿತಗೆ ಮಂಗಲವು ।
ಮಂಗಲವು ಶ್ರೀ ಸಾಂಬದೀಕ್ಷಿತರ ಚರಿತಕ್ಕೆ ॥
ಮಂಗಲವು ಶ್ರೀ ದಾಸರಾಜನಿಗೆ ಮಂಗಲವು ।
ಮಂಗಲವು ವಿಠಾಬಾಯಿ ನುಡಿಗಳಿಗೆ ಮಂಗಲವು ॥ ೩ ॥
ಮಂಗಲವು ಲಕ್ಷುಮಿಯ ನಂದನಿಗೆ ಮಂಗಲವು ।
ಮಂಗಲವು ಮುರಗೋಡ ಗ್ರಾಮಕ್ಕೆ ಮಂಗಲವು ॥
ಮಂಗಲವು ಮಾರ್ತಂಡಭೈರವಗೆ ಮಂಗಲವು ।
ಮಂಗಲವು ಮೂಲೋಕರಕ್ಷಕಗೆ ಮಂಗಲವು ॥ ೪ ॥

ಶುಭ ಮಂಗಲಂ



ಕೃಪಾಸಮುದ್ರಂ .... .... .... ಭಾವಯಾಮಿ ॥ ೧ ॥
ಆವಿರ್ಭೂಯ ಶಿವಶ್ಚಿದಂಬರ ........ ನಮಾಮ್ಯಹಂ ॥ ೨ ॥

ಆತ್ಮಾ ತ್ತ್ವಂ ಗಿರಿಜಾ ........... ಶಂಭೋತವಾರಾಧನಂ ॥ ೩ ॥
ಕರಚರಣಕೃತಂ ........... ಶ್ರೀ ಮಹಾದೇವ ಶಂಭೋ ॥ ೪ ॥

೧) ಔದುಂಬರ ನಿವಾಸೀ, ಭಕ್ತಾಭಿಮಾನೀ, ರಾಜಾಧಿರಾಜ, ಸದ್ಗುರು ಶ್ರೀ ಶಿವಚಿದಂಬರೇಶ್ವರ ಗುರುಮಹಾರಾಜಕೀ ಜಯು. ೨) ದಾಸರಾಜಾರಾಮ ಮಹಾರಾಜಕೀ ಜಯು, ೩) ಸಾಧು ಸಂತನಕೀ ಜಯು, ೪) ಬಾಲಗೋಪಾಲಕೀ ಜಯು, ೫) ಜಯು ಪುಂಡಲೀಕ ವರದೇ ಹರಿವಿಠ್ಠಲ, ೬) ಜ್ಞಾನದೇವ ತುಕಾರಾಮ.

### ಪ್ರಸಾದ ಅಭಂಗ (ಪ್ರಸಾದ ವಿತರಣ)

ಕರುಣಾಪತಿ ಭಕ್ತವತ್ಸಲಾ। ಶೇಷ ಪ್ರಸಾದ ಧಾಡೀಲಾ ॥ ೧ ॥
ಗುಪ್ತರೂಪೇ ಹೋವೋನಿಯಾ।
ಪಾಠವೀಲಾ ಸ್ವಾಮಿರಾಯಾ ॥ ೨ ॥
ಶೇಷ ಪ್ರಸಾದ ಭಕ್ಷೋನಿ।
ನಿವಾಲೋ ಮೀ ಅಂತಃಕರಣೀ ॥ ೩ ॥
ಆನಂದ ಮಾಝೀಯಾ ಅಂತರಾ।
ದಾಸ ಮ್ಹಣೇ ಚಿದಂಬರಾ ॥ ೪ ॥



ಚಿದಂಬರ ನಮಸ್ತೇಽಸ್ತು ಚಿಂತಿತಾರ್ಥಪ್ರದಾಯಿನೇ।
ಔದುಂಬರಸದಾವಾಸ ಚಿದಂಬರ ನಮೋಽಸ್ತುತೇ ॥

[ಸೂಚನೆ–ಪ್ರಸಾದ ಅಭಂಗ ಅನ್ನುವಾಗ್ಗ, ಗುರುಗಳ ಆಜ್ಞೆಯನ್ನು ತಕ್ಕೊಂಡು ಎಲ್ಲರಿಗೂ ಪ್ರಸಾದ ಹಂಚಬೇಕು. ಆಮೇಲೆ ಪ್ರಸಾದದ ಪಾತ್ರೆಯನ್ನು ಗುರುಗಳ ಎದುರಿಗೆ ಇಟ್ಟು, "ಎಲ್ಲರಿಗೂ ಪ್ರಸಾದ ಮುಟ್ಟಿದೆ" ಎಂದು ಗುರುಗಳಿಗೆ ನಿವೇದಿಸಬೇಕು. ಪ್ರಸಾದ ಹಂಚಿದವರು ಗುರುಗಳ ಕೈಯಿಂದ ಪ್ರಸಾದ ಸ್ವೀಕಾರ ಮಾಡಬೇಕು. ಆಮೇಲೆ ಎಲ್ಲರೂ ಕೂಡಿ ಜಯುಜಯುಕಾರ ಮಾಡಿ ಪ್ರಸಾದ ಸ್ವೀಕಾರ ಮಾಡಬೇಕು. ಪ್ರಸಾದ ಕೊಟ್ಟ ಕೂಡಲೇ ಒಮ್ಮೆಲೇ ಬಾಯಿಯಲ್ಲಿ ಹಾಕಿಕೊಳ್ಳಬಾರದು. ಇದು ರಾಜಾರಾಮ ಹೇಳಿದ ಸಂಪ್ರದಾಯು.]



# ಶ್ರೀ ಚಿದಂಬರ ಪ್ರಕಾಶ, ಭಾಗ ೧

## ಐದನೆಯ ಕಿರಣ

## ಶ್ರೀ ರಾಜಾರಾಮ ಉವಾಚ

### ಸಂತರತ್ನ ಶ್ರೀ ರಾಜಾರಾಮ ಮಹಾರಾಜರ ಕೆಲ ಮಹತ್ತ್ವದ ಅಭಂಗಗಳು

(೧)

ತ್ರಿವಾಚ್ಯ ಬೋಲಣೆ ಬೋಲತಸೇ ಸತ್ಯ ।
ಮಾನೀ ಜೋ ಅಸತ್ಯ ರೌರವ ತ್ಯಾಸೀ ॥ ೧ ॥
ಸತ್ಯ ಜೇ ಮಾನಿತೀ ಪ್ರಚೀತಿ ರೋಕಡೀ ।
ನವ್ಹೇತರೀ ಕೋಟೀ ಪಾಪೇ ಮಜ ॥ ೨ ॥
ಸದ್ಭಾವೇ ಕರೋನಿ ಪಹಾವೇ ಪ್ರಚೀತ ।
ಪುರವೀ ಮನೋರಥ ಚಿದಂಬರ ॥ ೩ ॥
ದಾಸ ಮ್ಹಣೇ ಬೋಲ ನವ್ಹೇ ಪದರೀಚೆ ।
ಬೋಲವೀತ ಸಾಚೇ ಚಿದಂಬರ ॥ ೪ ॥

"ಕಾಯಾ, ವಾಚಾ, ಮನಸಾ ನಾನು ಸತ್ಯವನ್ನೇ ನುಡಿಯುತ್ತೇನೆ. ಈ ನುಡಿಗಳು ಅಸತ್ಯವೆಂದವರಿಗೆ ರೌರವ ನರಕ ನಿಶ್ಚಿತ. ವಿಶ್ವಾಸದಿಂದ ಅನುಭವ ಪಡೆಯಿರಿ; ಚಿದಂಬರನು ನಿಮ್ಮ ಮನೋರಥವನ್ನು ಪೂರ್ಣ ಮಾಡುವನು. ಈ ಹೇಳಿಕೆಯು ನನ್ನದಲ್ಲ; ಚಿದಂಬರನೇ ಇದನ್ನು ನುಡಿಸಿರುವನು."

ವರದ ಅಭಂಗ ೩೦೨

( ೨ )

ದೃಷ್ಟಾಂತಿ ಯೇವೋನಿ ಅಭಂಗ ಸಾಂಗಸೀ ।
ಬೋಲೋನಿ ದಾವಿಸೀ ಶ್ಲೋಕ ಓವ್ಯಾ ॥ ೧ ॥
ತೇಣೇ ಮಾಝ್ಯಾ ಮನಾ ಭರವಸಾ ಅನಂತಾ ।
ನಾನಾಪರೀ ಚಿತ್ತಾ ಬುಝಾವೀಸೀ ॥ ೨ ॥
ತೇಂಹ್ವಾ ಮಜ ಜಡಾ ಕಾಹೀಂಸಾ ಹೋ ಬೋಧ ।
ಕರಣೀ ಹೇ ಅಗಾಧ ಚಿದಂಬರಾ ॥ ೩ ॥
ದಾಸ ಮ್ಹಣೆ, ಜೈಸೇ ಕರವಿಲೇ ಅಭಂಗ ।
ತೈಸೇ ಯಥಾಸಾಂಗ ರೂಢವಾವೇ ॥ ೪ ॥

"ಚಿದಂಬರಾ, ದೃಷ್ಟಾಂತದಲ್ಲಿ ನನಗೆ ಶ್ಲೋಕುಗಳನ್ನು ಹಾಗೂ ಓವೀಗಳನ್ನು ಹೇಳುವಿ. ಅದರಿಂದ ನನ್ನ ಮನಸಿಗೆ ಅನಂತ ವಿಶ್ವಾಸ. ಅನೇಕ ಬಗೆಯಿಂದ ನನಗೆ ತಿಳಿಸಿ ಹೇಳುವಿ; ಆಗ್ಗೆ ಮಂದಮತಿಯಾದ ನನಗೆ ತುಸು ತಿಳುವಳಿಕೆಯಾಗುವದು. ನಿನ್ನ ಲೀಲೆಯು ಅಗಾಧವಾದದ್ದು; ನಿನ್ನ ಹೇಳಿಕೆಯಂತೆ ಮಾಡಿದ ಅಭಂಗಗಳು ಸಾರ್ಥಕವಾಗಲಿ."

### ವರದ ಅಭಂಗ ೫೧೦

ಮಮ ಪಾಮರಾಸೀ ಥೋರವೀ ತೇ ಕಾಯ ।
ದ್ವಾರಾಪಾಸಿ ರಾಹೇ ಪಾಯಪೋಸ ॥ ೧ ॥
ಪಾಹೀನ ಮೀ ದೇವಾ ಡೋಳೇಭರಿ ಮುಖ ।
ಇತುಕೇಚಿ ಸುಖ ಪುರೇ ಮಜ ॥ ೨ ॥
ಆಣಿಕ ನ ಮಾಗೆ ತುಜಸೀ ಕಾಂಹೀ ।
ಕೃಪಾದೃಷ್ಟಿ ಪಾಹೀ ಚಿದಂಬರಾ ॥ ೩ ॥
ದಾಸ ಮ್ಹಣೇ ಸರ್ವ ಸುಖ ತುಝೋ ಪಾಯಿ ।
ತೇಚಿ ಮಜದೇಯಿ ಸರ್ವಕಾಳ ॥ ೪ ॥

ಪಾಮರನಾದ ಈ ನಿನ್ನ ಕಿಂಕರನಿಗೆ ದೊಡ್ಡಿಸ್ತಿಕೆ ಬೇಡ; ಕಾಲೊರಿಸುವ ತಟ್ಟಿನಂತೆ ನಾನು ನಿನ್ನ ಬಾಗಿಲದ ಬಳಿ ಬೀಳುವೆ. ನಿನ್ನನ್ನು ಕಣ್ತುಂಬ ನೋಡುವೆ; ಇಷ್ಟೇ ಸುಖವು ನನಗೆ ಸಾಕು. ನನಗೆ ನಿನ್ನ ಕೃಪಾದೃಷ್ಟಿಯೊಂದಿ

ವ್ವರೆ ಸಾಕು; ನಾನು ಬೇರೆ ಏನನ್ನೂ ಬೇಡುವದಿಲ್ಲ. ನಿನ್ನ ಚರಣದಲ್ಲಿಯೇ ನನಗೆ ಸರ್ವ ಸುಖವಿದೆ. ನಿನ್ನ ಚರಣಸೇವೆ ನನಗೆ ಲಭಿಸಲಿ."

**ಪಂಚಪದಿ ಅ. ೧೮**

**ತುಝ್ಯೋ ದೇಖಿಯಲೇ ಪಾಯ । ಮಗ ಪಾಪ ಕೈಸೇ ರಾಹೇ ॥**
**ದಾಸಾ ಪಾಯಾಚಾ ಆಧಾರ । ಚಿದಂಬರಾ ಉತರೀ ಪಾರ ॥**

"ಚಿದಂಬರಾ ನಿನ್ನ ಚರಣದರ್ಶನವಾದ ಮೇಲೆ ಇನ್ನೆಲ್ಲಿಯ ಪಾಪ? ನಿನ್ನ ಚರಣದ ಹೊರ್ತು ನನಗೆ ಬೇರೆ ಆಧಾರವೇ ಇಲ್ಲ; ನನ್ನನ್ನು ಭವಸಾಗರ ದಿಂದ ದಾಟಿಸು."

**ಪಂಚಪದಿ ಅ. ೨೫**

( ೫ )

**ಡೋಳಾ ಉರಲಾಸೆ ಪ್ರಾಣ । ಕಾಯ ಪಾಹಸೀ ನಿಧಾನ ॥೧॥**
**ಮಾಝಾ ನಾಶವಂತ ಜೀವ ।**
**ತೂ ತೋ ಅಸಸೀ ಚಿರಂಜೀವ ॥ ೨ ॥**
**ಮಾಝಾ ಜೀವ ಗೇಲ್ಯಾವರೀ ।**
**ಪಸ್ತಾವಿಶೀ ತೂ ಅಂತರೀ ॥ ೩ ॥**
**ಲೌಕಿಕ ಜಾಯಿೀಲ ಜನಾಂತ ।**
**ದುಃಖ ಪಾವಸೀ ಮನಾಂತ ॥ ೪ ॥**
**ಮಗ ಪಸ್ತಾವೋನಿ ಕಾಯ ।**
**ಗೇಲಾ ಬಾಣ ಹಾತಾ ನ ಯೇ ॥ ೫ ॥**
**ಐಸೇ ಸಮುಜಾವೇ ಅಂತರಾ ।**
**ದಾಸ ಮ್ಹಣೇ ಚಿದಂಬರಾ ॥ ೬ ॥**

"ಚಿದಂಬರಾ, ನನ್ನ ಕಣ್ಣುಗಳಲ್ಲಿ ಮಾತ್ರ ಜೀವ ಹಿಡಿದಿದ್ದೇನೆ; ಎಲ್ಲಿಯತನಕ ನನ್ನನ್ನು ವರೆಗೆ ಹಚ್ಚುವಿ? ನೀನು ಚಿರಂಜೀವಿ; ನನ್ನ ಜೀವ ಮಾತ್ರ ಕ್ಷಣಭಂಗುರವಾದದ್ದು (ನಿನ್ನ ದರ್ಶನದ ಹಂಬಲದಲ್ಲಿ) ನಾನು ಸತ್ತರೆ ನಿನಗೆ ಪಶ್ಚಾತ್ತಾಪವಾದೀತು. ಜೋಕೆ; ನಿನಗೆ ಅಪವಾದವು ಬಂದರೆ, ದುಃಖ ನಿನಗೆ ನಿಶ್ಚಿತ. ಆಮೇಲೆ

ಪಶ್ಚಾತ್ತಾಪವಾಗಿ ಏನು ಪ್ರಯೋಜನ? ಗುರಿ ಇಟ್ಟ ಬಾಣವು ಒಮ್ಮೆ ಕೈ-ಬಿಟ್ಟಿತೆಂದರೆ, ಮುಂದೆ ಏನೂ ಪ್ರಯೋಜನವಿಲ್ಲಾ. ಇದನ್ನು ಚನ್ನಾಗಿ ತಿಳಿದುಕೊಂಡು ನನಗೆ ದರ್ಶನ ಕೊಡು" (ಇಲ್ಲವಾದರೆ ನಿನಗೆ ಅಪವಾದ ಬರುವದು ನಿಶ್ಚಿತ.)

ಪಂಚಪದೀ ಅ. ೩೪

(೬)

ಚಿದಂಬರ ಚರಣೀ ಜ್ಯಾಚಾ ಭಾವೋ।
ತ್ಯಾಸೀ ವಂದಿತಾತೀ ದೇವೋ ॥ ೧ ॥
ಇತರ ಕಾಯಸೇ ಕಿಂಕರ। ಸಿದ್ಧಿ ಜೋಡಿತಾತಿ ಕರ ॥ ೨ ॥
ಶುದ್ಧ ಘಡೇ ಜ್ಯಾಸೀ ಭಕ್ತೀ।
ತ್ಯಾಚೆ ಪಾಯಿ ಲೋಳೆ ಮುಕ್ತಿ ॥ ೩ ॥
ಚಿದಂಬರ ಧ್ಯಾನೀಂ ಮನೀಂ। ಕಾಳ ಘರೀ ವಾಹೇ ಪಾಣಿ॥೪॥
ಐಸೇ ಜ್ಯಾಚೇ ನಿಜ। ದಾಸ ತ್ಯಾಚಾ ಚರಣರಜ ॥ ೫ ॥

"ಚಿದಂಬರ ಚರಣಗಳಲ್ಲಿ ದೃಢವಿಶ್ವಾಸವಿದ್ದವರಿಗೆ ದೇವತೆಗಳೂ ಕೂಡ ತಲೆ ಬಾಗಿಸುತ್ತಾರೆ. ಅಷ್ಟಸಿದ್ಧಿಗಳೂ ಕೂಡ ಅವನ ಸೇವೆ ಮಾಡಿದ ಮೇಲೆ, ಇತರರ ಪಾಡೇನು? ನಿಶ್ಚಲ ಭಕ್ತಿಯುಳ್ಳವನ ಕಾಲ್ಕೆಳಗೆ ಮುಕ್ತಿಯು ಹೊರಳಾಡುತ್ತದೆ. ಶುದ್ಧ ಮನಸ್ಸಿನಿಂದ ಚಿದಂಬರನ ಧ್ಯಾನ ಮಾಡುವವನ ಮನೆಯಲ್ಲಿ ಕಾಲನೂ ಕೂಡ ನೀರನ್ನು ಹೊರುತ್ತಾನೆ. ಇಂತಹ ಚಿದಂಬರ ಭಕ್ತರ ಪಾದ ಧೂಳಿ ನಾನು."

ವರದ ಅಭಂಗ ೭೨

(೭)

ಐಸೀ ಸಾಮರ್ಥ್ಯಾಚೀ ಪರೀ।
ಕಾಳ ಆಜ್ಞಾ ವಂದೀ ಶಿರೀ ॥ ೧ ॥
ಯೇತೀ ಪಾಂಗುಳ್ಯಾಸೀ ಪಾಯ।
ಅಂಧ ಡೋಳೇ ಭರೀ ಪಾಹೇ ॥ ೨ ॥

ವಾಂಝೋೀ ಲಾಗೀ ಪುತ್ರ ಹೋತೀ ।
ವಿಧವಾ ನಾರೀ ಸೌಭಾಗ್ಯವತೀ ॥ ೩ ॥
ಮುಕೇ ವೇದಹೋ ಪಢತೀ ।
ರಂಕಾ ಕೇಲೇ ಗಜಪತೀ ॥ ೪ ॥
ಉಚಲುನೀ ದೇಸೀ ಖಡೀ ಮಾತೀ ।
ತ್ಯಾಂಚೀ ಸೋನೇ ರತ್ನೇ ಹೋತೀ ॥ ೫ ॥
ದಾಸ ಮ್ಹಣೆ ಚಿದಂಬರಾ ।
ಹೋಸೀ ದೀನಾಂಚಾ ಸೋಯರಾ ॥ ೬ ॥

"ಪ್ರಭುವೇ ನಿನ್ನ ಸಾಮರ್ಥ್ಯ ಅಗಾಧವಾದುದು; ಕಾಲನೂ ಕೂಡ ನಿನ್ನ ಆಜ್ಞೆಯನ್ನು ಶಿರಸಾ ವಹಿಸುವನು. ನಿನ್ನ ಮಹಿಮೆಯಿಂದ ಕುರುಡರು ಕಂಣುಗಳನ್ನೂ, ಕುಂಟರು ಕಾಲುಗಳನ್ನೂ, ಬಂಜೆಯು ಮಕ್ಕಳನ್ನೂ, ವಿಧವೆಯು ಸೌಭಾಗ್ಯವನ್ನೂ ಪಡೆಯಬಲ್ಲರು. ಮೂಕನು ಚತುರ್ವೇದಗಳನ್ನು ಮುಖಪಾಠವೆನ್ನುವನು; ರಂಕನೂ ಕೂಡ ರಾಜನಾಗಬಲ್ಲನು. ನೀನೆತ್ತಿ ಕೊಟ್ಟ ಕಲ್ಲು, ಮಣ್ಣು, ರತ್ನ ಮತ್ತು ಸುವರ್ಣವಾಗಬಲ್ಲವು. ಚಿದಂಬರಾ ನೀನೇ ನಿಜವಾದ ದೀನಬಂಧು."

ಪಂಚಪದೀ ಅ. ೫೦

(೮)

ತುಝ್ಯಾ ದ್ವಾರೀಚಾ ಭಿಕಾರೀ ।
ಭಿಕ್ಷಾ ಮಾಗತಸೇ ದ್ವಾರೀ ॥ ೧ ॥
ತೂ ತೋ ತ್ರೈಲೋಕ್ಯಾಚಾ ದಾತಾ ।
ಮ್ಹಣುನಿ ಝಾಲೋ ಮೀ ಮಾಗತಾ ॥ ೨ ॥
ಪ್ರೇಮಭಕ್ತಿ ಭಿಕ್ಷಾ ದ್ಯಾವೀ ।
ಜಾಹಲಿ ಇಚ್ಛಾ ಪುರವಾವೀ ॥ ೩ ॥
ದಾಸ ಪಸರೀ ಪದರ ।
ಭಿಕ್ಷೇ ನ ಲಾವೀ ಉಶೀರ ॥ ೪ ॥

"ನಿನ್ನ ಬಾಗಿಲದ ಬಳಿ ನಿಂತು, ಬೇಡುವೆನು ನಾ ಭಿಕ್ಷೆ;
ನೀಡೆನಗೆ ಪ್ರಭುವೆ, ಪ್ರೇಮಭಕ್ತಿಯ ಭಿಕ್ಷೆ.
ಎನ್ನ ಮನದ್ದಂಬಲವ ದೇವ ನೀ ತಣಿಸು;
ಕೈಯೊಡ್ಡಿ ಬೇಡುವೆನು, ಅಮೃತವನೆ ಉಣಿಸು.''

(೯)

**ಸ್ವಾಮೀ ದೇವಾಚಿಯಾ ದೇವಾ ।**
**ತುಮ್ಹೀ ಕೃಪಾ ಕರಾಲ ತೇಂಹ್ವಾ** ॥ ೧ ॥
**ತೀಂಹೀ ಲೋಕಾ ತೇ ಜಿಂಕೀನ ।**
**ಝೇಂಡಾ ನಿಶಾಣ ತೇ ಲಾವೀನ** ॥ ೨ ॥

"ದೇವದೇವೋತ್ತಮನೇ, ಚಿದಂಬರಾ, ಸ್ವಾಮಿರಾಯಾ, ನಿನ್ನ ಕೃಪೆಯಾದರೆ ಮೂಲೋಕಗಳನ್ನೂ ಕೂಡ ನಾ ಗೆಲ್ಲುವೆ; ನಿನ್ನ ಕೀರ್ತಿಪತಾಕೆಯನ್ನು ದಿಗ್ದಿಗಂತದಲ್ಲಿ ಹಾರಿಸುವೆ."

ಪಂಚಪದೀ ಅ. ೭೩

(೧೦)

**ಹಾಕಾರೋನಿ ಸಾಂಗೆ ಸರ್ವ ಲಹಾನ ಥೋರಾ ।**
**ಸಿದ್ಧಮುನೀಶ್ವರಾ ಸಂತಭಕ್ತಾ** ॥ ೧ ॥
**ಪೂರ್ಣಬ್ರಹ್ಮ ಝಾಲಾ ಅಸೇ ಹಾ ಅವತಾರ ।**
**ಪಹಾ ಡೋಳೆ ಭರ ಚಿದಂಬರಾ** ॥ ೨ ॥
**ಐಸಿಯಾ ದೇವಾಚೀ ಕದಾ ನೋಹೇ ಭೇಟಿ ।**
**ಕರಿತಾ ಜನ್ಮ ಕೋಟೀ ತಪ ತೀರ್ಥ** ॥ ೩ ॥
**ದವಂಡೀ ಪಿಟೋನಿಯಾ ದಾಸ ಸಾಂಗೇ ಲೋಕಾ ।**
**ಮಗ ತುಮ್ಹೀ ದೇಖಾ ಪಸ್ತಾವಾಲ** ॥ ೪ ॥

"ಹಿರಿಯರೇ. ಕಿರಿಯರೇ, ಸಿದ್ಧರೇ, ಮುನಿವರ್ಯರೇ, ಸಂತರೇ, ಭಕ್ತರೇ, ಡಂಗುರವನ್ನು ಹೊಡೆದು, ಸಾರಿ-ಸಾರಿ ಹೇಳುವೆ; ಕೇಳಿರಿ. ಈ ಚಿದಂಬರನು ಪೂರ್ಣಬ್ರಹ್ಮನ (ಪರಬ್ರಹ್ಮನ) ಅವತಾರ. ಆತನನ್ನು ಕಣ್ಣುತುಂಬ ನೋಡಿರಿ. ಕೋಟಿ ಕೋಟಿ ಜನ್ಮಗಳಲ್ಲಿ ತಪಶ್ಚರ್ಯ, ತೀರ್ಥಾಟನ ಮಾಡಿ

ದರೂ ಕೂಡ, ಇಂತಹ ದೇವರ ಭೆಟ್ಟಿ ಸಾಧ್ಯವಿಲ್ಲಾ. ನನ್ನ ನುಡಿಗಳನ್ನು ಕಿವಿಗೊಟ್ಟು ಕೇಳಿರಿ; ಇಲ್ಲವಾದರೆ ಪಶ್ಚಾತ್ತಾಪ ಪಡುವಿರಿ."

(೧೧)

**ಗುರುಪುತ್ರಾಸಿ ನಿಂದಿತೀ ।**
**ರವರವ ಯಾತನಾ ಭೋಗಿತಿ** ॥ ೧ ॥
**ಗುರುಪುತ್ರ ಜೇ ವಂದಿತೀ ।**
**ಮಹಾ ಪಾಪೀ ಉದ್ಧರತೀ** ॥ ೨ ॥
**ಗುರುಭಕ್ತಾಚೇ ಸಂಗತೀ ।**
**ತ್ಯಾಸೀ ದೇವಹೀ ವಂದಿತೀ** ॥ ೩ ॥
**ಮ್ಹಣೇ ಚಿದಂಬರ ದಾಸ ।**
**ಮಾಝಾ ದಂಡವತ ತ್ಯಾಸ** ॥ ೪ ॥

"ಗುರುಪುತ್ರನ ನಿಂದೆಯನ್ನು ಮಾಡುವವರಿಗೆ ರೌರವನರಕಯಾತನೆ ತಪ್ಪಿದ್ದಲ್ಲ; ಗುರುಪುತ್ರನಿಗೆ ನಮಿಸುವವನು, ಮಹಾ ಪಾಪದಿಂದ ಮುಕ್ತನಾಗುತ್ತಾನೆ. ಗುರುಭಕ್ತರ ಸಹವಾಸವುಳ್ಳವರಿಗೆ ದೇವರೂ ಕೂಡ ತಲೆ ಬಾಗುತ್ತಾರೆ. ಅಂತಹ ಗುರುಭಕ್ತರಿಗೆ ನನ್ನ ದೀರ್ಘದಂಡ ಶಿರಸಾಷ್ಟಾಂಗ ನಮಸ್ಕಾರಗಳು.''

ಬಾಲಕ್ರೀಡಾ ಅ. ೬. ಪು. ೫

(೧೨)

**ವೇಷ ಘೇತಾ ಅಂಗೀ ನಸೇ ಸಂತಪಣ ।**
**ಜಪ ತಪ ಅನುಷ್ಠಾನ ಕರಿತಾ ದೇಖ** ॥ ೧ ॥
**ದಾನ ಪುಣ್ಯ ಕರಿತಾ ನವ್ಹೆ ಬಾಪಾ ಸಂತ ।**
**ಜಾತಾ ಅರಣ್ಯಾಂತ, ರಾನೀ, ವನೀ** ॥ ೨ ॥
**ನವ್ಹೆ ಸಂತ ಜಾಣಾ ಘೇತಾಹೋ ವಾಕಳಾ ।**
**ಧರಿತಾ ಭೋಪಳಾ ಚಿಂಧ್ಯಾಭಾರ** ॥ ೩ ॥
**ಚಿದಂಬರ ದಾಸ ಮ್ಹಣೇ ಸಂತಜಾಣಾ ।**
**ಹೋಯ ನಿರ್ವಾಸನಾ ಶಾಂತೀರೂಪ** ॥ ೪ ॥

'ಮನುಷ್ಯನು ವೇಷವನ್ನು ಧರಿಸಿದ ಮಾತ್ರಕ್ಕೆ ಸಂತನಾಗಲಾರ; ಜಪ, ತಪ, ಅನುಷ್ಠಾನ, ದಾನ, ಪುಣ್ಯ ಕಾರ್ಯ ಮೊದಲಾದವುಗಳನ್ನು ಮಾಡಿ

ದರೂ ಸಂತನಾಗಲಾರ; ಕೈಯಲ್ಲಿ ಕಮಂಡಲು ಹಿಡಿದಮಾತ್ರಕ್ಕೆ ಸಂತನಾಗಲಾರ; ಚಿಂಧಿ ಬಟ್ಟೆಗಳನ್ನು ಧರಿಸಿದ ಮಾತ್ರಕ್ಕೆ ಸಂತನಾಗಲಾರ; ಯಾವನಲ್ಲಿ ವಾಸನಾ ಕ್ಷಯವಾಗಿದೆಯೋ, ಯಾವನಲ್ಲಿ ಅಖಂಡ ಶಾಂತಿ ಇದೆಯೋ ಅವನೇ ನಿಜವಾದ ಸಂತ.'

ವರದ ಅಭಂಗ ೪೩೧

(೧೩)

**ಯಾಲಾಗೀ ಪ್ರಾರ್ಥೀತೋ ಸರ್ವತ್ರಾ ಲಾಗೋನಿ ।**
**ಮಸ್ತಕ ಚರಣೀ ಠೇವಿತೋ ಮೀ ॥ ೧ ॥**
**ಚಿದಂಬರ ಚರಣೀ ಲಕ್ಷ ಅಸೋ ದ್ಯಾವಾ ।**
**ನಿಶ್ಚಯ ಧರಾವಾ ಮನಾಮಾಜೀ ॥ ೨ ॥**
**ಪುರವಿತೋ ಕಾಮ ಸರ್ವತ್ರ ಮನೀಚೆ ।**
**ಐಸೇ ಪ್ರತಿಜ್ಞೇಚೆ ಬೋಲತಸೇ ॥ ೩ ॥**
**ದಾಸ ಮ್ಹಣೆ ಸಾಂಗೇ ಪ್ರತ್ಯಕ್ಷ ದೃಷ್ಟಾಂತೀ ।**
**ವಿಶ್ವಾಸ ತೋ ಚಿತ್ತೀ ಅಸೋ ದ್ಯಾವಾ ॥ ೪ ॥**

'ಭಕ್ತರೇ, ನಿಮ್ಮ ಚರಣಗಳಿಗೆ ನಮಿಸಿ ಎಲ್ಲರಿಗೂ ಬೇಡಿಕೊಳ್ಳುವೆ; ಚಿದಂಬರ ಚರಣಗಳಲ್ಲಿ ನಿಮ್ಮ ಲಕ್ಷವಿರಲಿ; ಚಿದಂಬರ ಚರಣಗಳಲ್ಲಿ ಮನಸ್ಸು ನೆಲಿಸಲಿ. ನಿಮ್ಮ ಇಚ್ಛೆಗಳನ್ನೆಲ್ಲ ಚಿದಂಬರನು ಪೂರೈಸುವನೆಂದು ಪ್ರತಿಜ್ಞೆ ಮಾಡಿ ಹೇಳುವೆ. ಚಿದಂಬರನು ದೃಷ್ಟಾಂತದಲ್ಲಿ ಹೇಳಿದ ಮಾತಿದು. ಅಚಲ ವಿಶ್ವಾಸವಿಡಿರಿ.'

(೧೪)

**ಕಾಯ ವೇಚೆ ಹೇ ದಾತಾರಾ ।**
**ಭೇಟೀ ದೇತಾ ಚಿದಂಬರ ॥ ೧ ॥**
**ವಚನ ಬೋಲತಾಚಿ ದೋನ ।**
**ಕಾಯ ಖರ್ಚ ಹೋತೀ ಹೊನ್ನ ॥ ೨ ॥**
**ನ ಲಗೇ ಕೈಲಾಸ ಪದವೀ ।**
**ಭಿವೂ ನಯೇ ಭೇಟೀ ದ್ಯಾವೀ ॥ ೩ ॥**

**ನ ಲಗೇ ತುಝೀ ಬಾ ಕವಡೀ ।**
**ದಾಸಾ ದರ್ಶನಾಚೀ ಗೋಡೀ ॥ ೪ ॥**

"ಚಿದಂಬರಾ ನನಗೆ ಭೆಟ್ಟಿಯಾದರೆ ನಿನ್ನದೇನು ಗಂಟು (ಹೊನ್ನು-ಬಂಗಾರ) ಖರ್ಚಾಗುತ್ತದೆ? ನನ್ನ ಕೂಡ ಎರಡು ಮಾತುಗಳನ್ನಾಡಿದರೆ ನಿನ್ನದೇನು ಹೋಗುತ್ತದೆ? ನಾನೇನೂ ಕೈಲಾಸವನ್ನು ಬೇಡುವದಿಲ್ಲ; ನನಗೆ ಭೆಟ್ಟಿ ಕೊಡಲು ಹೆದರಬೇಡ. ನಿನ್ನದೊಂದು ಕವಡಿಯೂ, (ಕಾಸೂ) ಕೂಡ ನನಗೆ ಬೇಡ. ನಿನ್ನ ದರ್ಶನದಿಂದ ಸಿಗುವ ಅಮೃತಸಮಾನವಾದ ಸಿಹಿಯು ನನಗೆ ಬೇಕು."

ಪಂಚಪದೀ ಅ. ೪೧

"ಚಿದಂಬರನ ದಾಸಾನುದಾಸನು ಮೆಟ್ಟುವ ಜೋಡುಗಳ ಮೇಲಿನ ಧೂಳದ ಕಣ ನಾನು."

ರಾಜಾರಾಮ





# ಶ್ರೀ ಚಿದಂಬರ ಪ್ರಕಾಶ, ಭಾಗ ೧

## ಆರನೆಯ ಕಿರಣ

## ಚಿದಂಬರ ವಾಙ್ಮಯದ ಸ್ಥೂಲ ದರ್ಶನ



೧) **ಶ್ರೀಮಚ್ಚರಿತ್ರ**—ಮರಾಠಿಯಲ್ಲಿ. ಲೇ.ಸಖಾರಾಮ ಗರ್ದೇ. ಹಸ್ತ ಲಿಖಿತ ಪ್ರತಿ. ಸುಮಾರು ೧೫೦೦೦ ಶ್ಲೋಕಗಳು, ವಿವಿಧ ಛಂದಸ್ಸುಗಳಲ್ಲಿ. ಸಖಾರಾಮನ ಚರಿತ್ರದಲ್ಲಿ ಇದರ ವಿವರಗಳನ್ನು ನೋಡಬೇಕು. ಮಹಾ ಸ್ವಾಮಿಯ ಸಮಕಾಲೀನ ಕವಿಯು. ೧೭೯೯ ರಲ್ಲಿ ಗ್ರಂಥ ಬರೆಯಲು ಪ್ರಾರಂಭ, ಚಿದಂಬರ ಚರಿತ್ರಕ್ಕೆ ಮೂಲ ಆಧಾರ.

೨) **ಅಭಂಗರೂಪ ಚಿದಂಬರ ಚರಿತ್ರ**— ಸಖಾರಾಮ ಗರ್ದೆ, ೯೦೦ ಅಭಂಗಗಳು. ಮುದ್ರಿತವಾಗಿಲ್ಲ.

೩) **ಶ್ರೀ ಚಿದಂಬರ ಗುರು ಮಹಾತ್ಮ್ಯ**— ಸಂಸ್ಕೃತದಲ್ಲಿ. ರಾಮ ಚಂದ್ರ ಭೋಜರಾವ ದೇಶಪಾಂಡೆ, ಪಾಚ್ಛಾಪೂರ. ಮುದ್ರಣವಾಗಿಲ್ಲ. ೪೮ ಅಧ್ಯಾಯಗಳಿವೆ. ಒಂದು ಐತಿಹಾಸಿಕ ಮಹತ್ತ್ವದ ಅಧ್ಯಾಯವಿದೆ. 'ದಿವಾಕರ ಬಂಧನಂ ಮೋಚನಂ ಚ' ಶ್ರೀ ದಿವಾಕರ ದೀಕ್ಷಿತರ ಬಂಧನ ಹಾಗೂ ಮೋಚನ ಎಂಬುವ ಅಧ್ಯಾಯವಿದೆ.

೪) **ಶ್ರೀ ಚಿದಂಬರ ಮಹಾ ಗುರು ಚರಿತ್ರಂ**—ಸಂಸ್ಕೃತ, ಸಾಂಬ ದೀಕ್ಷಿತರಿಂದ, ಮುದ್ರಿತವಿಲ್ಲ, ೫೦ ಅಧ್ಯಾಯಗಳಿವೆ.

೫) **ಶ್ರೀ ಚಿದಂಬರ ಮಹಾ ಗುರು ಚರಿತ್ರಂ** – ಮರಾಠಿ.(ಸಾಂಬದೀ) ಪ್ರಥಮ, ದ್ವಿತೀಯ, ತೃತೀಯ ಆವೃತ್ತಿಯನ್ನು ಕಂಡಿದೆ. ಪ್ರಥಮ ಮುದ್ರಣ

ಧಾರವಾಡದಲ್ಲಿ; ದ್ವಿತೀಯ ಮುದ್ರಣ ಜಮಖಂಡಿಯಲ್ಲಿ ಚಿ. ಸೇ. ಸಮಿತಿಯಿಂದ; ತೃತೀಯ ಮುದ್ರಣ ಶ್ರೀ ಚಿ. ಸೇ. ಸಮಿತಿಯಿಂದ. ಪ್ರತಿಯೊಂದು ಅಧ್ಯಾಯದ ಕಥಾನಕಕ್ಕೆ ಸಂಬಂಧಪಟ್ಟಂತೆ ಚಿತ್ರಗಳನ್ನು ಹಾಕಲಾಗಿದೆ,

**೬) ಅಭಂಗ ಸಂಗ್ರಹ—**(ರಾಜಾರಾಮ) ಬಾಭುಳಗಾಂವದಲ್ಲಿ ೧, ೫೧, ೪೯೧ ಅಭಂಗಗಳ ಈ ಸಂಗ್ರಹ ರಾಜಾರಾಮನ ವಂಶಜ ಪ್ರಲ್ಹಾದ ಇವರ ಕಡೆಗೆ ಇದೆ. ಇದರಲ್ಲಿ ಸುಮಾರು ೪೦೦೦ ಅಭಂಗಗಳು ಮಾತ್ರ ಮುದ್ರಿತವಾಗಿವೆ.

**೭) ಪಂಚಪದೀ—** ರಾಜಾರಾಮ ವಿರಚಿತ. ಕಾಕಡಾರುತಿ, ಭೂಪಾಳಿ, ಸಾಯಂಕಾಲ ಆರತೀ ವಗೈರೆ ಇದ್ದು ೧೫೦ ಅಭಂಗಗಳೂ ಇವೆ. ರಾಮಚಂದ್ರ ತತ್ತ್ವಪ್ರಕಾಶ ಪ್ರಿಂಟಿಂಗಪ್ರೆಸ್ಸಿನಲ್ಲಿ ಮುದ್ರಿತವಾಗಿದೆ. ತೃತೀಯ ಆವೃತ್ತಿಯನ್ನು ಕಂಡಿದೆ.

**೮) ವರದ ಅಭಂಗ—** ರಾಜಾರಾಮ. ೫೨೭ ಅಭಂಗಗಳ ಸಂಗ್ರಹ ಚಿದಂಬರ ಸ್ವಾಮಿಗಳು ಪ್ರತ್ಯಕ್ಷ ದರ್ಶನ ಕೊಟ್ಟು, ಅನುಗ್ರಹಿಸಿ ಬರೆಯಿಸಿದ್ದು. ಪ್ರಥಮ ಆವೃತ್ತಿ ರಾ. ತ. ಮುದ್ರಣಾಲಯ ಬೆಳಗಾಂವ.

**೯) ನಿಜಾತ್ಮಬೋಧ—** ರಾಜಾರಾಮ. ೧೮ ಅಧ್ಯಾಯಗಳು. ಅಜಮಾಸು ೧೨೦೦ ಓವೀಗಳು ರಾ. ತ. ಪ್ರಿ. ಬೆಳಗಾಂವ, ಪ್ರಥಮ ಆವೃತ್ತಿ. ಇದರಲ್ಲಿಯೇ ಕೊನೆಯ ಅಧ್ಯಾಯದಲ್ಲಿ "ಲಘು ಚಿದಂಜರ ಚರಿತ್ರ" ವಿದೆ.

**೧೦) 'ಚಿದಂಬರ ಬಾಲಕ್ರೀಡಾ'—** ಅಭಂಗ ಸಂಗ್ರಹ. ರಾಜಾರಾಮ. ರಾ.ತ. ಪ್ರ. ಬೆಳಗಾಂವ. ಮಾರ್ತಂಡಭಟ್ಟರ ವಂಶಾವಳೀ, ತಪಶ್ಚರ್ಯ, ಚಿದಂಬರ ಅವತಾರ-ದಶಾವತಾರ ಅಭಂಗಮಾಲಿಕಾ. ಪಾಳಣಾ ವಗೈರೆ ವಿಷಯಗಳಿವೆ. ದೇವತೆಗಳ ಕೂಡ ಚಿದಂಬರನು ಆಡಿದ ವಿಷಯವೂ ಇದೆ. ಪ್ರಥಮ ಆವೃತ್ತಿ.

**೧೧) ನಿತ್ಯ ಪಾಠಾವಲಿ**–(ಕನ್ನಡ) ಪಂಚಪದಿಯಲ್ಲಿಯ ಕೆಲವು ಅಭಂಗಗಳು–ವಾರಕರೀ ಸಂಸ್ಥೆಯ ನಿಯಮಗಳು ಇವೆ. ತಡಕೋಡದ, ತ್ರ್ಯಂಬಕ ಶಿವರಾವ ದೇಶಪಾಂಡೆ ಇವರಿಂದ, ವಾರಕರೀ ಸಂಸ್ಥೆಯ ವತಿಯಂದ ಮುದ್ರಿತ.

**೧೨) ಐತಿಹಾಸಿಕ ಲೇಖಸಂಗ್ರಹ—**ಭಾಗ ೮ ರಿಂದ ೧೫. ಭಾರತ ಇತಿಹಾಸ ಸಂಶೋಧನ ಮಂಡಲ ಪೂಣೆ ವತಿಯಿಂದ ಪ್ರಕಾಶಿತ. ಮಹಾಸ್ವಾಮಿ

ಗಳು, ರಾಜ-ಮಹಾರಾಜರಿಗೆ, ಸರದಾರರಿಗೆ ಬರೆದ ಅಸಲ ಪತ್ರಗಳು ಮುದ್ರಿತವಾಗಿವೆ, ರತ್ನಾಕರಪಂತ ರಾಜಾಜ್ಞೆಗೆ ಎಚ್ಚರಿಕೆ ಕೊಟ್ಟದ್ದು. ಬಾಪೂ ಗೋಖಲೇ, ಅಪ್ಪಾ ಗೋಖಲೇ, ಧೋಂಡೋಪಂತ ಗೋಖಲೇಯವರಿಗೆ ಆಶೀರ್ವಾದ ಮಾಡಿದ್ದು, ಪರಶುರಾಮ ಭಾವೂನ ವ್ಯಾಧಿಯನ್ನು ಸ್ಪರ್ಶದಿಂದ ನೆಟ್ಟಗೆ ಮಾಡಿದ್ದು, ಪ್ರ.ಬಾಜೀರಾಯನಿಗೆ ನವಿಲುಗುಂದದಲ್ಲಿ ದರ್ಶನ ಕೊಟ್ಟದ್ದು, ಧೋಂಡಜೀವಾಘನಿಗೆ ಎಚ್ಚರಿಕೆ ಕೊಟ್ಟದ್ದು, ಸರದಾರರ ಬಡಿದಾಟವನ್ನು ರಾಜಿ ಮಾಡಿ ಮುಗಿಸಿದ್ದು, ಕೋಲ್ಹಾಪೂರದ ಶಿವಾಜೀ ಮಹಾರಾಜ V ಇವರಿಗೆ ದರ್ಶನ ಮತ್ತು ಆಶೀರ್ವಾದ ಕೊಟ್ಟದ್ದು, ಇತ್ಯಾದಿ ವಿಷಯಗಳ ಬಗ್ಗೆ ಅಸಲು ಪತ್ರಗಳನ್ನು ಮುದ್ರಿಸಲಾಗಿದೆ, ಅದ್ಭುತ ಪವಾಡಗಳನ್ನು ಮಾಡಿದ ಉಲ್ಲೇಖಗಳೂ ಹೇರಳವಾಗಿವೆ.

೧೩) **ಬಾಪೂ ಗೋಖಲೇ ಯಾಂಚಾ ಪತ್ರವ್ಯವಹಾರ ಸಂಗ್ರಹ.** ಮರಾಠಿ. ಧುಳೇದಲ್ಲಿಯ ರಾಜವಾಡಾ ಸಂಶೋಧನ ಮಂಡಲದಿಂದ ಪ್ರಕಾಶಿತ. ಶ್ರೀಮಂತ ಬಾಪೂ ಗೋಖಲೇ ಹಾಗೂ ಆವನ ತಾಯಿ ಮಹಾಸ್ವಾಮಿಗಳಿಗೆ ಬರೆದ ಪತ್ರಗಳು ಹಾಗೂ ಮಹಾಸ್ವಾಮಿಯ ಉತ್ತರರೂಪವಾದ ಪತ್ರಗಳು ಮುದ್ರಿತವಾಗಿವೆ. ಒಟ್ಟು ೨೫೦ ಪತ್ರಗಳಿದ್ದು ಅವುಗಳಲ್ಲಿ ೫೦ ಮಹಾಸ್ವಾಮಿಗಳಿಗೆ ಸಂಬಂಧಿಸಿದವುಗಳು ಇವೆ. ೧೯೪೧ ರಲ್ಲಿ ಪ್ರಕಾಶಿತ.

೧೪) **ಶ್ರೀ ಶಿವಚಿದಂಬರೇಶ್ವರ**—ವಾಜೇಂದ್ರ ಕರವೀರ ಅವರಿಂದ. ಮರಾಠಿ ೧/೮ ಕ್ರೌನ ಸಾಯಿಜ ೨೦ ಪುಟಗಳು. ಗದ್ಯ ಚರಿತ್ರ.

೧೫) **ಶ್ರೀ ಚಿದಂಬರ ಭಜನಾಮೃತ**— "ರಾಮಸ್ವಾಮಿ" ಕೀರ್ತನಕಾರರಿಂದ ರಚಿತ. ಶಕೆ ೧೮೭೯ (ಇ. ೧೯೫೭). ಭಜನ ಮತ್ತು ಭಕ್ತಿ ಗೀತಗಳು. ಕೃಷ್ಣ ಪ್ರೆಸ್ ಬೆಳಗಾಂವ.

೧೬) **ಶ್ರೀ ಶಿವ ಚಿದಂಬರ ಸ್ಮರಣಂ**—ಎ.ಎನ್. ಪಾಟೀಲ, ದೊಡವಾಡ ೧೦ ಪುಟಗಳ ಪತ್ರಿಕೆ.

೧೭) **ಮುತ್ತಿನ ಮುರಗೋಡು**—ಚಿದಂಬರ ಮಹಿಮೆಯ ಲಾವಣೀ ಪದ, ೫೪ ನುಡಿಗಳು.

**೧೮) ಶ್ರೀ ಚಿದಂಬರ ಭಕ್ತಿಗೀತಗಳು**—ಡಾ. ವಸಂತ ದೇಸಾಯಿ, ಮುಂಬೈ.೧೯೬೯. ಸ್ವತಃ ರಚಿಸಿದ ಕೆಲ ಪದ್ಯಗಳು, ಸಾವಕಾರ ಮಾಸ್ತರ ಬಡಣಿ, ಲಿಂಗರಾಜ ಕುರವತ್ತಿ, ಎನ್ ಆರ್. ಕುಲಕರ್ಣಿಯವರ ಕೆಲ ಪದ್ಯಗಳೂ ಇವೆ.

೧೯) **ಶ್ರೀ ಚಿದಂಬರ ಅಮೃತವಾಣಿ**— ೧೬ ನುಡಿಗಳು ಇವೆ. ಆದರ್ಶ ಮುದ್ರಣ, ಹುಬ್ಬಳ್ಳಿ. (ಮುದ್ರಣ ತಾರೀಖು ಇಲ್ಲ.)

**೨೦) ಕರಚೀಕಾಯಿ**— ತ್ರ್ಯ. ಶಿ. ದೇಶಪಾಂಡೆ, ಬಾಲಭಕ್ತನಿಗೆ ಸ್ವಾಮಿಗಳು ಪ್ರತ್ಯಕ್ಷ ಕರಚೀಕಾಯಿ ಕೊಟ್ಟ ಚಿಕ್ಕ ಕತೆ. ಕನ್ನಡದಲ್ಲಿ.

೨೧) **ಶ್ರೀ ಶಿವಚಿದಂಬರ ಪದ್ಯಾವಲಿ**— ಮರಾಠಿ. ಸಖಾರಾಮ ಗರ್ದೆ ಹಾಗೂ ಇತರರ ಭಕ್ತಿಗೀತಗಳು, ೧೫–೨೦ ಇವೆ. ಮುದ್ರಣದ ಸ್ಥಳ, ದಿನಾಂಕ, ಯಾವುದೂ ಇಲ್ಲ.

೨೨) **ನಾಮಸ್ಮರಣ**—ಮರಾಠಿ, ಬೆಳಗಾಂವ ತರುಣ ಭಾರತ ಪ್ರೆಸ್, ನಾಮ ಮಹಾತ್ಮೆಯ ಕುರಿತು ಚಿಕ್ಕ ಲೇಖ. ರಾಜಾರಾಮನ ಅಭಂಗಗಳು.

೨೩) **ಚಿದಂಬರ ಲೀಲಾಮೃತ**— ಕನ್ನಡ, ಚಿ. ಯ. ದೀಕ್ಷಿತ. ತಡ ಕೋಡ, ೫೧ ಅಧ್ಯಾಯಗಳಿವೆ. ಭಾಮಿನೀ ಷಟ್ಪದಿಯಲ್ಲಿ. ಸರಸ, ಸರಳ ಶೈಲಿ ಯಲ್ಲಿ ಬರೆಯಲಾಗಿದೆ.

**೨೪) ಚಿದಂಬರ ಲೀಲಾಮೃತ**— ಮರಾಠಿ, ಕುಲಕರ್ಣಿ ಮತ್ತು ಕಂಪನಿ, ಬೆಳಗಾಂವಿ, ಕ್ರೌನ ಸಾಯಿಜ, ೧/೮, ३೦ ಪುಟಗಳು.

೨೫) **ನೊಗ್ಗು ಮಾಲೆ**— ಕನ್ನಡ, ಹಣಮಂತರಾವ ಕುಲಕರ್ಣಿ ನಂದ ವಾಡಗಿ. ೧೯೬೩, ಚಿ. ಭಕ್ತಿಗೀತಗಳು. ೧/೮ ಕ್ರೌನ ಸಾಯಿಜ. ३೨ ಪುಟಗಳು. ಬಾಗಿಲುಕೋಟೆಯಲ್ಲಿ ಮುದ್ರಿತ, ಬಸವಲಿಂಗ ಪ್ರೆಸ್.

೨೬) **"ಚಿದಂಬರ ವ ಕಾವಡನಾಲಾ"**— ಮರಾಠೀ, ಪೋವಾಡಾ, (ಲಾವಣೀ) ಬಾಬಾ ಅಷ್ಟೇಕರರಿಂದ. ರಾಮೇಶ್ವರ ಪ್ರೆಸ್, ಶಹಾಪೂರ.

**೨೭) ಭಕ್ತಾನಂದ ಸೋತ್ರ**—ಚಿ. ಯ. ದೀಕ್ಷಿತ. ೧೯೭೦. ಶಿವಶಾಸ್ತ್ರಿ ವಿರಚಿತ ಭಕ್ತಾನಂದ ಸ್ತೋತ್ರದ ಕನ್ನಡ ಅನುವಾದ, ೧/೮ ಕ್ರೌನ್, ೪೪ ಪುಟ ಗಳು. ಚಂದ್ರಪ್ರಭಾ ಮುದ್ರಣಾಲಯ, ಬೆಳಗಾಂವಿ.

**೨೮) ಸಕ್ಕರಿ ಹಳಕು**— ಕನ್ನಡ. ಕುರವತ್ತಿ ಮಾಸ್ತರ. ೧೯೭३ (೪೦–೫೦ ಭಕ್ತಿ ಗೀತಗಳು.)

೨೯) **ಭಾವಗೀತಗಳು**— ಲಿಂಗರಾಜ ಕುರವತ್ತಿ. ೧೯೬೪. ಅಮರ ಪ್ರಿಂಟರ್ಸ ಹುಬ್ಬಳ್ಳಿ. ವಾರಕರೀ ಸಂಸ್ಥೆ ಹಾವನೂರ ವತಿಯಿಂದ. (೧೫–೨೦ ಪದ್ಯಗಳು.)

೩೦) **ಚಿದಂಬರೇಶ್ವರ ಭಜನೆ ಮತ್ತು ಮಂಗಲಾರತಿ**—ಸಿ. ಎಸ್. ನಾರಾಯಣರಾವ, ಸುಖಾನಂದ ನಿಲಯ, ಚಿತ್ರದುರ್ಗ. ೧೯೫೧.

೩೧) **ಶ್ರೀ ಚಿದಂಬರ ಉಪಾಸನಾ**— ಶ್ರೀ ಬಾಬಾ ಅಷ್ಟೇಕರ. ರಾ. ತ. ಪ್ರಕಾಶ. ೧೯೪೮ i) ಚಿದಂಬರ ಪ್ರಾತಃಸ್ಮರಣ, ii) ನಮನ iii) ಆರತಿ. (ಮರಾಠಿಯಲ್ಲಿ.)

೩೨) **ಚಿದಂಬರ ಸಹಸ್ರ ನಾಮಾವಲಿ**— ರಾಜಾರಾಮ ವಿರಚಿತ. ಎಚ್. ರಾಮಕೃಷ್ಣರಾವ ಶಿವಮೊಗ್ಗ. ಕನ್ನಡದಲ್ಲಿ, ೧೯೪೭.

೩೩) **ಚಿದಂಬರ ಕಥಾವಲಯ**— ಕಲ್ಲೋ ಗಣೇಶ ವಿಜಾಪೂರ. ೫ ಕತೆಗಳಿವೆ. ಮುರಗೋಡದಲ್ಲಿ ಪ್ರಕಾಶನ. ಶಕೆ ೧೮೩೧, (೧೯೦೯ ಇ,)

೩೪) **ಶ್ರೀ ಚಿದಂಬರ ಸ್ತೋತ್ರ ಪಂಚಕಮ್**— ಶ್ರೀ ಚಿದಂಬರ ದೀಕ್ಷಿತ ಬಡ್ಲಿ ಅವರಿಂದ. ಸಂಸ್ಕೃತದಲ್ಲಿ. ಶಕೆ ಶಕೆ ೧೮೪೬ (ಇ. ೧೯೨೪) ಆನಂದ ವನದಲ್ಲಿ ಮುದ್ರಿತ. i) ಚಿದಂಬರ ಮಾನಸ ಪೂಜಾ, ii) ಅಷ್ಟೋತ್ತರ ಶತ ನಾಮ, iii) ನವರತ್ನ ಮಾಲಾ, iv) ಕರುಣಾಲಹರೀ, v) ಅಪರಾಧಕ್ಷಮಾ ಪಣ. ಕರುಣಾಲಹರೀ ಸರಸವಾಗಿದ್ದು ಕೊನೆಗೆ "ಜಯ ಜಯ ಗುರುನಾಥ ವಿಭೋ ಶ್ರೀ ಚಿದಂಬರಾ" ಎಂಬ ರಮ್ಯ ಆರತಿ ಪದವಿದೆ.

೩೫ **ಶ್ರೀ ಕ್ಷೇತ್ರ ಕೆಂಗೇರಿ ಮಹಾತ್ಮೆ**— ಚಿ. ಯ. ದೀಕ್ಷಿತ. ೧೯೬೮. ಕೆಂಗೇರಿ ವಿಷಯಕ್ಕೆ ಉಪಯುಕ್ತ ಮಾಹಿತಿ ಇದೆ. ಪ್ರಾತಃಸ್ಮರಣ, ಕಾಕಡಾರತಿ, ಭಜನ, ಅಭಂಗಗಳೂ ಇವೆ. ೧/೮ ಕ್ರೌನ ಸಾಯಿಜ, ೩೪ ಪುಟ ಗಳು. ಚಂದ್ರಪ್ರಭಾ ಪ್ರೆಸ್, ಶೇರಿಗಲ್ಲಿ ಬೆಳಗಾಂವ.

೩೬) **ದ್ವಿಪಂಚಾಶತ್ ಶ್ಲೋಕೀ ಚರಿತ್ರ**— ಕಿತ್ತೂರ (ಎಮ್. ಎ.) ಅವರಿಂದ. ೫೨ ಶ್ಲೋಕುಗಳಲ್ಲಿ ಚಿ, ಚರಿತ್ರ, ಸಂಸ್ಕೃತದಲ್ಲಿ. ಬಾವನ್ನ ಶ್ಲೋಕೀ ಗುರು ಚರಿತ್ರದಂತೆ ಇದೆ.

೩೭) **ಶ್ರೀ ಕೃಷ್ಣೇಂದ್ರ ಗುರು ಚರಿತೆ**—ಕನ್ನಡ. ಹ. ರಾ ದೇಸಾಯಿ. ಹುಬ್ಬಳ್ಳಿ. ೧೯೭೦ (ಇದರಲ್ಲಿ ಮಹಾಸ್ವಾಮಿಯ ತಂದೆಯವರಾದ ಮಾರ್ತಾಂಡ

ಭಟ್ಟರ ಕೂಡ, ಕೃಷ್ಣೇಂದ್ರ ಸ್ವಾಮಿಗಳು ಕಾಶಿಗೆ ಹೋಗಿ ಸ್ವಯಂಪ್ರಕಾಶ ಯತಿಗಳ ಕಡೆಗೆ ಅಧ್ಯಯನ ಮಾಡಿದ ವಿಷಯವಿದೆ.) ಲೇಖಕರು ಕೃಷ್ಣೇಂದ್ರ ಸ್ವಾಮಿಯ ಚರಿತ್ರೆಯನ್ನೂ ಕೂಡ ಸರಸವಾಗಿ ಬರೆದಿರುವರು.

೩೮) **ಚಿದಂಬರ ಮಹಾಸ್ವಾಮಿಯ ಹಾಡುಗಳು**— ಕನ್ನಡ. ವೆಂಕಣ್ಣಾ ಚವಡಿ. ಭೂಮದ ಹಾಡು, ಉಟ್ನೀ ಪದ, ಸೋಮವಾರದಹಾಡು, ಆರತೀ ಪದಗಳು, ಚನ್ನಾಗಿವೆ. ವಿಶೇಷವಾಗಿ ಹೆಂಣುಮಕ್ಕಳಿಗೆ ಉಪಯುಕ್ತವಾದದ್ದು.

೩೯) **ಶ್ರೀ ಮಡಿವಾಳೇಶ್ವರ ಚರಿತ್ರೆ**— ಕನ್ನಡ. ರಾಮಚಂದ್ರ ಯಲಿಗಾರ, ಕೇಳಕರ ಪ್ರೆಸ್, ಧಾರವಾಡ. ೧/೮ ಕ್ರೌನ್. (ಸ್ವಾಮಿಯ ಯಜ್ಞದ ಸಮಯದಲ್ಲಿ ಕೋಟೆಯ ಮೇಲಧಿಕಾರಿಯಾಗಿ, ಮಡಿವಾಳೇಶ್ವರರು ಮಾಡಿದ ಅದ್ಭುತ ಪವಾಡದ ವಿವರಗಳಿವೆ.)

೪೦) **ಮಹಾರಾಷ್ಟ್ರ ಕವಿ ಚರಿತ್ರ. ಭಾಗ ೬**—ಇದರಲ್ಲಿ ರಾಮಚಂದ್ರ ಭೋಜೋ ದೇಶಪಾಂಡೆ ಇವರು ಬರೆದ ಸಂಸ್ಕೃತ ಚರಿತ್ರದ ಉಲ್ಲೇಖವಿದೆ.

೪೧) **ಶ್ರೀ ಚಿದಂಬರ ಮಹಾಸ್ವಾಮಿಗಳು**—ಕನ್ನಡ. ಡಾ. ವಸಂತ ದೇಸಾಯಿ, ಮುಂಬೈ. ಚಿದಂಬರ ಸಂಕ್ಷಿಪ್ತ ಚರಿತ್ರವಿದೆ.

೪೨) **ಶ್ರೀ ಚಿದಂಬರ ವಿಜಯ**— ಕನ್ನಡ, ಶ್ರೀಕಲ್ಲೋ ಗಣೇಶ ವಿಜಾಪೂರ. ಆಧಾರಯುಕ್ತ, ವಿಶ್ವಸನೀಯ ಗ್ರಂಥ, ಶ್ರೀಮಚ್ಚರಿತ್ರವೇ ಆಧಾರ, ರಾಜಕಾರಣ ವಿಷಯವನ್ನು ಚನ್ನಾಗಿ ನಿರೂಪಿಸಿದ್ದಾರೆ. ನಾಲ್ಕನೆಯ ಆವೃತ್ತಿ, ಆನಂದವದಲ್ಲಿ.

೪೩) **ಗುರುವಂದನಾ**— ಕನ್ನಡ. ನಾಡಗೀರರಿಂದ. ಆನಂದವನದಲ್ಲಿ ಮುದ್ರಣ. ಭಜನ, ಅಭಂಗ ಪದ್ಯಗಳಿವೆ. ೧೯೭೨.

೪ ) **ಶ್ರೀಮಚ್ಚರಿತ್ರಾಂತರ್ಗತ ಕಥಾಸಾರ**-ಮರಾಠೀ. ಶ್ರೀ ಜಯದೇವ ಕುಲಕರ್ಣಿ, ಬೆಳಗಾಂವ. ಚಿದಂಬರನು ದತ್ತನ ಅವತಾರವೆಂದು ತೋರಿಸುವ ೫೧ ಚಿಕ್ಕ ಚಿಕ್ಕ ಅಧ್ಯಾಯಗಳಿವೆ. ಇವುಗಳನ್ನು ಶ್ರೀಮಚ್ಚರಿತ್ರದಿಂದಲೇ ಆರಿಸಿಕೊಳ್ಳಲಾಗಿದೆ.

೫) Some Leelas of Chidambar Swami, (ಇಂಗ್ಲಿಷದಲ್ಲಿ) By U P. Krishnamachary M A. (Madras,

೪೬) **ಶ್ರೀ ಚಿದಂಬರ ಗುರು ಚರಿತ್ರ**— ಕನ್ನಡ, ಎಸ್. ಆರ್. ದೇಶಪಾಂಡೆ. ಸಾಂಬದೀಕ್ಷಿತರ ಚರಿತ್ರದ ಸಂಕ್ಷಿಪ್ತ ಕನ್ನಡ ಅನುವಾದ. ೫೧ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯಕ್ಕೆ ಚಿತ್ರಗಳಿವೆ.

೪೭ **ಶ್ರೀ ಚಿದಂಬರ ಚರಿತ್ರ**— ಕನ್ನಡ. ವೇ. ಶೀ. ಗಳಗನಾಥ. ಭಾಷೆ, ಶೈಲಿ ಮನ ಹಿಡಿಸುವಂತಿದೆ. ಸಾಕಷ್ಟು ಐತಿಹಾಸಿಕ ಮಾಹಿತಿಯು ಮಾತ್ರ ಇಲ್ಲ.

೪೮) **ಚಿದಂಬರ ಭಕ್ತಿ ಗೀತಗಳು ಹಾಗೂ ಗೊಣ್ಣಾಗರದಲ್ಲಿ ಮಾಡಿದ ಯಜ್ಞದ ವಿವರಗಳು**—ಕನ್ನಡದಲ್ಲಿ ಗ. ಚಿ. ಇನಾಮದಾರ.

೪೯) **ಚಿದಂಬರ ಸಾಂಪ್ರದಾಯಿಕ ಭಜನಾ ಪದ್ಧತಿ**—ಹಾವನೂರ ವಾರಕರೀ ಮಂಡಲದ ವತಿಯಿಂದ ಮುದ್ರಣ. ರಾಜಾರಾಮನ ಸಂಕ್ಷಿಪ್ತ ಜೀವನ. ಪ್ರಾತಃಕಾಲ, ಸಾಯಂಕಾಲ ಭಜನಾ ಪದ್ಧತಿ ಇವೆ. ಹಾವೇರಿಯಲ್ಲಿ ಮುದ್ರಿತ. ೧೯೭೭ ರಲ್ಲಿ.

೫೦) **ಸತ್ಯ ಚಿದಂಬರ ವ್ರತ ಕಥಾ**—ಕನ್ನಡದಲ್ಲಿ. ಪೂಜ್ಯ ಚಿದಂಬರ ದೀಕ್ಷಿತ ಬಡ್ಲಿ ಅವರಿಂದ. ಪೂಜಾ ಪದ್ಧತಿ, ಕತೆಗಳ ಕನ್ನಡ ಅನುವಾದ ಇವೆ. ಪುರಾಣಸಾರ ಸಂಗ್ರಹದಲ್ಲಿ, ಶಿವ-ಪಾರ್ವತಿಯರ ಸಂವಾದದಲ್ಲಿ ಬಂದ ೫ ರಮ್ಯ ಕತೆಗಳಿವೆ. ೫ ಅಧ್ಯಾಯಗಳಿವೆ. ಪೂಜಾ ವಿಧಾನ ಬಹಳ ರಮ್ಯವಿದೆ.

೫೧) **ರಾಜಾರಾಮನ ಇತರ ಕೃತಿಗಳು**— ಪಂಚರತ್ನಗಳು. ೧) ನಿಜಾತ್ಮ ಬೋಧ, ೨) ಚಿದಂಬರ ಸಹಸ್ರನಾಮ. ೩) ಕರುಣಾಸಾಗರ, ೪) ಅಮೃತಾನಂದ, ೫) ಅದ್ವೈತಸಾರ, ೬) ಜ್ಞಾನಗರ್ಭ, ೭) ಗುರೂಪದೇಶ, ೮) ಬ್ರಹ್ಮೋಪದೇಶ, ೯) ಬ್ರಹ್ಮಾನುಭವ, ೧೦) ಬ್ರಹ್ಮಾನಂದಲಹರೀ. ೧೧) ಯಜ್ಞಸಾರ. ೧೨) ಚಿದಂಬರ ಅಷ್ಟೋತ್ತರ ಶತಸ್ತೋತ್ರ. ೧೩)ಚಿದಂಬರಾ-ವಿಷಯೀ ಗಾಣೆ. (ಇವುಗಳಲ್ಲಿ ಕೆಲವು ಹಿಂದಿಯಲ್ಲಿ ಇವೆ.)

೫೨) **ಅಸಲ ಕಾಗದ-ಪತ್ರಗಳು**—ಪೆಶವೇಯರ ಆಳಿಕೆಯಲ್ಲಿಯ ಕೆಲ ಸರದಾರರ ಹಾಗು ಮಹಾಸ್ವಾಮಿಗಳ ಕಾಗದ ಪತ್ರಗಳಿವೆ.

೫೩) **ಚಿದಂಬರ ಮಹಾಸ್ವಾಮಿಗಳ ಅಮೃತವಾಣಿ**—ಚಿದಂಬರಾತ್ಮಜನಿಂದ, ಗಳಗನಾಥ ಪ್ರೆಸ್, ಧಾರವಾಡ. ನಿಜಭಕ್ತನ ಲಕ್ಷಣಗಳಿವೆ.





# ಶ್ರೀ ಚಿದಂಬರ ಪ್ರಕಾಶ, ಭಾಗ ೧

## ಏಳನೆಯ ಕಿರಣ

## ಚಿದಂಬರ ವಾಙ್ಮಯದ ಸ್ಥೂಲ ದರ್ಶನ

(ಕೆಲ ವಿದ್ವಾಂಸರ ಅಭಿಪ್ರಾಯಗಳು)

१) " .. ....................एष च प्रकटीक्रियमाणः इतिहासः भारतवर्षस्य परमुत्कर्षमावक्ष्यतीत्यत्र नास्ति संशयः। ... .. .. ..सर्वैः भारतीयैः विशेषतः इतिहासरसिकैः धार्मिकैश्च कर्मण्यस्मिन् यावच्छक्यं साहाय्यमास्थाय श्रेयोभाजनतामात्मा नीयताम् इति सप्रणयं संसूचयामः।"

विद्वन्मणि श्रीनागेशशास्त्री, उप्पिनबेटगेरि.

"... ಭಾರತೀಯರೆಲ್ಲರೂ ವಿಶೇಷತಃ ಇತಿಹಾಸದಲ್ಲಿ ಅಭಿರುಚಿಯುಳ್ಳವರೂ ಧಾರ್ಮಿಕರೂ ಈ ಕಾರ್ಯದಲ್ಲಿ ಯಥಾಶಕ್ತಿ ಸಹಾಯಮಾಡಿ ಶ್ರೇಯೋಭಾಗಿಗಳಾಗಬೇಕೆಂದು ವಿನಯ ಪೂರ್ವಕ ಸೂಚಿಸುವೆವು."

ಶ. ೧೮೫೮. ವಿದ್ವನ್ಮಣಿ, ಶ್ರೀನಾಗೇಶಶಾಸ್ತ್ರಿಗಳವರು, ಧಾರವಾಡ.

(2) The vast literature on the life and teachings of the Swami and on the imporant part he played in the social and political matters, is a precious treasure indeed... It would be a real contribution to the advancement of India's greatness.

10-8-1936 Shri. Vishvanath Keskar
DHARWAR Anand Peth, Nasik

(3) "The collection is rare and interesting. The Swami's influence at the time had penetrated the politics of so many Indian states. Great Chiefs consulted him about the politics of their states and also about their private affairs. Great many disputes were settled by the Swami."

15-10-1936 Sjt. R. S. Nargundkar, *B. A., L L. B.*
" ,, G. M. Phatak, Ret. Subjudge.
1-11-1936 ,, D. V. Belvi, *B. A., L. L. B.*
8-11-1936 ,, Pandit, Ret Chief Judge, Kolhapur.

(4) "It is I think, the bounden duty of the devotees of the Swami, to publish as soon as possible these historical documents and also the life of the Swamiji. I am sure that the message of the Swamiji given to his disciples, at different times, will be a great guide to the present generation.

9-11-1939 DHARWAR Shri Venkatrao Alur

(5) "........................ . Beisdes being a mine of information on the spiritual life of Karnataka, the collection throws a flood of light on the social and the political life of the century."

4-4-1948 Sjt. R. S. Panchmukhi *M A., PH. D.*
DHARWAR (Ret.) Director of Kannada Reaserch Association Dharwar.

(6) "These valuable letters throw a flood of light on the various aspects of the life of those days. The collection is a veritable mine of reliable material and if publi-

shed will be very useful to a historian who would like to depict a true social, religious and political history of the times " (18th century)

12-4-1948 Sjt. A. N. Sane Edcl. Inspector *S. D.*
DHARWAR ,, R. S. Hukkerikar *M. A.*

(7) ..............................Shri. Chidamber was a dynamic saint and his dynamism needs to be interpreted and instilled into the young.

Both these things are now on their way to fulfillment. This is heartening.

21-8-55 Sjt. V. K. Gokak *M. A. (Oxon)*
Principal, Karnatak College,
Dharwar.

(8) .. ...... . ... ......... ...His (Swami's) vision of things was so clear and precise, his sense of judgement so unfailing and trustworthy, his love for humanity so orderly and high that not only the religious-minded went to him for spiritual guidance, but several kings like the Maharaja of Mysore, the chiefs of Sangli, Miraj, & Jamkhandi, the Peshva of Poona, the Raja of Kolhapur and other states sought his sacred abode for advice regarding not only domestic matters but even their politi-affairs.'

Sjt. U. P. Krishnamacharya *M. A.*
Benares

(९) "श्री चिदंबर दीक्षित हे उत्तरपेशवाईचा इतिहास वाचणारांचा परिचयाचे आहेत. ते मोठे वरदी सत्पुरुष असून सुप्रसिद्ध बापू गोखल्यांचे गुरु होते. बापू गोखल्याप्रमाणें, मिरज

कर, सांगलीकर इत्यादि पटवर्धन सरदार व कोल्हापूरकर महाराज, दुसरा बाजीराव वगैरे इतर अनेकांचे ही ते गुरु होते......इ०

केसरी. पुणें



# " श्री चिदंबर महास्वामी "

## (१) ईश्वरावतार –

हितार्थत्राणार्थ उमापतीनें। युगायुगीं संभवलागि होणें ॥
प्रकृतावसाने मुर्गोड ग्रामीं। चिदंबराख्या धरि देह-जन्मी ॥

(श्रीमच्चरित्र, गर्दे)

## (२) रामावतार –

आनन्दामृतवर्षिणी अशि कथा दातार सर्वाजणा।
संपत्ती अधि दे विपत्ति हरुनी मांगल्यकारी जगा ॥
श्रीरामास तया द्विवार नमितो प्रत्यक्ष तो या युगीं।
मुर्गोडाख्य–पुरी चिदंबर वसे भावें नमूं या जगीं ॥

(श्रीमच्चरित्र गर्दे)

## (३) राम–कृष्ण–विठ्ठल अवतार –

रामकृष्ण अवतार। तोचि आता चिदंबर ॥
गरीब सोंग तो धरिला। विठ्ठली हो तोचि आला ॥
विठ्ठल राई रखुमाई। चिदंबर सावित्री सरस्वती ॥

विठाबाई सांगते खूण । आण वाहोनिया जाण ।।

(विठाबाई आत्मचरित्र)

## (४) परमेश्वरावतार

बभूव भूमौ परमेश्वरोऽसौ । चिदंबराख्यः स शिवोऽवतीर्णः ।।

(श्रीशिवशास्त्री)

## (५) शिवावतार

शिवः स्वयं भूमितलेऽवतीर्णः । चिदंबराख्यो भुवि
दीक्षितो यः ।।
ररक्ष धर्मं स हरावतारो । मलापहातीरविहार्युदारः ।।

(श्रीटेंबे महाराज)

## (६) दत्तावतार

तीघे आद्य गुणैकदेह धरूनी अत्री गृहीं राहिला ।
दत्तात्रेयचि हा चिदंबर नमू । प्रत्यक्ष की पाहिला ।।

(श्रीमच्चरित्र, गर्दे)

## (७) सद्गुरु परात्पर

धर्मस्थापना करण्या कामा । करोनि अघटित महिमा ।।
त्याच परी आता चिदंबर । मूलनामे धरोनि अवतार ।।
अगाध महिमा दाविला महीवरी । सद्गुरु परात्पर सर्वांसी तो ।।

(श्रीसांबदीक्षित)

## (८) दशावतार

अवतारांमाजीं राजा । स्वामी चिदंबर माझा ।।१।।
मत्स्य कच्छ वराह जाण । नारसिंह तो वामन ।।२।।

नामदेव राजाराम । ऐसे धरोनिया नाम ।।
परशुधर रामकृष्ण । तिहीं युगांमाजीं जाण ।।३।।
दुर्घट कलीचा स्वभाव । बौध्यरूप जाहले देव ।।४।।
दास ह्मणें चिदंबर । पुढें कलंकी होणार ।।५।।

(राजाराम. पंच. अ. ९७)





# ಶ್ರೀ ಚಿದಂಬರ ಪ್ರಕಾಶ, ಭಾಗ ೧

## ಎಂಟನೆಯ ಕಿರಣ

## ಅನುಗ್ರಹ ವಸ್ತುಗಳ ಸಂಕ್ಷಿಪ್ತ ಪರಿಚಯ

[ಶ್ರೀಚಿದಂಬರ ಮಹಾಸ್ವಾಮಿಗಳ ಜನ್ಮಸ್ಥಳವಾದ ಮುರಗೋಡದ ಬಳಿಯಲ್ಲಿ (ತಲ್ಲೂರು ಗ್ರಾಮದಲ್ಲಿ) ಶಕೆ ೧೭೧೮ರ ಸುಮಾರಿಗೆ (ಇ. ಸ. ೧೭೯೬) ಲಿಂಗಪ್ಪನೆಂಬ ಸ್ವಾಮಿನಿಷ್ಠ ಭಕ್ತನ ಕೊಲೆಯಾದದ್ದರಿಂದ, ಶ್ರೀ ಚಿದಂಬರ ದೀಕ್ಷಿತರು ಮುರಗೋಡವನ್ನು ಬಿಟ್ಟು ೧೨ ವರುಷಗಳವರೆಗೆ ಅತ್ತಿತ್ತ ಸಂಚಾರ ಮಾಡಿದರು. ಆ ಸಮಯದಲ್ಲಿ ಭಕ್ತರು ತಮ್ಮ ಸಂಕಟ ನಿವಾರಣೆ ಗಾಗಿ ದೀಕ್ಷಿತರನ್ನು ಬೇಡಿಕೊಂಡಾಗ್ಗೆ, ದಯಾಸಾಗರರಾದ ಶ್ರೀ ಚಿದಂಬರ ದೀಕ್ಷಿತರು, ಭಕ್ತರಿಗೆ, ತೆಂಗು, ಅಡಿಕೆ, ಶಾಲಿಗ್ರಾಮ, ಬಾಣ, ಲಿಂಗ, ಉತ್ತತ್ತಿ, ದುಡ್ಡು, ಶಾಲು, ಮಡಿ ಮೊದಲಾದವುಗಳನ್ನು ದಯಪಾಲಿಸಿ, ಅವುಗಳ ಆರಾಧನೆಯನ್ನು ಮಾಡಲು ಹೇಳಿ, ಭಕ್ತರ ಸಂಕಟ ನಿವಾರಣೆ ಮಾಡಿದ್ದಾರೆ. ಅಂತಹ ಅನುಗ್ರಹ ವಸ್ತುಗಳ ಸಂಕ್ಷಿಪ್ತ ಮಾಹಿತಿಯನ್ನು ಇಲ್ಲಿ ಕೊಡಲಾಗಿದೆ.]

### (೧) ಧಾರವಾಡದಲ್ಲಿ ವೇದಮೂರ್ತಿ ಮಾರ್ತಂಡಭಟ್ಟ ಲೋಣಕಡಿಯವರು.

ಇವರು ಮಹಾಸ್ವಾಮಿಯ ಸಮಕಾಲೀನರು. ವೈದಿಕ ಮನೆತನದವರು. ವೇದವೇದಾಂಗಗಳ ಅಧ್ಯಯನ ಮಾಡಿಕೊಂಡು ಕಾಲ ಕಳೆಯುತ್ತಿದ್ದರು.

ಇವರ ಧರ್ಮಪತ್ನಿ, ಶ್ರೀಮತೀ ಕಾಶೀಬಾಯಿಯವರು ಬಡತನದಿಂದ ಬೆಂದು ನೊಂದು, ಶ್ರೀ ಚಿದಂಬರ ಸ್ವಾಮಿಗಳಿಗೆ ಶರಣು ಹೋದರು. "ಸ್ವಾಮಿಗಳೇ ನಮ್ಮ ದಾರಿದ್ರ್ಯ ನಿವಾರಣೆಯನ್ನು ಮಾಡಿ, ನಮಗೆ ಶಾಂತಿ ಸಮಾಧಾನಗಳು ಸಿಕ್ಕು ನಮ್ಮ ಜೀವನ ಸುಖಮಯವಾಗುವಂತೆ ನಮ್ಮನ್ನು ಆಶೀರ್ವದಿಸಿರಿ," ಎಂದು ಭಕ್ತಿಯಿಂದ ಬೇಡಿಕೊಂಡರು. ಆಗ್ಗೆ ಮಹಾಸ್ವಾಮಿಗಳು ಅವರನ್ನು ಕೃಪಾದೃಷ್ಟಿಯಿಂದ ನೋಡಿ, ಮಾರ್ತಂಡಭಟ್ಟರ ಪತ್ನಿಯ ಉಡಿಯಲ್ಲಿ ಒಂದು ಶ್ರೀಫಳವನ್ನು (ಟೆಂಗಿನಕಾಯಿಯನ್ನು) ಹಾಕಿದರು. ಹಾಗೂ ಮಾರ್ತಂಡಭಟ್ಟರಿಗೆ ತಮ್ಮ ಅಕ್ಷಯ ಕಲಶದಿಂದ (ಗುಂಡಿಯಿಂದ) ಆರು ದುಡ್ಡುಗಳನ್ನು ಕೊಟ್ಟರು. ಅಂದಿನಿಂದ ಆ ತೆಂಗು ಹಾಗೂ ಆರು ದುಡ್ಡುಗಳನ್ನು ದೇವರಲ್ಲಿಟ್ಟು ಪೂಜಿಸತೊಡಗಿದರು. ಮುಂದೆ ಕೆಲ ದಿನಗಳಲ್ಲಿ ಅವರ ಬಡತನವು ನಿವಾರಣೆಯಾಗಿ, ಪುತ್ರ, ಪೌತ್ರ. ಧನ, ಧಾನ್ಯಾದಿಗಳನ್ನು ಪಡೆದು ಸುಖದಿಂದ ಜೀವನ ಸಾಗಿಸಿದರು. ಈಗಲೂ ಅವರ ವಂಶಜರಾದ ಶ್ರೀಪಾದಭಟ್ಟರು (ಹುಚ್ಚಪ್ಪಭಟ್ಟರು) ಹಾಗೂ ಗುರುನಾಥಭಟ್ಟರು ಇವರಲ್ಲಿ ಇವೆ. ಅವುಗಳಿಗೆ ನಿತ್ಯ ಪೂಜೆ ಸಲ್ಲುತ್ತದೆ. ಈ ಮಾಹಿತಿಯನ್ನು ಮಾರ್ತಂಡಭಟ್ಟರ ವಂಶಜರಾದ ಶ್ರೀಪಾದಭಟ್ಟರು ಹಾಗೂ ಅವರ ತಮ್ಮಂದಿರಾದ ಶ್ರೀಧರಭಟ್ಟರಿಂದ ಸಂಪಾದಿಸಿದೆನು.(ಮೂಲ ಮಾರ್ತಂಡಭಟ್ಟರಿಂದ ನಾಲ್ಕನೆಯ ತಲೆಯವರು). ನನ್ನನ್ನು ಆದರದಿಂದ ಬರಮಾಡಿಕೊಂಡು ಮಾಹಿತಿಯನ್ನು ಕೊಟ್ಟದ್ದಕ್ಕೆ ನಾನು ಚಿರಋಣಿಯಾಗಿದ್ದೇನೆ. ಅವರಿಂದಲೇ ವಂಶಾವಳಿಯನ್ನೂ ಕೂಡ ಸಂಪಾದಿಸಿ, ಅದನ್ನು ಇಲ್ಲಿ ಕೊಡಲಾಗಿದೆ,

ಇವರ ಘರಾಣೆಯಲ್ಲಿ, **ವೇ. ರಾ. ರಾಮುಭಟ್ಟರು** ನ್ಯಾಯ, ಜ್ಯೋತಿಷ, ಯಾಜ್ಞಿಕದಲ್ಲಿ ನಿಷ್ಣಾತರಿದ್ದರು. ಅವರನ್ನು ರಾಮಶಾಸ್ತ್ರಿಗಳೆಂದೇ ಕರೆಯುತ್ತಿದ್ದರು. ಯಜ್ಞಯಾಗಾದಿಗಳಲ್ಲಿ ಮಹತ್ತ್ವದ ಪಾತ್ರವನ್ನು ವಹಿಸುತ್ತಿದ್ದರು, ಕಾವ್ಯಶಾಸ್ತ್ರದಲ್ಲಿಯೂ ನಿಷ್ಣಾತರಿದ್ದು, ಹೈದ್ರಾಬಾದ ಮತ್ತು ಬಡೋದಾ ಸಂಸ್ಕೃತ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ, ಪಂಡಿತರೆಂದು ಬಿರುದನ್ನು ಪಡೆದಿದ್ದರು. ಪೂಜ್ಯ ಕೃಷ್ಣಶಾಸ್ತ್ರೀ ಉಪ್ಪಿನ ಬೆಟಗೇರಿ ಇವರಲ್ಲಿ ತಮ್ಮ ಅಧ್ಯಯನ ಮಾಡಿದ್ದರು. ಶ್ರೀ ಶಂಕರಾಚಾರ್ಯ ಸಂಸ್ಕೃತ ಪಾಠಶಾಲೆಯಲ್ಲಿ ಸಾಹಿತ್ಯವನ್ನು

ಕೆಲ ವರುಷ ಕಲಿಸುತ್ತಿದ್ದರು. ಧಾರವಾಡದ ಕರ್ನಾಟಕ ಹಾಯಸ್ಕೂಲಿನ ಸಂಸ್ಥಾಪಕರಲ್ಲಿ ಇವರೂ ಒಬ್ಬರು ಅಲ್ಲಿ ೩-೪ ವರುಷ ಸಂಸ್ಕೃತವನ್ನು ಕಲಿಸಿದ್ದಾರೆ.

ಸಧ್ಯದ ವಿಳಾಸ—೧) ಶ್ರೀಪಾದಭಟ್ಟರು ಲೋಣಕಡಿ
೨) ಶ್ರೀಗುರುನಾಥಭಟ್ಟರು ಲೋಣಕಡಿ
ಶುಕ್ರವಾರ ಪೇಠ, ಧಾರವಾಡ.

**ವಂಶಾವಳಿ**

ಮೂಲ ಪುರುಷರು ಶ್ರೀ ಮಾರ್ತಂಡಭಟ್ಟರು (ಪತ್ನಿ-ಕಾಶೀಬಾಯಿ)
| (ಮಹಾಸ್ವಾಮಿಯ ಸಮಕಾಲೀನರು)
ಶ್ರೀ ತಮ್ಮಣ್ಣಭಟ್ಟರು ಪತ್ನಿ ಬಾಳೂಬಾಯಿ
|
ಶ್ರೀ ರಾಮಶಾಸ್ತ್ರಿಗಳು ಪತ್ನಿ ಸೀತಾಬಾಯಿ
| (೧೮೮೫-೧೯೪೫)

ಶ್ರೀಪಾದಭ. ಧಾರವಾಡ | ವಾಸುದೇವಭ. ಬೆಳಗಾಂವ | ಗುರುನಾಥಭ. ಧಾರವಾಡ | ಶ್ರೀಧರಭ. ಹೈದ್ರಾಬಾದ | ಭಾಲಚಂದ್ರಭ.

ಶ್ರೀಪಾದಭ.: ವಾಮನ, ಪ್ರಭಾಕರ, ಸುಶೀಲಾ,
ಗುರುನಾಥಭ.: (ಇವರಲ್ಲಿಯೇ ಕಾಯಿ, ದುಡ್ಡುಗಳು ಇವೆ.)

ವಾಮನ: ಪೋಸ್ಟಲ್.ಡಿ. ಬಾಂಬೇ
ಪ್ರಭಾಕರ: ಕರ್ನಾಟಕ ಹಾ ಸ್ಕೂ. ಡೊಂಬಿವಲಿ

ಅನಿಲ ಮೋಹನ ಸುಭಾಸ ಅಂಜನಾ

## (೨) ಶ್ರೀ ಜೀವಣರಾವ ವೆಂಕಟರಾವ ದೇಶಪಾಂಡೆ (ಧಾರವಾಡ

ಧಾರವಾಡದ ದೇಶಪಾಂಡೆ ಮನೆತನಕ್ಕೂ ಹಾಗೂ ಶ್ರೀ ಚಿದಂಬರ ಮಹಾಸ್ವಾಮಿಗಳಿಗೂ ನಿಕಟವಾದ ಸಂಬಂಧವಿದೆ. ಮಹಾಸ್ವಾಮಿಗಳು ಧಾರ

ವಾಡಕ್ಕೆ ಬಂದಾಗ್ಗೆ ಶ್ರೀ ಜೀವಣರಾವ ಇವರ ಮನೆಯಲ್ಲಿಯೇ ಇಳಿದು ಕೊಳ್ಳುತ್ತಿದ್ದರು. ಜೀವಣರಾಯರು ಆಗ ತೀರ ಚಿಕ್ಕವರು. ತಂದೆಯು ಚಿಕ್ಕಂದಿನಲ್ಲಿಯೇ ತೀರಿಕೊಂಡದ್ದರಿಂದ, ಇವರ ತಾಯಿ ರಾಣೂಬಾಯಿಯ ಮೇಲೆಯೇ ಪ್ರಪಂಚದ ಭಾರ ಬಿತ್ತು. ವೆಂಕಪ್ಪಾ ಶಿವಪ್ಪಾ ನಾಡಗೀರ ಎಂಬು-ವವರು ಜೀವಣರಾಯರ ಒಟ್ಟು ಮುಖತ್ಯಾರರಾಗಿ ಆಸ್ತಿಯ ಮೇಲ್ವಿಚಾರಣೆ ಮಾಡುತ್ತಿದ್ದರು. ಆ ಮೇಲ್ವಿಚಾರಣೆ ಸರಿಯಾಗಿ ನಡೆಯುದ್ದರಿಂದ ಜೀವಣ ರಾಯರಿಗೆ ಜೀವನವನ್ನು ಸಾಗಿಸುವದು ಕಠಿಣವಾಯಿತು. ಸಂಪತ್ತಿ ಇದ್ದರೂ ಕೂಡ, ಬಡತನದಿಂದ ಬಳಲುತ್ತಿದ್ದ ಇವರ ತಾಯಿಗೂ ಸಂಕಷ್ಟಪರಂಪರೆಯೇ ಬಂದಿತು. ಆದರೆ ಅವಳು ಧೈರ್ಯದಿಂದ ಪರಿಸ್ಥಿತಿಯನ್ನು ಎದುರಿಸುತ್ತಿದ್ದಳು. ಒಂದು ದಿನ ಈ ಮನೆತನದ ಹಿರಿಯರ ಪುಣ್ಯಫಲದಿಂದ ಇವರ ಉದ್ಧಾರ ಕಾಲವು ಬಂದಿತು. ಇವರ ಮನೆ ಆಗ ತೀರ ಸಣ್ಣದಿತ್ತು. ಅದರ ಮುಂದೆ ಒಂದು ಸಣ್ಣ ಚಪ್ಪರವಿತ್ತು. ಆ ಚಪ್ಪರದ ಮಾರ್ಗವಾಗಿಯೇ ಮನೆಯೊಳಗೆ ಪ್ರವೇಶ ಮಾಡಬೇಕಾಗುತ್ತಿತ್ತು. ಒಮ್ಮೆ ಶ್ರೀ ಚಿದಂಬರ ಮಹಾಸ್ವಾಮಿಗಳು ಈ ಚಪ್ಪರವನ್ನು ದಾಟಿ ಹೋಗುವಾಗ್ಗೆ, ಚಪ್ಪರದ ಚೂಪಾದ ಕಟ್ಟಿಗೆಯ ತುದಿಯು ಮಹಾಸ್ವಾಮಿಯ ಹಣೆಗೆ ತಿವಿಯಿತು. ಅದರಿಂದ ಹಣೆಗೆ ಗಾಯ ವಾಗಿ ರಕ್ತ ಸುರಿಯುಹತ್ತಿತು. ಒಳಗಿದ್ದ ರೇಣೂಬಾಯಿಯು ಧಾವಿಸಿ ಬಂದು ರಕ್ತ ಸುರಿಯುವದನ್ನು ನೋಡಿ, "ದೇವಾ ನನ್ನ ಗುರುಗಳಿಗೆ ನನ್ನ ಮನೆ ಯಲ್ಲಿಯೇ ಇಂತಹ ದುಃಖವಾಗಬೇಕೇ ? ನಾನೆಂತಹ ದುರ್ದೈವಿ ?' ಎಂದು ದೈವವನ್ನು ಹೀಯಾಳಿಸಿ, ತನ್ನ ಸೀರೆಯ ಸೆರಗನ್ನು ಹರಿದು, ಅದನ್ನು ಮಹಾ ಸ್ವಾಮಿಯರ ಹಣೆಗೆ ಕಟ್ಟಿದಳು. ಆಗ ರಕ್ತ ಹರಿಯುವದು ನಿಂತಿತು. ಮುಂದೆ ಗಾಯವು ವಾಸಿಯಾಯಿತು. ದಿನಾಲೂ ರೇಣೂಬಾಯಿಯು ತನ್ನ ಪ್ರಪಂಚದ ಸುಖದುಃಖಗಳನ್ನು ಮಹಾಸ್ವಾಮಿಗಳಿಗೆ ತಿಳಿಸಿ, ದೈನ್ಯದಿಂದ ಕಣ್ಣೀರಿಡುತ್ತಿ-ದ್ದಳು. ಕಾರಭಾರಿಯ ಅಪ್ರಾಮಾಣಿಕತೆಯಿಂದ ಇವರ ಮನೆತನದ ಸ್ಥಿತಿ ಹೀನಾಗಿದೆಯೆಂದು ಮಹಾಸ್ವಾಮಿಗಳಿಗೆ ತಿಳಿಯಿತು. ಕಾರಭಾರಿಯು ಬಲಿಷ್ಠ ನಿದ್ದದರಿಂದ, ಜೀವಣರಾಯರಾಗಲೀ, ರಾಣೂಬಾಯಿಯಾಗಲೀ, ಪ್ರತಿಭಟಿಸು ವಂತೆ ಇರಲಿಲ್ಲ. ಆಗ್ಗೆ ಅವರು ಮಹಾಸ್ವಾಮಿಗಳಿಗೆ ಶರಣು ಹೋಗಿ, ತಮ್ಮ ದುಃಖವನ್ನೆಲ್ಲ ತೋಡಿಕೊಂಡರು. ಮಹಾಸ್ವಾಮಿಯು ಕೂಡಲೇ ಕಾರಭಾರಿ

ಯಾದ ವೆಂಕಪ್ಪನನ್ನು ಕರೆಯಿಸಿ, ಅವನಿಗೆ ಸಾಮೋಪಚಾರದಿಂದ ಉಪದೇಶಿಸಿದರು. "ವೆಂಕಣ್ಣಾ ಪರಧನ, ಪರಸ್ತ್ರೀಯರನ್ನು ಕಣ್ಣೆತ್ತಿ ಕೂಡ ನೋಡಬಾರದು. ಪರನಾರಿಯರನ್ನು ತಾಯಿಯಂತೆ, ಪರಧನವನ್ನು ಮಣ್ಣಿನಂತೆ ಕಾಣಬೇಕು, ತನ್ನಂತೆ ಪರರಿಗೂ ಸುಖ-ದುಃಖಗಳಿವೆಯೆಂಬ ಭಾವನೆಯಿಂದ ಯಾರ ಮನಸ್ಸನ್ನೂ ನೋಯಿಸಬಾರದು. ಆಶ್ರಿತರ ಧನಕನಕಾದಿಗಳನ್ನು ಅಪಹರಿಸಬಾರದು. ಧನವನ್ನು ಅಪಹರಿಸುವದು ಮಹಾಪಾತಕ. ಜೀವಣರಾಯರ ಆಸ್ತಿಯನ್ನು ಅವರಿಗೆ ಬಿಟ್ಟುಕೊಟ್ಟು ಬಿಡು. ಅದರಿಂದ ನಿನಗೆ ಕಲ್ಯಾಣವಾಗುವದು; ಇಲ್ಲವಾದರೆ ನಿನ್ನ ಸರ್ವಸ್ವವೂ ನಾಶವಾಗುವದು ಖಂಡಿತ" ಎಂದು ಎಚ್ಚರಿಸಿದರು. ಆಗ್ಗೆ ವೆಂಕಪ್ಪನು, ಎಷ್ಟೇ ಧೈರ್ಯಶಾಲಿಯು ಇದ್ದರೂ ಕೂಡ, ದೀಕ್ಷಿತರ ಪ್ರಭಾವಕ್ಕೆ ಹೆದರಿ, ತಾನು ಇಲ್ಲಿಯವರೆಗೆ ಮೇಲ್ವಿಚಾರಣೆ ಮಾಡಿದ್ದಕ್ಕಾಗಿ ಕೆಲವು ಜಮೀನು ಹಾಗೂ ರೋಖು ಹಣವನ್ನೂ ತೆಗೆದುಕೊಂಡು, ಜೀವಣರಾಯರಿಗೆ ಅವರ ಆಸ್ತಿಯನ್ನು, ಪಡ ಜಾಗಾ ಮೊದಲಾದವುಗಳನ್ನು ಬಿಟ್ಟು ಕೊಟ್ಟನು. ಅಂದಿನಿಂದ ಜೀವಣರಾಯರ ಹೊಸ ಜೀವನ ಪ್ರಾರಂಭವಾಯಿತು. ಸ್ವತಃ ಮಹಾಸ್ವಾಮಿಗಳೇ ಈಗಿರುವ ದೊಡ್ಡ ಮನೆಗೆ ಅಡಿಗಲ್ಲನ್ನು ಹಾಕಿದರಂತೆ. ಅವರ ನಿರ್ದೇಶನದಂತೆಯೇ ಬಾಂವಿ, ದೇವರ ಮನೆ, ಅಡಿಗೆಯ ಮನೆ ಇತ್ಯಾದಿ ನಿರ್ಮಿತವಾದವು. ಮನೆಯ ವಾಸ್ತು ಶಾಂತಿಯೂ ಕೂಡ ಮಹಾಸ್ವಾಮಿಗಳ ನೇತೃತ್ವದಲ್ಲಿಯೇ ನೆರವೇರಿತು. ಇಷ್ಟೇ ಅಲ್ಲದೇ ತಾವೇ ನಾಂದೀ ಇಟ್ಟುಕೊಂಡು, ಜೀವಣರಾಯರ ಉಪನಯನ ಸಮಾರಂಭವನ್ನು ಕೂಡ ಮಾಡಿದರಂತೆ. ದೀಕ್ಷಿತರ ಅನುಗ್ರಹದಿಂದ ಅಂದಿನಿಂದ ಮನೆತನವು ದಿನೇದಿನೇ ಉತ್ಕರ್ಷ ಹೊಂದುತ್ತಲೇ ನಡೆಯಿತು. ಜೀವಣರಾಯರಿಗೆ ಆಶೀರ್ವಾದರೂಪವಾಗಿ ಶ್ರೀ ಚಿದಂಬರ ಸ್ವಾಮಿಗಳು ಒಂದು ತೆಂಗು (ಶ್ರೀಫಳವನ್ನು) ಕೊಟ್ಟರು, ಕೆಲ ದಿನಗಳಲ್ಲಿ ಅದು ಮೊಳಕೆಯೊಡೆದದ್ದರಿಂದ ಅದನ್ನು ತಮ್ಮ ಅಂಗಳದಲ್ಲಿ ನೆಟ್ಟರು. ಅದರ ಅವಶೇಷ ಈಗಲೂ ನೋಡಲು ಸಿಗುವದು. ಮಹಾಸ್ವಾಮಿಗಳು ಕಟ್ಟಿಸಿದ ದೇವರಮನೆ, ಜೀವಣರಾಯರ ವಂಶಜರಾದ ಶ್ರೀ ಅನಂತರಾವ ದೇಶಪಾಂಡೆ ಇವರ ಮನೆಯಲ್ಲಿ ಇದೆ. ಇವರ ಹಿತ್ತಲದಲ್ಲಿದ್ದ ಭಾಂವಿಯೂ ಕೂಡ ಮಹಾಸ್ವಾಮಿಯ ಹೇಳಿಕೆಯಂತೆಯೇ ಕಟ್ಟಿಸಿದ್ದು, ಇದನ್ನು ಕೆಲ ದಿನಗಳ ಹಿಂದೆ, ಮುಚ್ಚಿಸಿ

ಬಿಡಬೇಕೆಂದು ವಿಚಾರ ಮಾಡಿದಾಗ್ಗೆ, ಅದನ್ನು ಸರ್ವಥಾ ಮುಚ್ಚಿಸಬಾರ ದೆಂದು ದೃಷ್ಟಾಂತವಾದದ್ದರಿಂದ, ಹಾಗೆಯೇ ಬಿಟ್ಟಿದ್ದಾರೆ. ಮಹಾಸ್ವಾಮಿಗಳು ಮೊದಲು ಪೂಜೆಗೆ ಕುಳಿತುಕೊಳ್ಳುತ್ತಲಿದ್ದ ಸ್ಥಾನವು ಹಾಗೂ ವಿಶ್ರಾಂತಿ ಪಡೆ ಯುವ ಸ್ಥಾನವು ಸಧ್ಯ ಜೀವಣರಾಯರ ವಂಶಜರಾದ ಶ್ರೀ ಕಾಶೀರಾಯ ಕೋನ್ನೇರಿ ಅವರ ದೇವರ ಮನೆಯಾಗಿ ಪರಿವರ್ತನವಾಗಿದೆ, ಅಲ್ಲದೇ ದೇಶ ಪಾಂಡೆ ಘರಾಣೇದ ಎಲ್ಲಮ್ಮನ ಗುಡಿಯೂ ಕೂಡ ಶ್ರೀ ದೀಕ್ಷಿತರ ಹೇಳಿಕೆ ಯಂತೆಯೆ ನಿರ್ಮಾಣವಾಗಿದೆಯಂತೆ. ಇದು ಮೂಲ ಮನೆಯ ಮಹಾ ದ್ವಾರದ ಬಳಿ ಇದೆ. ಆಗಿನ ಸಮಯದಲ್ಲಿ ಧಾರವಾಡದಲ್ಲಿ ಕಾಲರಾ ಬೇನೆಯು ಪ್ರಬಲವಾದಾಗ್ಗೆ, ದೇಶಪಾಂಡೆ ವಾಡೆಯ ಸುತ್ತುಮುತ್ತಲಿನ ಜನರು ಊರು ಬಿಟ್ಟು ಹೋದರೂ, ದೇಶಪಾಂಡೆ ಮನೆತನದವರು ಅಲ್ಲಿಯೇ ತಮ್ಮ ವಾಡೆ ಯಲ್ಲಿ ಇದ್ದು ದಿನಾಲೂ ಚಿದಂಬರ ನಾಮೋಚ್ಚಾರ ಮಾಡುತ್ತಿದ್ದರು. ಆಗ ಜೀವಣರಾಯರಿಗೆ ಧೂಮಾಕೃತಿಯ ದೇವಿಯ ರೂಪವೊಂದು ಕಾಣಿಸಿತಂತೆ. ಅದು ಬರಬರುತ್ತ ದುರ್ಗಾದೇವಿಯ ರೂಪ ತಾಳಿ ಕೂಗಿತಂತೆ. "ನನಗೆ ಆಹಾರ ಬೇಕು; ನನಗೆ ಬಲಿ ಬೇಕು. ಆದರೆ ನಿಮ್ಮಲ್ಲಿ ಚಿದಂಬರ ನಾಮ ಗರ್ಜನೆ ನಡೆದದ್ದರಿಂದ ನಿನ್ನ ವಾಡೆಯಲ್ಲಿ ನನಗೆ ಯಾವ ಬಲಿಯೂ ಸಿಗ ಲೊಲ್ಲದು. ನಾನು ಒಳಗೆ ಪ್ರವೇಶ ಮಾಡಲಾರೆ; ಆ ಚಿದಂಬರನನ್ನು ಕಳಿಸಿ ಬಿಡಿರಿ." ಎಂದು ಆಕ್ರೋಶ ಮಾಡಿತು. ಆಗ ಜೀವಣರಾಯರು ಈ ವೃತ್ತಾಂತ ವನ್ನು ಮಹಾಸ್ವಾಮಿಗಳಿಗೆ ತಿಳಿಸಿದರು. ಅವರು ಕೂಡಲೇ ಬಂದು ಶ್ರೀ ದುರ್ಗೆಯನ್ನು ಸ್ತುತಿಸಿ, "ದೇಶಪಾಂಡೆಯವರು ನಿನಗೆ ಮಿಷ್ಟಾನ್ನ ಭೋಜನ ವನ್ನು ಹಾಕುವರು. ಮಾನವ ಬಲಿಯನ್ನು ಮಾತ್ರ ಬೇಡಬೇಡ" ಎಂದು ಬೇಡಿಕೊಂಡರಂತೆ. ಅಂದಿನಿಂದ ಆ ಧೂಮಾಕಾರದ ದೇವಿಯು ಕಂಡ ಸ್ಥಾನ ದಲ್ಲಿ ಒಂದು ದುರ್ಗಾ ಪ್ರತೀಕವಾದ ಕಲ್ಲನ್ನು ಇರಿಸಿ, ಅದಕ್ಕೆ ಪ್ರತಿ ಅಮಾ ವಾಸ್ಯಾ ಹೂರಣ ನೈವೇದ್ಯವನ್ನು ಸಮರ್ಪಿಸುವ ಪರಿಪಾಠ ಈಗಲೂ ಇದೆ ಯಂತೆ. ಈ ರೀತಿ ಸ್ವಾಮಿಯಿಂದ ಅನುಗ್ರಹೀತವಾದ ಮನೆತನವು ದಿನೇದಿನೇ ಉತ್ಕರ್ಷ ಹೊಂದಿದೆ. ಸುಶಿಕ್ಷಿತರೂ, ಪ್ರಭಾವಿಗಳೂ, ಪದವೀಧರರೂ, ವ್ಯವ ಸಾಯಿಗಳೂ ಈಗಲೂ ಇದ್ದಾರೆ. ಅವರ ವಂಶಾವಳಿಯನ್ನು ಅವಲೋಕಿಸಿದರೆ, ವಂಶವೃಕ್ಷದ ವಿಸ್ತಾರವು ಗೋಚರವಾಗುವದು.

ಈ ಘರಾಣೆಯಲ್ಲಿ ಪ್ರತಿವರುಷ ಶ್ರೀ ಚಿದಂಬರ ಮಹಾಸ್ವಾಮಿಯ ಪುಣ್ಯೋತ್ಸವವನ್ನು ಮಾಡುವ ಪರಿಪಾಠವಿದೆ. ಪುಷ್ಯ ಶುದ್ಧ ಚತುರ್ಥಿಯ ದಿನ, ದೇವರಿಗೆ ಅಭಿಷೇಕ, ಬ್ರಾಹ್ಮಣ ಭೋಜನ ಈಗಲೂ ನಡೆಯುತ್ತವೆ. ಶ್ರೀ ಚಿದಂಬರ ದೀಕ್ಷಿತರ ವಂಶಜರು ಇವರ ಮನೆಗೆ ಆಗಾಗ್ಗೆ ಬಂದು ಆಶೀರ್ವದಿಸಿ, ಚಿದಂಬರನ ಪ್ರಸಾದ ಕೊಟ್ಟು ಹೋಗುತ್ತಾರೆ. ಸಧ್ಯಕ್ಕೆ ಇರುವ ಶ್ರೀ ಕಾಶೀರಾವ ಕೋನ್ಹೇರಿ, ಚಿದಂಬರರಾವ ಹಾಗು ವಿನಾಯಕರಾವ ಮೊದಲಾದವರು ಕರ್ನಾಟಕ ಹಾಯಸ್ಕೂಲಿನಲ್ಲಿ ನನ್ನ ಕೈಯಲ್ಲಿ ಓದಿದ ಮೇಧಾವಿ ವಿದ್ಯಾರ್ಥಿಗಳಾಗಿದ್ದಾರೆ. ಅನುಗ್ರಹೀತ ಮನೆತನದ ಸಂಕ್ಷಿಪ್ತ ಇತಿಹಾಸವನ್ನು, ಶ್ರೀ ಚಿದಂ-ಬರ ಪ್ರಕಾಶವೆಂಬ ಪುಸ್ತಕದಲ್ಲಿ ಸೇರಿಸುವ ನನ್ನ ವಿಚಾರವನ್ನು ಮೆಚ್ಚಿಕೊಂಡು ನನ್ನನ್ನು ಆದರದಿಂದ ಬರಮಾಡಿಕೊಂಡು ನನಗೆ ಮಾಹಿತಿಯನ್ನು ಕೊಟ್ಟ, ಶ್ರೀ ದತ್ತಾತ್ರಯರಾವ, ಶ್ರೀ ಕಾಶೀರಾವ, ಶ್ರೀ ಅಪ್ಪಾರಾವ, ಶ್ರೀ ಅನಂತರಾವ, ಶ್ರೀ ಚಿದಂಬರರಾವ, ಶ್ರೀ ವಿನಾಯಕರಾವ ಇವರೆಲ್ಲರಿಗೂ ನಾನು ಉಪಕೃತ. ಅವರ ದೃಷ್ಟಿಯು ಚಿದಂಬರ ವಾಙ್ಮಯದ ಕಡೆಗೆ ಹರಿಯಬೇಕು. ಸಂಸ್ಕೃತ, ಮರಾಠೀ ಭಾಷೆಗಳಲ್ಲಿದ್ದ ಮೂಲ ವಾಙ್ಮಯವು ಬೆಳಕನ್ನು ಕಾಣಬೇಕು. ಈ ವಾಙ್ಮಯದಲ್ಲಿ ಸಂಶೋಧನೆಯಾಗಿ ನಿಜವಾದ ಇತಿಹಾಸವು–ಜೀವಂತ ಇತಿಹಾಸವು ಹೊರ-ಬರಬೇಕು ಮಹಾಸ್ವಾಮಿಯ ಅಸಲು ಕಾಗದ ಪತ್ರಗಳು ಮುದ್ರಿತವಾಗಬೇಕು. ಈ ಕಾರ್ಯದಲ್ಲಿ ಭಕ್ತರೆಲ್ಲರೂ ತನು-ಮನ-ಧನದಿಂದ ಸಹಾಯ ಸಲ್ಲಿಸಬೇಕೆಂದು ಆಗ್ರಹದ ಬಿನ್ನಹ.

## ಈ ಮನೆತನದಲ್ಲಿಯ ಗಣ್ಯ ವ್ಯಕ್ತಿಗಳು

೧) ಶ್ರೀ ಗೋಪಾಳರಾವ ದೇಶಪಾಂಡೆ, ನಿಷ್ಠಾವಂತ ಕಾಂಗ್ರೆಸ್ಸಿಗರು; ಸಾರ್ವಜನಿಕ ಕಾರ್ಯಕರ್ತರು; ಖಾದೀ ಪ್ರೇಮಿಗಳು.

೨) ಶ್ರೀ ಕಾಶೀರಾವ ಕೋನ್ಹೇರಿ, ಎಮ್. ಏ. ಎಲ್. ಎಲ್. ಬಿ. ಘರಾಣೆಯ ಸಂಪ್ರದಾಯವನ್ನು ಪಾಲಿಸುತ್ತ, ತಮ್ಮಂದಿರ, ಯೋಗಕ್ಷೇಮ ನೋಡಿಕೊಂಡು, ಮನೆತನದ ಭಾರವನ್ನು ವಹಿಸಿದವರು; ಈಗಲೂ ಚಿದಂಬರ ಪುಣ್ಯೋತ್ಸವವನ್ನು ನೆರವೇರಿಸುತ್ತಾರೆ. ಚಿದಂಬರನಲ್ಲಿ ಅಚಲ ವಿಶ್ವಾಸ, ಶ್ರದ್ಧೆ ಇವೆ.

೩) ಶ್ರೀ ಚಿದಂಬರರಾವ ಕೋನ್ಹೇರಿ ಎಮ್. ಡಿ. ಡೀನ್. ಕೆ. ಇ. ಎಮ್. ಹಾಸ್ಪಿಟಲ್, ಮುಂಬಯಿ, ಇಂಟರನ್ಯಾಶನಲ್ ಪ್ಯಾಥೋಲಾಜಿಸ್ಟ.
೪) ಶ್ರೀ ವಿನಾಯಕರಾವ ಕೋನ್ಹೇರಿ ಎಮ್. ಎಸ್. ಸಿ. ಪಿ. ಎಚ್. ಡಿ. ಕೆಲ ಕಾಲ ಜೆ. ಎಸ್. ಎಸ್. ಸಾ. ಕಾಲೇಜ, ಧಾರವಾಡ, ಇಲ್ಲಿ ಪ್ರಿನ್ಸಿಪಾಲರು.
೫) ಶ್ರೀ ವೆಂಕಟರಾವ ಬಿ. ಏ. ಮುಂಬೈಯಲ್ಲಿ ನೌಕರಿ.
೬) ಶ್ರೀ ಪ್ರಲ್ಹಾದರಾವ ಬಿ. ಎ. ಅಗ್ರಿ. ಡಿ. ಅಮೇರಿಕನ್ ರಿಟರ್ನಡ.
೭) ಶ್ರೀ ರಾಘವೇಂದ್ರರಾವ ಎಸ್. ಟಿ. ಡಿಪಾರ್ಟಮೆಂಟ.
೮) ಶ್ರೀ ಗೋವಿಂದರಾವ ಎಸ್. ಟಿ. ಡಿಪಾರ್ಟಮೆಂಟ.
೯) ಶ್ರೀ ರಾವಜೀರಾವ ಸುಪರಿಂಟೆಂಡಂಟ ಕಾಟೇಜ ಇಂಡಸ್ಟ್ರೀಜ.
೧೦) ಶ್ರೀ ಬಂಡೋರಾವ ಬಿ. ಏ. ಕ್ಯಾನರಾ ಬ್ಯಾಂಕ ಧಾರವಾಡ,
೧೧) ಶ್ರೀ ಭೀಮರಾವ ಸಮಾಜ ಕಾರ್ಯಕರ್ತರು.
೧೨) ಶ್ರೀ ಪ್ರಲ್ಹಾದರಾವ ಎಮ್. ಎಸ್. ಸಿ. ಪಿ. ಎಚ್. ಡಿ. ಪ್ರೊ. ಅಗ್ರಿ. ಕಾಲೇಜ, ಹೆಬ್ಬಾಳ, (ಬೆಂಗಳೂರ).
೧೩) ಶ್ರೀ ವೆಂಕಟರಾವ ಬಿ. ಎಸ್. ಸಿ. ಕೆಮಿಕಲ್ ಫ್ಯಾಕ್ಟರಿ, ಬಾಂಬೇ,
೧೪) ಶ್ರೀ ಅಪ್ಪಾರಾವ ದೇಶಪಾಂಡೆ. ಸಾಮಾಜಿಕ ಕಾರ್ಯಕರ್ತರು.
೧೫) ಶ್ರೀ ಅನಂತರಾವ ದೇಶಪಾಂಡೆ, ಸಾಮಾಜಿಕ ಕಾರ್ಯಕರ್ತರು

**ಸೂಚನೆ**—ನನಗೆ ಗೊತ್ತಿದ್ದ ಮಟ್ಟಿಗೆ ಬರೆದಿದ್ದೇನೆ. ಯಾವದಾದರೂ ವ್ಯಕ್ತಿಯ ಪರಿಚಯ ಉಳಿದಿದ್ದರೆ ಸಹೃದಯಿಗಳು ಕ್ಷಮಿಸಬೇಕು.



## (೩) ಶ್ರೀ ಗುಂಡೇರಾವ ತಿರುಮಲರಾವ ಮುತಾಲಿಕದೇಸಾಯಿ ಧಾರವಾಡ, ಪತ್ನಿ ಶ್ರೀಮತಿ ಲಕ್ಷ್ಮೀಬಾಯಿ (ಹುಲ್ಲಂಬೀ ದೇಸಾಯಿ ಮನೆತನದವಳು)



ಶ್ರೀ ಗುಂಡೇರಾವ ಇವರು ಮಹಾಸ್ವಾಮಿಯ ಸಮಕಾಲೀನರು. ಇವರು ಮುನಸೀಫರಾಗಿ ಸರಕಾರೀ ನೌಕರಿಯನ್ನು ಮಾಡುತ್ತಿದ್ದರು. ನಿವೃತ್ತರಾದ

ಮೇಲೆ ಇವರನ್ನೊಂದು ವ್ಯಾಧಿಯು ಪೀಡಿಸಹತ್ತಿತು. ಯಾವ ಔಷಧೋಪಚಾರದಿಂದಲೂ ಬೇನೆಯು ವಾಸಿಯಾಗಲಿಲ್ಲ. ದಿನೇದಿನೇ ಕ್ಷೀಣವಾಗಹತ್ತಿದರು. ಅರೋಗ್ಯ ತೀರ ಚಿಂತಾಜನಕ ಪರಿಸ್ಥಿತಿಯನ್ನು ಮುಟ್ಟಿತು; ಇವರ ಧರ್ಮಪತ್ನಿಯಾದ ಶ್ರೀಮತೀ ಲಕ್ಷ್ಮೀಬಾಯಿ ಶ್ರೀ ಚಿದಂಬರ ಮಹಾಸ್ವಾಮಿಗಳನ್ನು ಅನನ್ಯ ಭಕ್ತಿಯಿಂದ ಸ್ಮರಿಸಹತ್ತಿದಳು. ಲಕ್ಷ್ಮೀಬಾಯಿಯ ತವರು ಮನೆಯವರೂ ಕೂಡ ಚಿದಂಬರ ಭಕ್ತರೇ ಇದ್ದು, ಆವರ ಮನೆತನವೂ ಕೂಡ ಅನುಗ್ರಹೀತವಾಗಿತ್ತು. ಈ ಲಕ್ಷ್ಮೀಬಾಯಿಯ ಆರ್ತ ಕೂಗನ್ನು ಕೇಳಿ, ದಯಾಘನರಾದ ಚಿದಂಬರಸ್ವಾಮಿಗಳು, ಇವರ ಸ್ವಪ್ನದಲ್ಲಿ ದರ್ಶನ ಕೊಟ್ಟು, “ತಾಯೀ ನೀನು ಏನೂ ಚಿಂತಿಸಬೇಡ; ನಿನ್ನ ಪತಿಯು ವ್ಯಾಧಿಯಿಂದ ಮುಕ್ತನಾಗುವನು. ಈ ಉಂಗುರವನ್ನು ದಿನಾಲೂ ಪೂಜಿಸಿ, ಅದರ ತೀರ್ಥವನ್ನು ನಿನ್ನ ಪತಿಗೆ ಕುಡಿಸು. ಅವನಿಗೆ ಆರೋಗ್ಯವು ಲಭಿಸಿ, ನಿನಗೆ ಎಲ್ಲ ರೀತಿಯಿಂದ ಕಲ್ಯಾಣವಾಗುವದು” ಎಂದು ಹೇಳಿ, ಒಂದು ಬಂಗಾರದ ಉಂಗುರ, ಉತ್ತತ್ತಿ ಮತ್ತು ಮಂತ್ರಾಕ್ಷತೆಯನ್ನು ಕೊಟ್ಟು ಮಾಯವಾದರು. ಬೆಳಿಗ್ಗೆ ಎದ್ದು ನೋಡುವಷ್ಟರಲ್ಲಿ, ಲಕ್ಷ್ಮೀಬಾಯಿಯ ಕೈಯಲ್ಲಿ ಉಂಗುರ, ಉತ್ತತ್ತಿ ಮತ್ತು ಮಂತ್ರಾಕ್ಷತೆಗಳು ಪ್ರತ್ಯಕ್ಷವಾಗಿ ಕಂಡವು. ಲಕ್ಷ್ಮೀಬಾಯಿ ಸಂತುಷ್ಟಳಾಗಿ, ವೃತ್ತಾಂತವನ್ನು ಪತಿಗೆ ನಿವೇದಿಸಿ, ದಿನಾಲೂ ಉಂಗುರದ ಪೂಜೆಯನ್ನು ಮಾಡಿ, ಅದರ ತೀರ್ಥವನ್ನು ತನ್ನ ಪತಿಗೆ ಕುಡಿಸಹತ್ತಿದಳು. ಕೆಲವೇ ದಿನಗಳಲ್ಲಿ ಗುಂಡೇರಾಯರ ವ್ಯಾಧಿಯು ಸಂಪೂರ್ಣ ಗುಣವಾಯಿತು. ಲಕ್ಷ್ಮೀದೇವಿಯು ತುಂಬ ಹರ್ಷಿತಳಾಗಿ, ಚಿದಂಬರ ನಾಮಸ್ಮರಣೆ ಮಾಡುತ್ತ, ಪುತ್ರ ಪೌತ್ರ ಧನಧಾನ್ಯಾದಿ ಸಮೃದ್ಧಿಯನ್ನು ಕಂಡು, ಕೊನೆಗೆ ಮುತ್ತೈದೆಯ ಸಾವನ್ನಪ್ಪಿದಳಂತೆ.

ಈ ಉಂಗುರದಲ್ಲಿ “ಶ್ರೀರಾಮ ಜಯರಾಮ ಜಯಜಯರಾಮ” ಎಂದು ಕೆತ್ತಲಾಗಿತ್ತಂತೆ. ಆಜಮಾಸು ಅರ್ಧ ತೊಲಿಯಲ್ಲಿ, ಕಮಲದ ಆಕಾರದ್ದು ಇತ್ತಂತೆ. ಬಹಳ ಸುಂದರವಾದದ್ದು. ಮುಂದೆ ಗುಂಡೇರಾಯರ ವಂಶಜರೂ ಕೂಡ ಇದನ್ನು ದೇವರಲ್ಲಿ ಇಟ್ಟು ಪೂಜಿಸಿ ಅದರ ತೀರ್ಥ ಪ್ರಾಶನ ಮಾಡುತ್ತಿದ್ದರಂತೆ. ಇವರ ಮರಿಮಕ್ಕಳಾದ ಪ್ರಲ್ಹಾದರಾವ ಎಂಬುವವರು, ಅದನ್ನು ತಮ್ಮ ಜನಿವಾರದಲ್ಲಿ ಕಟ್ಟಿಕೊಂಡು ನಿತ್ಯ ದರುಶನ ಪಡೆಯುತ್ತಿದ್ದರಂತೆ. ಅದು

ಒಂದು ದಿನ ಅಕಸ್ಮಾತ್ತಾಗಿ, ಜನಿವಾರದಿಂದ ಕಳಚಿ ಬಿದ್ದು ಎಲ್ಲಿಯೊ ಹೋಗಿ ಬಿಟ್ಟಿತು. ವೈಶ್ವದೇವ ಮಾಡುವ ಕಾಲಕ್ಕೆ ಜನಿವಾರದಲ್ಲಿದ್ದದ್ದನ್ನು ಪ್ರತ್ಯಕ್ಷ ನೋಡಿದ ಪ್ರಲ್ಹಾದರಾಯರು, ಊಟ ಮಾಡಿ, ಹೊಲಕ್ಕೆ ಹೋಗಿ ಬಂದು ನೋಡುವಷ್ಟರಲ್ಲಿ ಆ ಉಂಗುರ ಎಲ್ಲಿಯೋ ಬಿದ್ದು ಹೋಗಿತ್ತಂತೆ. ಮನೆಯಲ್ಲಿ, ಹೊಲದಲ್ಲಿ ಎಷ್ಟು ಹುಡುಕಿದರೂ ಸಿಗಲಿಲ್ಲ. ಈ ಉಂಗುರವನ್ನು ನೋಡಿದ ಅನೇಕ ಮಹನೀಯರು ಧಾರವಾಡ ಶುಕ್ರವಾರ ಪೇಟೆಯಲ್ಲಿ, ಹಾಗೂ ದೇಶಪಾಂಡೆ ಗಲ್ಲಿಯಲ್ಲಿ ಇರುವರು. ಈ ಉಂಗುರವು ಕಳೆದು ಕೇವಲ ೮-೧೦ ವರುಷಗಳಾದವು. ಈ ಉಂಗುರವನ್ನು ಇಲ್ಲಿಯ ದೇಶಪಾಂಡೆ, ಕಟ್ಟಿ, ಜೋಶಿ, ಲೋಣಕಡಿ, ದಂಡವತೀದೀಕ್ಷಿತ ಘೂಣೇದ, ಅನೇಕರು ಪ್ರತ್ಯಕ್ಷ ನೋಡಿದ್ದಾರೆ. ಇದರಲ್ಲಿಯ ಕೆತ್ತನೆಯ ಕೆಲಸ ಬಹು ಸುಂದರವಾಗಿತ್ತಂತೆ. ಸಾಮಾನ್ಯ ಅಕ್ಕಸಾಲಿಗನು ಅಂತಹ ದಿವ್ಯ ಉಂಗುರವನ್ನು ಮಾಡಲಾರ ಎಂದು ಮುತಾಲಿಕದೇಸಾಯಿಯವರ ಮನೆಯಲ್ಲಿದ್ದ ಅಕ್ಕಸಾಲಿಗನ ಅಭಿಪ್ರಾಯ. ಇದರ ತೂಕ ಅಜಮಾಸು ಅರ್ಧ ತೊಲಿಯಷ್ಟು ಇತ್ತಂತೆ. ಜ್ಯೋತಿಷಿಗಳು ಈ ಉಂಗುರ ಕಳೆದು ಹೋಗಿ ಮತ್ತೆ ಸಿಗುವದೆಂದು ಹೇಳಿದ್ದಾರಂತೆ. ಈ ಎಲ್ಲ ಮಾಹಿತಿಯನ್ನು ನನಗೆ, ಮೂಲ ಪುರುಷರ ವಂಶಜರಾದ, ೧) ಶ್ರೀ ಬಳವಂತರಾವ, ೨) ಶ್ರೀ ವಾಮನರಾವ ಇವರು ನನ್ನ ಮತ್ತು ಶ್ರೀ ಅಪ್ಪಾರಾವ ದೇಶಪಾಂಡೆ ಇವರ ಸಮಕ್ಷಮ, ದಿ. ೧೫-೬-೭೭ ಸೋಮವಾರ ೧೨-೩೦ ಕ್ಕೆ (ಮಧ್ಯಾಹ್ನ) ಹೇಳಿದ್ದಾರೆ. ಅವರು ಆದರದಿಂದ ನನ್ನನ್ನು ಬರಮಾಡಿಕೊಂಡು, ಮಾಹಿತಿಯನ್ನು ಕೊಟ್ಟದ್ದಕ್ಕೆ ಅವರಿಗೆ ನನ್ನ ಕೃತಜ್ಞತೆ ಸಲ್ಲಿಸುತ್ತೇನೆ. ಅವರ ವಂಶಾವಳಿಯನ್ನೂ ಕೂಡ ಕೊಡಲಾಗಿದೆ.

## ಸಧ್ಯದ ವಿಳಾಸ

ಶ್ರೀ ಬಳವಂತರಾವ ಹಣಮಂತರಾವ ಮು. ದೇಸಾಯಿ.
ವೆಂಕಟೇಶದೇವರ ಗುಡಿ ಓಣಿ, ಶುಕ್ರವಾರ ಪೇಠ, ಧಾರವಾಡ,

## ವಂಶಾವಳಿ

ಶ್ರೀ ಗುಂಡೇರಾವ ತಿರುಮಲರಾವ ಮು. ದೇಸಾಯಿ (ಮುನಸೀಫ ಧಾರವಾಡ) ಇವರ ಧರ್ಮಪತ್ನಿ, ಲಕ್ಷ್ಮೀಬಾಯಿ (ತವರುಮನೆ ಹುಬ್ಬಳ್ಳಿ ದೇಸಾಯಿ).

ತಿರುಮಲರಾವ. ಪತ್ನಿ-ಲಕ್ಷ್ಮೀಬಾಯಿ.
|
ನಾರಾಯಣರಾವ (ಚಿಕ್ಕೋಡಿಯಲ್ಲಿ ಮಾಮಲೇದಾರರಿದ್ದರು.)
| ಪತ್ನೀ ರುಕ್ಮಿಣೀಬಾಯಿ

(ಅನುಷ್ಠಾನಿಕ) ಬಿಂದೂರಾವ | ಹಣಮಂತರಾವ (ಇಂದ್ರಾಬಾಯಿ)

ಪ್ರಲ್ಹಾದರಾವ
(೪೦. ಜ.ದಲ್ಲಿ ಧರಿಸಿ ಕಳೆದುಕೊಂಡವರು)

ಬಳವಂತರಾವ ವಾಮನರಾವ ನಾರಾಯಣರಾವ ವಿಠ್ಠಲರಾವ

ಅನಿಲಕುಮಾರ ಬಿಂದುಮಾಧವ ಬಿ. ಎಸ್. ಸಿ. ಹಣಮಂತ ಆನಂದ ರವಿ
(ಮುಂಬಯಿ ಕ. ಬ್ಯಾಂಕ ಗದಗ)



## ಶ್ರೀ ತಾರಕೇಶ್ವರ ಗುಡಿಯಲ್ಲಿ ಲಿಂಗ ಸ್ಥಾಪನೆ.
## (೪) ವೇದಮೂರ್ತಿ ಗೋವಿಂದಶಾಸ್ತ್ರಿ ಕಟ್ಟಿ (ಪುರಾಣಿಕ) ಮಹಾಸ್ವಾಮಿಯ ಸಮಕಾಲೀನರು

ಶಕೆ ೧೭೩೦, ವಿಭವನಾಮ ಸಂವತ್ಸರ, ಶ್ರಾವಣ ವದ್ಯ ಷಷ್ಠಿಯ ದಿನ (ಇ. ೧೮೦೮) ಶ್ರೀ ಚಿದಂಬರ ಮಹಾಸ್ವಾಮಿಗಳ ನೇತೃತ್ತ್ವದಲ್ಲಿ ಶ್ರೀ ತಾರ-ಕೇಶ್ವರನ ಪ್ರತಿಷ್ಠಾಪನೆಯಾಯಿತು. ಕಾಶಿಯಿಂದ ತಂದ ಈ ಲಿಂಗವನ್ನು ಮಹಾಸ್ವಾಮಿಗಳು ಶ್ರೀ ಗೋವಿಂದಶಾಸ್ತ್ರಿಗಳಿಗೆ ಕೊಟ್ಟು ವಿಧಾನೋಕ್ತವಾಗಿ ಪ್ರತಿಷ್ಠಾಪನೆಯನ್ನು ಮಾಡಿಸಿದರು. ಮೂಲ ಪುರುಷರ ನೊಮ್ಮಕ್ಕಳಾದ ವೇದವಿಶಾರದ, ಶ್ರೀ ಗೋವಿಂದಶಾಸ್ತ್ರಿಗಳು ತಮ್ಮ ಮನೆತನದ ಮುಖ್ಯ ಘಟನೆಗಳನ್ನು ಚಿಕ್ಕ ಡಾಯರಿಯಲ್ಲಿ ಬರೆದಿಟ್ಟಿದ್ದಾರೆ. ಅದರಲ್ಲಿ ತಾರಕೇಶ್ವರ ಸ್ಥಾಪನೆಯ ಉಲ್ಲೇಖವಿದೆ. ಈ ಚಿಕ್ಕ ಪುಸ್ತಕ (ಡಾಯರಿ) ಈಗ ಇವರ ಮೊಮ್ಮಕ್ಕಳಾದ ರಾಮಚಂದ್ರ ಶಾಸ್ತ್ರಿಗಳ ಕಡೆಗೆ ಇದೆ. ಶ್ರೀ ಗೌರೀಪುರ

ಪೀಠದ ಸಂಸ್ಥಾಪಕರಾದ ಶ್ರೀ ಸಚ್ಚಿದಾನಂದ ಸ್ವಾಮಿಗಳು, ಶ್ರೀ ಗೋವಿಂದ ಶಾಸ್ತ್ರಿಗಳ (ಮೂಲ ಪುರುಷರ ಮೊಮ್ಮಕ್ಕಳ) ಹಯಾತಿಯಲ್ಲಿ, ಈ ಗುಡಿಯಲ್ಲಿ ಬಂದು ವಾಸ ಮಾಡಿದ್ದರು. ಗರ್ಭಗುಡಿಯನ್ನು ಮೂಲ ಪುರುಷ ಗೋವಿಂದ ಶಾಸ್ತ್ರಿಗಳೇ ಕಟ್ಟಿಸಿದ್ದಾರೆ. ಆನಂತರ ಅವರ ಮಕ್ಕಳಾದ ವೇದವಿದ್ವಾಂಸ ಮಾರ್ತಂಡಶಾಸ್ತ್ರಿಗಳ ಕಾಲದಲ್ಲಿ, ತಾರಕೇಶ್ವರ ಮಂದಿರವು, ವಿಸ್ತಾರವಾಗಿ ಕಟ್ಟಲ್ಪಟ್ಟಿತು. ನಿತ್ಯ ಪೂಜೆ, ಸಧ್ಯ ಮೂಲ ಪುರುಷರಿಂದ ೫ನೆಯ ತಲೆಯವ-ರಾದ, ಶ್ರೀ ರಾಮಚಂದ್ರ ಶಾಸ್ತ್ರಿಗಳೇ ಮಾಡುತ್ತಾರೆ. ಇವರೂ ಕೂಡ ತಮ್ಮ ಮನೆತನದ ಸಾಂಪ್ರದಾಯದಂತೆ, **ಶ್ರೀಉಪಾಸಕರು** ಇದ್ದು ಮಹಾಸ್ವಾಮಿ-ಗಳು ಕೊಟ್ಟ ಸ್ಫಟಿಕದ ಶ್ರೀಚಕ್ರವು ಇವರ ಮನೆಯಲ್ಲಿ ಇದೆ. ಶೃಂಗೇರಿ ಪೀಠಸ್ಥರು ಬಂದಾಗ್ಗೆ, ಮೊದಲ ಪಾದ ಪೂಜೆಯನ್ನು ಮಾಡುವ ಅಧಿಕಾರವು ಇವರ ಮನೆತನಕ್ಕೆ ಪರಂಪರೆಯಿಂದ ಬಂದಿದೆ. ಕಟ್ಟಿ, ಮಠ, ಜೋಯಿಸ, ಪುರೋಹಿತ ಹೀಗೆ ನಾಲ್ಕು ಮನೆತನಗಳಿಗೂ ಶೃಂಗೇರಿ ಪೀಠಸ್ಥರಿಗೆ ಪ್ರಥಮ ಪಾದ ಪೂಜೆ ಸಲ್ಲಿಸುವ ಅಧಿಕಾರ ಇಂದಿಗೂ ಇದೆ. ಶ್ರೀವ್ಯಾಸ ಪೂಜೆಯ ಅಧಿಕಾರ, ದೇಶಪಾಂಡೆ ಮನೆತನಕ್ಕೆ ಇದೆ. ಈ ತಾರಕೇಶ್ವರ ಮಂದಿರದಲ್ಲಿ ಶಿವರಾತ್ರಿ, ಶ್ರಾವಣಮಾಸಗಳಲ್ಲಿ ಪೂಜೆ, ಪಾರಾಯಣ, ಅಭಿಷೇಕಾದಿಗಳು ಮೊದಲು ನಡೆಯುತ್ತಿದ್ದವು. ಈಗಲೂ ಯಥಾಶಕ್ತಿ ಮಾಡುತ್ತಿದ್ದಾರೆ. ಇದೇ ಮಂದಿರದಲ್ಲಿ, ಶ್ರೀ ಚಿದಂಬರ ಮಹಾಸ್ವಾಮಿಗಳ ವಂಶಜರಾದ, ಶ್ರೀ ಪರಮೇಶ್ವರ ದೀಕ್ಷಿತ ಗುರ್ಲಹೊಸೂರ ಇವರ ಮಕ್ಕಳು ತಪಸ್ವಿ ಶ್ರೀ ಬಾಪೂ ದೀಕ್ಷಿತರು ನಿರಶನದಿಂದ ಇ. ಸ. ೧೯೫೬ ಶ್ರಾವಣಮಾಸದಲ್ಲಿ ಏಕಾಸನದ ಮೇಲೆ ೭ ದಿನ, ಚಿದಂಬರ ನಾಮ ಸಪ್ತಾಹವನ್ನು ಮಾಡಿದರು. ತಾರಕೇಶ್ವರ ಲಿಂಗವು ಬಹು ರಮ್ಯವಿದ್ದು, ಜಲಹರಿ ವಗೈರೆ ಶೆಲ್ಲೀಕೇರಿಯ ಕೃಷ್ಣಶಿಲೆಯಿಂದ ಮಾಡಿಸಿದ್ದು ಇದೆ. ನಂದಿಯು ಚಿಕ್ಕ ವಿಗ್ರಹವೂ ಸುಂದರವಾಗಿದೆ. ಈ ಗುಡಿಯ ಬದಿಯಲ್ಲಿ ಇದ್ದ ಬಾಂವಿಯು ಚಿದಂಬರ ಸ್ವಾಮಿಗಳ ಆಜ್ಞೆಯಂತೆ, ಅವರು ನಿರ್ದೇಶಿಸಿದ ಸ್ಥಾನದಲ್ಲಿಯೇ ತೋಡಿಸಿದ್ದು ಇರುತ್ತದೆ. ಈ ಮನೆತನದಲ್ಲಿ ಅನೇಕ ಹಸ್ತಲಿಖಿತ ವೈದಿಕ ಗ್ರಂಥಗಳು ಇರುತ್ತವೆ. ಶ್ರೀ-ಚಕ್ರ-ಪೂಜೆ ನಿತ್ಯ ನಡೆಯುತ್ತಿದೆ. ಇನ್ನೂ ಹೆಚ್ಚಿನ ಮಾಹಿತಿಯನ್ನು ಅಕ್ಕಪಕ್ಕದಲ್ಲಿರುವ, ದೇಶಪಾಂಡೆ, ಜೋಯಿಸ, ಮಠ, ದಂಡವತೀ ಮನೆತನದವರು ಹೇಳಿದರು.

ಸ್ಥಳಾಭಾವದ ಮೂಲಕ ಎಲ್ಲವನ್ನು ಕೊಡಲು ಸಾಧ್ಯವಾಗಿಲ್ಲ. ಸಧ್ಯ ದೇವಾ-ಲಯದ ಮಾಲಕರೂ ಹಾಗೂ ಅರ್ಚಕರಾದ ಶ್ರೀ ರಾಮಚಂದ್ರ ಶಾಸ್ತ್ರಿಗಳು ನನ್ನನ್ನು ಬರಮಾಡಿಕೊಂಡು, ಮಾಹಿತಿಯನ್ನು ಕೊಟ್ಟು, ಶ್ರೀಚಕ್ರದ ದರ್ಶನ ವನ್ನು ಮಾಡಿಸಿ ನನ್ನನ್ನು ಉಪಕೃತರನ್ನಾಗಿ ಮಾಡಿದ್ದಾರೆ. ಈ ಮಾಹಿತಿ ಯನ್ನು, ನಾನು ದಿನಾಂಕ ೧೪-೬-೭೬ ರಂದು ತಾರಕೇಶ್ವರ ಗುಡಿಯಲ್ಲಿಯೇ ಶ್ರೀ ರಾಮಚಂದ ಶಾಸ್ತ್ರಿಗಳ ಹೇಳಿಕೆಯಂತೆಯೇ ಬರೆದುಕೊಂಡಿದ್ದೇನೆ. ಶ್ರೀ ಅಪ್ಪಾರಾವ ದೇಶಪಾಂಡೆ, ಶ್ರೀಗುರುನಾಥ ದಂಡವತೀ, ಮೊದಲಾದವರೂ ನನ್ನ ಸಂಗಡ ಇದ್ದರು.

**ಸಧ್ಯದ ವಿಳಾಸ**

ಶ್ರೀ ರಾಮಚಂದ್ರ ಶಾಸ್ತ್ರಿಗಳು, ತಾರಕೇಶ್ವರ ಗುಡಿ
ಶುಕ್ರವಾರ ಪೇಠ, ಧಾರವಾಡ.

**ತಾರಕೇಶ್ವರ ದೇವಾಲಯದ ಮಾಲಕರು ಮತ್ತು ಅರ್ಚಕರು**
**(ವಂಶಾವಳಿ)**

ಶ್ರೀ ಗೋವಿಂದ ಶಾಸ್ತ್ರಿಗಳು ಕಟ್ಟಿ (ಪುರಾಣಿಕ)
| ಮಹಾಸ್ವಾಮಿಗಳ ಸಮಕಾಲೀನರು
ಮಾರ್ತಂಡಶಾಸ್ತ್ರೀ (ವೇದವಿದ್ವಾನ್)
|
(ಶಾಸ್ತ್ರವಿಶಾರದರು) ಗೋವಿಂದಶಾಸ್ತ್ರಿಗಳು (ಸಂ. ಪುರುಷೋತ್ತಮಾನಂದ)
|
ರಾಮಚಂದ್ರಶಾಸ್ತ್ರಿಗಳು (೫೮ ವರುಷ)
|
ಗೋವಿಂದ ಬಿ. ಎ. | ಗಣೇಶ ಕ. ಯುನಿ. | ಭಾಸ್ಕರ

**(೫) ಶ್ರೀ ಅಣ್ಣಂಭಟ್ಟ ಚಿಕ್ಕೋಡಿ (ಜಿ. ಬೆಳಗಾಂವ)**

ಶ್ರೀ ಚಿದಂಬರ ಮಹಾಸ್ವಾಮಿಗಳು ಶಿರಹಟ್ಟಿಯಲ್ಲಿ ವಾಸ ಮಾಡು ವಾಗ್ಗೆ, ಶ್ರೀ ಅಣ್ಣಂಭಟ್ಟ ಚಿಕ್ಕೋಡಿ ಅವರು, ತಮ್ಮ ಹೆಂಡತಿಯೊಡನೆ ಜಗ-

ಳಾಡಿ, ಅವಳನ್ನು ಹೀಯಾಳಿಸಿ, ಶ್ರೀ ಚಿದಂಬರ ಮಹಾಸ್ವಾಮಿಗಳ ಕಡೆಗೆ ಬಂದರು. ಅನೇಕ ದಿನಗಳು ಕಳೆದರೂ ಅಣ್ಣಂಭಟ್ಟರು ಮರಳಿ ಚಿಕ್ಕೋಡಿಗೆ ಬಾರದ್ದರಿಂದ, ಅವರ ಧರ್ಮಪತ್ನಿಯು ತನ್ನ ಪತಿಯನ್ನು ಹುಡುಕುತ್ತ, ಶ್ರೀ ಚಿದಂಬರ ಮಹಾಸ್ವಾಮಿಗಳ ಕಡೆಗೆ ಬಂದಳು. ಅಲ್ಲಿ ತನ್ನ ಪತಿಯು ಇದ್ದದ್ದ ರಿಂದ ಸಂತುಷ್ಟಳಾಗಿ, ಮಗನನ್ನು ಪತಿಯ ಕಡೆಗೆ ಒಪ್ಪಿಸಲು ಹೋದಳು. ಆಗ ಅಣ್ಣಂಭಟ್ಟರು ಸಿಟ್ಟಿನಿಂದ ಪತ್ನಿಯನ್ನು ಹೊಡೆದು, ಬಡೆದು ಬೈಯ ಲಾರಂಭಿಸಿದರು. ಇದನ್ನು ಕಂಡು, ಶ್ರೀ ಚಿಬಂಬರ ಮಹಾಸ್ವಾಮಿಗಳು ಅಣ್ಣಂಭಟ್ಟರನ್ನು ತಡೆದು, "ಜೋಯಿಸರೇ, ಅಗ್ನಿ, ಇಂದ್ರ, ವರುಣ, ಸೂರ್ಯ ಸಾಕ್ಷಿಯಾಗಿ ಒಂದು ಸಲ ಸ್ವೀಕಾರ ಮಾಡಿದ ಪತ್ನಿಯನ್ನು ಈ ರೀತಿ ತೆಗಳುವದು ಸರಿಯಲ್ಲ, "ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ" ಎಂದು ಪತ್ನಿಯ ಪಾಣಿಗ್ರಹಣದ ಸಮಯದಲ್ಲಿ ನೀವೇ ವಚನ ಕೊಟ್ಟಿರುವದಿಲ್ಲವೇ ? ಅವಳನ್ನು ಸರ್ವಥಾ ಹೊಡೆಯಬೇಡಿರಿ" ಎನ್ನಲು ಅಣ್ಣಂಭಟ್ಟರು ಕಡು ಕೋಪದಿಂದ, "ದೀಕ್ಷಿತರೇ ನೀವು ಸ್ತ್ರೀಪಕ್ಷ ಪಾತಿಗಳು; ನಾವು ನಿಮ್ಮ ಆಶ್ರಯದಲ್ಲಿ ಇನ್ನು ಮುಂದೆ ಇರುವದಿಲ್ಲ" ಎಂದು ಹೇಳಿ, ಹೆಂಡತಿಯನ್ನು ಬಿಟ್ಟು ಊರಿಗೆ ಬಂದರು. ಹೆಂಡತಿಯು ದೀಕ್ಷಿತರ ಲ್ಲಿಯೇ ಸೇವೆಯನ್ನು ಮಾಡಿಕೊಂಡು ಕೆಲವು ದಿನ ಇದ್ದಳು. ಅತ್ತ ಅಣ್ಣಂಭಟ್ಟ ರಿಗೆ ಹುಣ್ಣುಗಳಾಗಿ ಸಹಿಸಲಾರದಷ್ಟು ವೇದನೆ ಪ್ರಾರಂಭವಾಯಿತು. ಮೈಯಲ್ಲಿ ದಾಹ ಉಂಟಾಯಿತು. ದಾರಿಗಾಣದೆ ದೀಕ್ಷಿತರ ಬಳಿಗೆ ಧಾವಿಸಿ ಬಂದರು. "ಸ್ವಾಮಿಗಳೇ ನನ್ನನ್ನು ಈ ವೇದನೆಯಿಂದ ಮುಕ್ತ ಮಾಡಿರಿ; ನಾನು ಸಹಿಸ ಲಾರೆ" ಎಂದು ಬೇಡಿಕೊಂಡರು. ಆಗ ದೀಕ್ಷಿತರು ಹೇಳಿದರು. "ಜೋಯಿ-ಸರೇ ಇದು ನೀವು ಧರ್ಮಪತ್ನಿಯನ್ನು ಬಿಟ್ಟಿದ್ದರ ಫಲವು; ನೀವು ಪತ್ನಿ ಯನ್ನು ಸ್ವೀಕಾರ ಮಾಡುವವರೆಗೂ ಈ ದಾಹವು ನಿಮ್ಮನ್ನು ಬಿಡುವದಿಲ್ಲ" ದೀಕ್ಷಿತರ ಮಾತನ್ನು ಕೇಳಿ, ತಾನು ಮಾಡಿದ ಅಪರಾಧವನ್ನು ಒಪ್ಪಿಕೊಂಡು, ದೀಕ್ಷಿತರ ಕ್ಷಮೆಯನ್ನು ಯಾಚಿಸಿ, ತನ್ನ ಹೆಂಡತಿಯನ್ನು ಕರೆದುಕೊಂಡು ಚಿಕ್ಕೋಡಿಗೆ ಬಂದರು. ಮುಂದೆ ಅವರ ಹುಣ್ಣುಗಳೆಲ್ಲ ಮಾಯ್ದು, ನಿರೋಗಿ ಯಾಗಿ ಸುಖದಿಂದ ಕಾಲಹರಣ ಮಾಡಹತ್ತಿದರು. ಸಧ್ಯ ಅವರ ವಂಶಜರಾದ ಶ್ರೀ ಅನಂತರಾವ ಚಿಕ್ಕೋಡಿ ಎಂಬುವವರು ಬೆಳಗಾಂವಿಯಲ್ಲಿ ಇರುತ್ತಾರೆ.

ಉತ್ತಮ ಲೇಖಕರೂ, ವಾಗ್ಮಿಗಳೂ. ದೇಶಸೇವಕರೂ ಆಗಿದ್ದು, ಶ್ರೀ ಚಿದಂಬರ ಸ್ವಾಮಿಗಳಲ್ಲಿ ಅಚಲವಾದ ಶ್ರದ್ಧೆ ಭಕ್ತಿಯುಳ್ಳವರಾಗಿದ್ದಾರೆ. ಆವರೇ ನನಗೆ ತಮ್ಮ ವಂಶಾವಳಿಯನ್ನು ಬರೆದು ತಿಳಿಸಿದ್ದಾರೆ. ಅದನ್ನು ಕೆಳಗೆ ಕೊಡಲಾಗಿದೆ.

(ಚಿಕ್ಕೋಡಿಯ ಜೋಯಿಸರು) ಶ್ರೀ ಅಣ್ಣಂಭಟ್ಟರು
(ಸ್ವಾಮಿಗಳ ಸಮಕಾಲೀನರು)




**(೬) ಶ್ರೀ ನೀಲಕಂಠ ಮಹಾದೇವ ಉಣಕಲ್ಲಕರ (ಧಾರವಾಡ)**

ಶ್ರೀ ನೀಲಕಂಠರಾವ ಉಣಕಲ್ಲಕರ ಇವರು ಚಿದಂಬರ ಮಹಾಸ್ವಾಮಿಗಳ ಸಮಕಾಲೀನರು ಹಾಗೂ ಅವರಿಂದ ಅನುಗೃಹೀತರು. ಇವರ ಪತ್ನಿಗೆ 'ಸಲ್ಲು' ಎಂಬುವ ರೋಗವಿತ್ತು. ಇದೊಂದು ವಿಚಿತ್ರ ರೋಗ. ಗರ್ಭವು ೧೦ ತಿಂಗಳುಗಳವರೆಗೆ ಬೆಳೆದು ಮತ್ತೆ ಕರಗಿ ಹೋಗುವ ಒಂದು ಅವಸ್ಥೆಗೆ "ಸಲ್ಲು" ಎನ್ನುತ್ತಾರೆ. ಇಂತಹ ರೋಗಪೀಡಿತಳಾದ ನೀಲಕಂಠರಾಯರ ಪತ್ನಿಯು, ದೀಕ್ಷಿತರ ಕೀರ್ತಿಯನ್ನು ಕೇಳಿ, ತನ್ನ ಪತಿ ಹಾಗೂ ಪರಿವಾರ ಸಮೇತಳಾಗಿ, ಚಿದಂಬರ ಮಹಿಮೆಯನ್ನು ಕೊಂಡಾಡುತ್ತ, ಎತ್ತಿನ ಮೇಲೆ ಪ್ರವಾಸ ಕೈಕೊಂಡು ಮುರಗೋಡಕ್ಕೆ ಬಂದು ಸೇವೆ ಮಾಡಹತ್ತಿದಳು. ದೀಕ್ಷಿತರು ಮೊದಲೇ, "ಇಂದು ಉಣಕಲ್ಲದಿಂದ ಭಕ್ತರನೇಕರು ಬರುವರು. ಅವರಿಗೆ ಸೀದಾ ವಗೈರೆ ಕೊಟ್ಟು ಅವರ ಆದರಾತಿಥ್ಯವನ್ನು ಚನ್ನಾಗಿ ಮಾಡಿರಿ" ಎಂದು ತಮ್ಮ ಶಿಷ್ಯರಿಗೆ ಹೇಳಿಟ್ಟಿದ್ದರು. ಯಾತ್ರಿಕರ ದಾಟಿಯಲ್ಲಿ

ಅವಳಿಗೆ ಚಿದಂಬರ ದರ್ಶನವಾಗುವದು ಕಠಿಣವಾಯಿತು. ದೀಕ್ಷಿತರೂ ಕೂಡ ಇವಳು ಬಂದ ಕಾರಣವನ್ನೂ ಕೇಳಲಿಲ್ಲ. ಆದರಾತಿಥ್ಯ ಮಾತ್ರ ಸರಿಯಾಗಿ ನಡೆದಿತ್ತು. ಕೊನೆಗೆ ನೀಲಕಂಠರಾಯರ ಪತ್ನಿಯು ಒಂದು ದಿನ ಸಭೆಯಲ್ಲಿಯೇ ಧೈರ್ಯದಿಂದ ಮಹಾಸ್ವಾಮಿಯ ಹತ್ತಿರ ಹೋಗಿ "ಸ್ವಾಮೀ ನಾನು ಊರಿಗೆ ಹೋಗುತ್ತೇನೆ" ಎಂದಳು, "ಹೋಗಿ ಬಾರಮ್ಮಾ" ಎಂದು ದೀಕ್ಷಿತರು ಉತ್ತರ ಕೊಟ್ಟ ಕೂಡಲೇ, ಅವಳ ಕಣ್ಣೊಳಗಿಂದ ಒಂದೇ ಸವನೆ ನೀರು ಹರಿಯಲು ಪ್ರಾರಂಭವಾಯಿತು. ಬಿಕ್ಕಿ, ಬಿಕ್ಕಿ ಅಳಹತ್ತಿದಳು. ಆಗ ದೀಕ್ಷಿತರು, ಅರಿಷಣ, ಕುಂಕುಮ ಹಚ್ಚಿದ ಒಂದು ಕಾಯಿ ಹಾಗೂ ಮಂತ್ರಾಕ್ಷತೆಗಳನ್ನು ಒಂದು ಪಂಜೆಯಲ್ಲಿ ಕಟ್ಟಿ, ಆ ಗಂಟನ್ನು ಇನ್ನೊಂದು ಕೆಂಪು ಅರಿವೆಯಲ್ಲಿ (ತಾಪ್ತೀ ಎಂದು ಮರಾಠಿಯಲ್ಲಿ ಹೆಸರು) ಕಟ್ಟಿ, ಅವಳ ಉಡಿಯಲ್ಲಿ ಹಾಕಿದರಂತೆ. ಆದರೆ ಏನೂ ಆಶೀರ್ವಾದ ಮಾಡಲಿಲ್ಲವಂತೆ. ಮತ್ತೆ ಅವಳಿಗೆ ಅಳುವು ಬಂದು, ದೀಕ್ಷಿತರಿಗೆ ನಮಸ್ಕಾರ ಮಾಡಿ, ಪರಿವಾರ ಸಮೇತಳಾಗಿ ತನ್ನ ಊರಿಗೆ ಬಂದಳು. ದೀಕ್ಷಿತರು ಕೊಟ್ಟ ಕಾಯಿಯನ್ನು ದಿನಾಲೂ ಭಕ್ತಿಯಿಂದ ಪೂಜಿಸುತ್ತಿದ್ದಳು. ಮುಂದೆ ಕೆಲ ದಿನಗಳ ನಂತರ ಅವಳು ಗರ್ಭಿಣಿಯಾಗಿ ೯ ತಿಂಗಳಾದ ನಂತರ ಒಂದು ಸುಂದರ ಗಂಡು ಕೂಸಿಗೆ ಜನ್ಮವಿತ್ತಳು. ಮಕ್ಕಳು, ಮೊಮ್ಮಕ್ಕಳು, ಧನ, ಧಾನ್ಯ ಪಡೆದು, ಚಿದಂಬರ ನಾಮ ಜಪಿಸುತ್ತ ಪರಂಧಾಮವನ್ನೈದಳು. ಅವಳ ವಂಶಜರು ಈಗಲೂ ಧಾರವಾಡದಲ್ಲಿ ಮನಕಿಲ್ಲಾ ಓಣಿಯಲ್ಲಿ, ಶ್ರೀ ದತ್ತೋಪಂತ ಮಾಮಲೇದಾರ ಉಣಕಲ್‌ಕರ ವಾಡೆಯಲ್ಲಿ ಇರುವರು. ಅವರ ವಂಶಾವಳಿಯನ್ನು ಕೊಟ್ಟಿದ್ದೇನೆ. ಇದೆಲ್ಲ ಮಾಹಿತಿಯನ್ನು, ಅವರ ವಂಶಜರಾದ ಶ್ರೀ ಹಣಮಂತರಾವ ಉಣಕಲ್ಲಕರ ಅವರು ಕೊಟ್ಟರು. ಇವರು ನಿಸ್ಸೀಮ ದತ್ತ ಭಕ್ತರಿದ್ದು, ಚಿದಂಬರ-ದತ್ತರಲ್ಲಿ ಏಕರೂಪತೆಯನ್ನು ಕಾಣುತ್ತಾರೆ. ಎಷ್ಟೋ ಸಲ ಚಿದಂಬರ ಚರಿತ್ರ ಪಾರಾಯಣ ಮಾಡಿದ್ದಾರೆ. ಇವರ ಮನೆಯ ಹಿತ್ತಲದಲ್ಲಿ ಚಿಕ್ಕದೊಂದು ದತ್ತ ಮಂದಿರವಿದೆ. ನಿತ್ಯ ರುದ್ರಾಭಿಷೇಕ ನಡೆಯುತ್ತದೆ.

ಶ್ರೀಮಚ್ಚರಿತ್ರದ ಮೇಲೆ ಇವರದು ಬಹಳ ಶ್ರದ್ಧೆ. ವಿದ್ವಾಂಸರು; ಅದನ್ನು ನನಗೆ ಸಂಪೂರ್ಣ (ನಿರ್ಯಾಣದವರೆಗೆ ಮಾತ್ರ) ಓದಿ ತೋರಿಸಿ, ಅದರಲ್ಲಿಯ ವಿಷಯಗಳ ಅನುಕ್ರಮಣಿಕೆಯನ್ನು ತೆಗೆಯಲು ನನಗೆ ತುಂಬ

ಸಹಾಯ ಮಾಡಿದರು. ಅಲ್ಲದೇ ತಮ್ಮ ಶಿಷ್ಯಳಾದ ಶ್ರೀಮತೀ ಯಾರ್ದಿಯವರಿಂದ ಶ್ರೀಮಚ್ಚರಿತ್ರದ ಸಂಪೂರ್ಣ ನಕಲು ಮಾಡಿಸಿ ಕೊಟ್ಟರು. ನಾನು ಅವರ ಉಪಕಾರ ಸ್ಮರಿಸಲೇ ಬೇಕು. ಚಿದಂಬರ ವಾಙ್ಮಯದಲ್ಲಿ ಅವರು ಪರಿಣತರಿದ್ದು ಅವರಿಂದ ಅನೇಕ ಮಾಹಿತಿಯನ್ನು ದೊರಕಿಸಿದ್ದೇನೆ. ಅವರಿಗೆ ಹಾಗೂ ಅವರ ಕುಟುಂಬದವರಿಗೆ ಚಿದಂಬರನು ಕಲ್ಯಾಣ ಮಾಡಲಿ. ಶುಭ ಮಂಗಲಂ.

ಶ್ರೀ ನೀಲಕಂಠ ಮಹಾದೇವ ಉಣಕಲ್ಲಕರ

|

ದತ್ತಾತ್ರಯ

|

ವೆಂಕಟರಾವ ಪರಶುರಾಮ ನಾರಾಯಣ

ಪರಶುರಾಮ → ಕೃಷ್ಣಾಜೀ ಭಿಕೂ

ನಾರಾಯಣ → ಹಣಮಂತರಾವ ಶಂಕರ ದತ್ತಾತ್ರಯ ವಿಷ್ಣು

(ಇವರೇ ಮಾಹಿತಿ ಕೊಟ್ಟವರು) ಹಣಮಂತರಾವ ಶಂಕರ ದತ್ತಾತ್ರಯ ವಿಷ್ಣು



## "ಕಡೇಲ" ರೇಶಿಮೆಯ ಸೀರೆ

## ( ) ಶ್ರೀ ಚಿಂತೋರಾವ ದೇಶಪಾಂಡೆ ಮಜಗಾಂವ (ಬೆಳಗಾಂವಿ)



ವಂಶಾವಳಿ

ಚಿಂತೋರಾವ–ರಾಮಾಜೀ–ಗಣಪತರಾವ—

|

ಹಣಮಂತರಾವ

|

ಮಲ್ಹಾರರಾವ ಕೃಷ್ಣರಾವ ರಂಗರಾವ

ಮೂಲ ಪುರುಷರಾದ ಶ್ರೀ ಚಿಂತೋರಾವ ದೇಶಪಾಂಡೆ ಇವರ ಕಾಲದಲ್ಲಿ ಮಹಾಸ್ವಾಮಿಗಳು ಒಂದು ರೇಶಿಮೆಯ ಅಂಚಿನ ಸೀರೆಯನ್ನು "ಇತ್ಲೇಶ" ಕೊಟ್ಟಿದ್ದಾರೆ. ನೂತನ ಸೊಸೆಯ ಗೃಹಪ್ರವೇಶ (ಮನೆ ತುಂಬಿಸಿಕೊಳ್ಳುವ) ಕಾಲಕ್ಕೆ ಈ ಸೀರೆಯನ್ನು ಅವಳಿಗೆ ಉಡಿಸುತ್ತಾರೆ. ಗೃಹಪ್ರವೇಶದ ನಂತರ ಆ ಸೀರೆಯನ್ನು ಮತ್ತೆ ಮಡಿಚಿ ಪೆಟ್ಟಿಗೆಯಲ್ಲಿ ಇಡುತ್ತಾರೆ. ಇದರಿಂದ ಸೊಸೆಯರಿಗೆ ಸೌಭಾಗ್ಯ ಜೀವನ ದೊರಕಿ, ಸುಖದಿಂದ ಪ್ರಪಂಚ ಸಾಗಿಸುವರೆಂದು ನಂಬಿಕೆ. ಆ ರೀತಿ ಇಲ್ಲಿಯವರೆಗೆ ಅನುಭವವೂ ಕೂಡ ಬಂದಿದೆ.

ಒಮ್ಮೆ ಬೆಳಗಾಂವಿಯಲ್ಲಿ ಪ್ಲೇಗದ ಹಾವಳಿ ಇದ್ದಾಗ್ಗೆ (೧೯೨೬ ರಲ್ಲಿ) ಶ್ರೀ ಮಲ್ಹಾರರಾವ, ಶ್ರೀಕೃಷ್ಣರಾವ, ಶ್ರೀ ರಂಗರಾವ ಮೊದಲಾದವರು ತಮ್ಮ ಊರಾದ ಮಜಗಾಂವಕ್ಕೆ (ಬೆಳಗಾಂವಿಯಿಂದ ೩ ಮೈಲು) ಹೋದರು. ತಮ್ಮ ಬೆಳ್ಳಿಭಾಂಡೆಗಳನ್ನು, ಬಂಗಾರ ಆಭರಣ ಹಾಗೂ ಬೆಲೆಯುಳ್ಳ ವಸ್ತ್ರಗಳನ್ನು ತಮ್ಮ ಸಂಗಡ ಒಯ್ದಿದ್ದರು. ಇವುಗಳಲ್ಲಿ ಮಹಾಸ್ವಾಮಿಗಳು ಕೊಟ್ಟ ಸೀರೆಯೂ ಕೂಡ ಇತ್ತು. ಒಂದು ದಿನ ದುರ್ದೈವದಿಂದ ಇವರ ಮನೆಯಲ್ಲಿ ಕಳವಾಗಿ,ಬೆಳ್ಳಿ, ಬಂಗಾರ, ವಸ್ತ್ರಗಳನ್ನೆಲ್ಲಾ ಚೋರರು ಅಪಹರಿಸಿಕೊಂಡು ಹೋದರು. ಮಹಾಸ್ವಾಮಿಗಳು ಕೊಟ್ಟ ಸೀರೆಯೂ ಕೂಡ ಕಳವಾಗಿ ಹೋಯಿತು. ದೇಶಪಾಂಡೆಯವರು ಬಹಳ ದುಃಖಿತರಾದರು. ಆದರೆ ಸುದೈವದಿಂದ ಮುಂದೆ ೮ ದಿನಗಳ ನಂತರ ಇದೇ ಸೀರೆಯು ಇವರ ಹಿತ್ತಲದಲ್ಲಿದ್ದ ಬಣಿವೆಯಲ್ಲಿ ಸಿಕ್ಕಿತು. ೨-೩ ಹೊಲಸಾದ ಬೆಡ್‌ಸೀಟುಗಳು, ಚಾದರ ಮುಂತಾದ ಅರಿವೆಗಳೂ ಕೂಡ ಸಿಕ್ಕವು. ದೇಶಪಾಂಡೆಯವರಿಗೆ ಸಂತೋಷವಾಯಿತು. ಶ್ರೀ ರಂಗರಾವ ಅವರು ವಕೀಲರಿದ್ದಾರೆ. ಶ್ರೀ ಮಲ್ಹಾರರಾಯ ಶ್ರೀ ಉಪಾಸಕರಿದ್ದು ಷೋಡಶೀ ಉಪದೇಶ ಪಡೆದಿದ್ದಾರೆ. ನಿತ್ಯ ಉಪಾಸನೆ ಮಾಡುತ್ತಾರೆ. ಮಾರುತಿ ಮಂದಿರದ ಬಳಿಯಲ್ಲಿ, ದೇಶಪಾಂಡೆ ಗಲ್ಲಿಯಲ್ಲಿ ಭವ್ಯ ಮತ್ತು ವಿಶಾಲವಾದ ಮನೆ ಇದೆ. ದೇವರಮನೆಯು ಪ್ರಶಾಂತ ಮತ್ತು ಸುಂದರವಿದೆ. ಶ್ರೀ ಚಿದಂಬರ ಮಹಾಸ್ವಾಮಿಗಳು ಗೊಡ್ಡಾಗರದಲ್ಲಿ ಯಜ್ಞ ಮಾಡಿದ ಬಗ್ಗೆ (ಶಕೆ ೧೭೨೯. ಇ. ಸ. ೧೮೦೭ ಪ್ರಭವ ನಾಮ ಸಂವತ್ಸರ ಚೈತ್ರ ಶುದ್ಧ ಪಂಚಮಿ) ಮೃಗಶಿರಾ ನಕ್ಷತ್ರ, ಬಾಲವ ಕರಣ, ಶೋಭನ ಯೋಗ, ಚಂದ್ರ ಗುರುಗಳು ಏಕಾದಶ ಸ್ಥಾನದಲ್ಲಿ, ಅಮೃತ ಸಿದ್ಧಿ

ಯೋಗದಲ್ಲಿ, ಸೂರ್ಯೋದಯದಿಂದ ೧೧ ಗಳಿಗೆಗೆ, ಯಜ್ಞ ಪ್ರಾರಂಭ.) (ಶ್ರೀಮಚ್ಚರಿತ್ರ) ಕುಂಬಳಕಾಯಿ ಪಲ್ಲೆಯ ಹೌದಿನಲ್ಲಿ ಬಿದ್ದ, ಕರಡೀಗುದ್ದಿಯ ದೇಶಪಾಂಡೆಯವರೂ ಇವರ ಮನೆತನದವರಂತೆ. ನನಗೆ ಮಾಹಿತಿಯನ್ನು ಕೊಟ್ಟ ದೇಶಪಾಂಡೆ ಬಂಧುತ್ರಯರಿಗೆ ನಾನು ಉಪಕೃತ.

**ಸಖ್ಯದ ವಿಳಾಸ**

ಶ್ರೀ ಮಲ್ಹಾರರಾವ ದೇಶಪಾಂಡೆ (ಮಾರುತಿಯ ಗುಡಿಯ ಹತ್ತಿರ)
ದೇಶಪಾಂಡೆ ಗಲ್ಲಿ, ಬೆಳಗಾಂವ,



### ೮) ಮಂತ್ರಾಕ್ಷತೆ ಮತ್ತು ವಿಭೂತಿ ಕೊಟ್ಟದ್ದು

ಶ್ರೀಮತೀ ಛಾಯಾಬಾಯಿ ವಸಂತರಾವ ಕುಲಕರ್ಣಿ, ಕೇಳಕರಬಾಗ, ಬೆಳಗಾಂವ.

ಶ್ರೀಮತೀ ಛಾಯಾಬಾಯಿಯವರು ಕಣಬರ್ಗಿಯ ಶ್ರೀ ವಸಂತರಾವ ವಾಮನರಾವ ಕುಲಕರ್ಣಿ ಇವರ ಪತ್ನಿಯು. ಐದು-ಆರು ವರುಷಗಳಿಂದ ಇವರಿಗೆ ಅಸ್ವಾಸ್ಥ್ಯವಿತ್ತು. ಔಷಧ, ಇಂಜೆಕ್ಶನ್ ವಗೈರೆ ಎಲ್ಲ ಉಪಾಯಗಳನ್ನೂ ಮಾಡಿ ಆಯಿತು. ಯಾವ ಬೇನೆಯೂ ಇಲ್ಲವೆಂದು ಡಾಕ್ಟರರು ಹೇಳಿದ್ದರೂ ಇವರಿಗೆ ಶಾಂತಿ, ಸಮಾಧಾನಗಳಿರಲಿಲ್ಲ. ಶ್ರೀ ಚಿದಂಬರ ನಾಮಸ್ಮರಣೆ, ಭಜನ, ಪ್ರದಕ್ಷಿಣಾ, ಸಹಸ್ರ ನಾಮ ಪಠಣ ಮಾಡಹತ್ತಿದರು, ಆಗಾಗ್ಗೆ ತಲೆಗೆ ಚಕ್ರ ಬಂದಂತಾಗಿ ಪ್ರದಕ್ಷಿಣೆಯ ಸಮಯದಲ್ಲಿ ಬಿದ್ದದ್ದೂ ಉಂಟು. ಒಮ್ಮೆ ಇವರ ಮನೆಗೆ ಅಥಣಿಯ ಶ್ರೀ ಹಣಮದಾಸರು ಬಂದಾಗ್ಗೆ, ಇವರಿಗೆ ಶ್ರೀ ರಾಘವೇಂದ್ರರ ಆರಾಧನೆ ಮಾಡಲು ತಿಳಿಸಿದರು. ಆದರೆ ಛಾಯಾಬಾಯಿಯವರ ಮನಸ್ಸಿನಲ್ಲಿ ಸಂಶಯ ಬಂದಿತು. "ಚಿದಂಬರ ಪ್ರಭುವಿನ ಸೇವೆ ಮಾಡುವಾಗ್ಗೆ ಮತ್ತೆ ರಾಘವೇಂದ್ರರ ಸೇವೆ ಏಕೆ?" ಎಂದು ಅನುಮಾನಿಸ ಹತ್ತಿದರು. ಅಂದೇ ದೃಷ್ಟಾಂತವಾಯಿತು. "ಚಿದಂಬರ ರಾಘವೇಂದ್ರರು ಬೇರೆ ಅಲ್ಲ. ಈರ್ವರ ಸೇವೆಯನ್ನೂ ಮಾಡಲು ಅಡ್ಡಿ ಇಲ್ಲ." ಸರಿ ಚಿದಂಬರನ ಫೋಟೋದ ಬದಿಯಲ್ಲಿಯೇ ರಾಘವೇಂದ್ರರ ಫೋಟೋ ಇಟ್ಟು ಆರಾಧನೆ ಸುರು ಆಯಿತು. ವರುಷ ಎರಡು ವರುಷ ಕಳೆದರೂ ಅವರ ಅಸ್ವಾಸ್ಥ್ಯ ದೂರವಾಗಲಿಲ್ಲ. ಮನಸ್ಸಿನ ಅಶಾಂತತೆ ಇನ್ನಿಷ್ಟು ಬೆಳೆಯಿತು. ಈ ಸಮಯ

ದಲ್ಲಿ ಅವರು ವಿಜಾಪೂರದಲ್ಲಿ ಇದ್ದರು. ಸೇವೆಯನ್ನು ಮಾಡುವಾಗ್ಗೆ ಎಲ್ಲಿಂದಲೋ ಲಿಂಬೆಣಂಬುಗಳೂ, ಸೂಜಿಗಳೂ ಬೀಳಹತ್ತಿದವು. ಯಾರೋ ಮಾಟ ಮಾಡಿಸಿರಬೇಕೆಂದು ಎನಿಸಿತು. ಏದೆಗುಂದದೆ, ಛಾಯಾಬಾಯಿಯವರು ಚಿದಂಜರ-ರಾಘವೇಂದ್ರರ ಸೇವೆಯನ್ನು ದೃಢ ಮನಸ್ಸಿನಿಂದ ನಡೆಸಿದರು. ಇ. ಸ. ೧೯೭೪ ಚೈತ್ರ ಶುದ್ಧ ದ್ವಾದಶೀ ಮಧ್ಯಾನ್ಹ ೧-೪೦ ಗಂಟಿಗೆ ತಮ್ಮ ಕುಲದೇವರಾದ ವಿರೂಪಾಕ್ಷೇಶ್ವರ ಫೋಟೋದ ಎದುರಿಗೆ ಮಂತ್ರಾಕ್ಷತೆಯ ಒಂದು ಗುಂಪು ಹಾಗೂ ವಿಭೂತಿ ಕಾಣಿಸಿದವು. ಶ್ರೀ ಚಿದಂಬರ ಸ್ವಾಮಿಯ ಫೋಟೋದಲ್ಲಿದ್ದ ಗುಂಡಿಯಿಂದ ಹಾಗೂ ಶ್ರೀ ರಾಘವೇಂದ್ರ ಸ್ವಾಮಿಗಳ ಅಂಗೈಯಿಂದ ಭಸ್ಮ ಬೀಳಲು ಪ್ರಾರಂಭವಾಯಿತು. ಎಲ್ಲರಿಗೂ ಆಶ್ಚರ್ಯ ಮತ್ತು ಆನಂದ. ಎರಡು ಡಬ್ಬಿಗಳಲ್ಲಿ ಮಂತ್ರಾಕ್ಷತೆ ಹಾಗೂ ಭಸ್ಮ ತೆಗೆದಿಟ್ಟು ದಿನಾಲೂ ಪೂಜಿಸಹತ್ತಿದರು. ಅಂದಿನಿಂತ ಛಾಯಾಬಾಯಿಯವರ ಮನಸ್ಸು ಪ್ರಫುಲ್ಲಿತವಾಗಿ, ಶಾಂತಿ, ಸಮಾಧಾನಗಳು ಸಿಕ್ಕವು. ಸಧ್ಯ ಅವರಿಗೆ ಯಾವ ತೊಂದರೆಯೂ ಇಲ್ಲ. ಮೊದಲು ದೊರೆತ ಮಂತ್ರಾಕ್ಷತೆ ಹಾಗೂ ಭಸ್ಮ ಈಗ ಲಿಂಗದ ಆಕೃತಿ ಹಾಗೂ ಪಾದದ ಆಕೃತಿ ತಾಳಿದ್ದಾವೆ, ದಿನಾಲೂ ಅವುಗಳನ್ನು ಭಕ್ತಿಯಿಂದ ಪೂಜಿಸುತ್ತಾರೆ. ಭಕ್ತರಿಗೆ ಅನುಗ್ರಹಿಸಲು ಚಿದಂಬರನು ಸದೈವ ಸಿದ್ಧನೆಂಬುವದು ಈ ಚಮತ್ಕಾರ ಘಟನೆಯಿಂದ ತಿಳಿದು ಬರುತ್ತದೆ.

**ಸಧ್ಯದ ವಿಳಾಸ**

ಶ್ರೀ ವಸಂತರಾವ ವಾಮನರಾವ ಕುಲಕರ್ಣಿ

ಕೇಳಕರ ಬಾಗ, ಬೆಳಗಾಂವ

ಇವರ ವಂಶಾವಳಿ

ವಾಮನರಾವ—೧) ರಾಮರಾವ, ೨) ನರಸಿಂಗರಾವ, ೩) ಮಹಾದೇವರಾವ, ೪) ವಸಂತರಾವ (ಪತ್ನಿ, ಛಾಯಾಬಾಯಿ)

ವಿಜಯ ಅರುಣಾ ಸುರೇಶ ಮೀರಾ



## (೯) ಬನವಾಸಿಯಲ್ಲಿ ಕಂಭದಲ್ಲಿ ದರ್ಶನ ಕೊಟ್ಟದ್ದು

ಬನವಾಸಿಯಲ್ಲಿ ಒಂದು ಕಂಭದಲ್ಲಿ ಓರ್ವ ಭಕ್ತಳಿಗೆ ಮಹಾಸ್ವಾಮಿಗಳು ದರ್ಶನ ಕೊಟ್ಟಿದ್ದಾರೆ. ಈ ಮನೆಯಲ್ಲಿ ಸಧ್ಯ, ಕೈ. ವಿಶ್ವನಾಥ ಗಣೇಶ ತೊರಗಲ್ ಅವರ ಮಕ್ಕಳು, ೧) ಗುರುನಾಥ, ೨) ಗಣಪತಿ (ಬಿ. ಎ.) ಎಂಬುವವರು ಇದ್ದಾರೆ. ಈ ಕಂಭಕ್ಕೆ ನಿತ್ಯ ಪೂಜೆ ಸಲ್ಲುತ್ತದೆ. ಆದರೆ ಯಾರಿಗೆ ದರ್ಶನ ಕೊಟ್ಟರು ? ಯಾವ ಸಮಯಕ್ಕೆ ವಗೈರೆ ವಿವರಗಳನ್ನು ಮುಂದಿನ ಆವೃತ್ತಿಯಲ್ಲಿ ಕೊಡುವೆವು. ಈ ಮಾಹಿತಿಯನ್ನು ಕೊಟ್ಟವರು, **ಶ್ರೀ ಭಿಷ್ಟೇಶ ದೀಕ್ಷಿತ ಬಂಕಾಪೂರ** ಇವರು. ಬನವಾಸಿಯಲ್ಲಿ ಇವರ ಜಮೀನುಗಳಿವೆಯಂತೆ. ಇವರು ಧಾರವಾಡದಲ್ಲಿ ಸರಕಾರೀ ನೌಕರಿಯಲ್ಲಿ ಇದ್ದಾರೆ. ದೇಶಪಾಂಡೆಯವರ ಓಣಿಯಲ್ಲಿಯೇ ಇರುವರು. ಇವರ ಪರಿಚಯವನ್ನು ಶ್ರೀ ಅಪ್ಪಾರಾವ ದೇಶಪಾಂಡೆ ಅವರು ಮಾಡಿ ಕೊಟ್ಟಿರು.

(೧೦) ಲಕ್ಷ್ಮೇಶ್ವರದಲ್ಲಿ **ಭಾವೂರಾವ ಹಣಮಂತರಾವ ಕುಲಕರ್ಣಿ** ಇವರ ಮನೆಯಲ್ಲಿ ಮಹಾಸ್ವಾಮಿಗಳು ಕೊಟ್ಟ **ಕರೇ ಕಟ್ಟಿಗೆಯು ಸರ್ಪವಿದೆ.** ಒಂದು ಕೋಲನ್ನೂ ಕೂಡ ಕೊಟ್ಟಿದ್ದಾರೆ. ಈ ಭಾವೂರಾಯರ ಸ್ವಾಧೀನದಲ್ಲಿಯೇ ಶ್ರೀ ಚಿದಂಬರ ಮಹಾಸ್ವಾಮಿಗಳ ಕಾಲದಲ್ಲಿ ಸ್ಥಾಪಿತವಾದ ಈಶ್ವರ ದೇವಾಲಯವಿದೆ. ಅದಕ್ಕೆ ಸ್ವಲ್ಪ ಜಮೀನೂ ಕೂಡ ಇದೆಯಂತೆ. ಶ್ರೀ ಭಾವೂರಾಯರ ಹೇಳಿಕೆಯಂತೆ ಇವರ ಘರಾಣೆಯಲ್ಲಿ ಓರ್ವ ಸ್ತ್ರೀಯು ಒಂದು ಸರ್ಪಕ್ಕೆ ಜನ್ಮ ಕೊಟ್ಟಳಂತೆ. ಅದು ದಿನಾಲೂ ಮನೆ ತುಂಬ ಹರಿದಾಡಿ, ಹೊರಸಿನ ಮೇಲೆಯೇ ಮಲಗುತ್ತಿತ್ತಂತೆ. ಅದನ್ನು ಶಿಶುವಿನಂತೆಯೇ ಹಾಲನ್ನು ಕೊಟ್ಟು ಪೋಷಿಸುತ್ತಿದ್ದರು. ದುರ್ದೈವದಿಂದ ಒಂದು ದಿನ ಆ ಹಾವು ಹಾಲು ಕಾಯಿಸುವ ಅಗ್ಗಿಷ್ಟಗಿಯಲ್ಲಿ ಮಲಗಿದಾಗ್ಗೆ, ಗೊತ್ತಿಲ್ಲದೇ ಆ ಅಗ್ಗಿಷ್ಟಿಗೆಯಲ್ಲಿ ಬೆಂಕಿಯನ್ನು ಹಾಕಲಾಯಿತು. ಆಗ್ಗೆ ಆ ಸರ್ಪವು ಸತ್ತಿತು, ಮುಂದೆ ಅವರಿಗೆ ಸಂತತಿಯಾಗದ್ದರಿಂದ, ಶ್ರೀ ಚಿದಂಬರ ಮಹಾಸ್ವಾಮಿಗಳು ಲಕ್ಷ್ಮೇಶ್ವರಕ್ಕೆ ಬಂದಾಗ್ಗೆ ಅವರ ದರ್ಶನ ತಕ್ಕೊಂಡು ತನಗೆ ಸಂತತಿಯಾಗಬೇಕೆಂದು ಆ ಮಹಿಳೆಯು ಬೇಡಿಕೊಂಡಳಂತೆ. ಆಗ್ಗೆ ಸ್ವಾಮಿಗಳು ಈ ಸರ್ಪ ಮತ್ತು ಒಂದು ಛಡಿ (ಸಣ ಕೋಲು) ಕೊಟ್ಟು ಅವುಗ

ಳನ್ನು ಪೂಜಿಸಲು ಹೇಳಿದರಂತೆ. ಮುಂದೆ ಅವರಿಗೆ ಸಂತಾನಪ್ರಾಪ್ತಿಯಾಯಿತು. ಪೂರ್ಣ ವಿವರಗಳನ್ನು ತಿಳಿಸುವದಾಗಿ ಭಾವೂರಾಯರು ಆಶ್ವಾಸನವಿತ್ತಿದ್ದಾರೆ. ಮುಂದಿನ ಆವೃತ್ತಿಯಲ್ಲಿ ಅವುಗಳನ್ನು ಕೊಡುವೆವು.

(೧ ) ಮುಂಡರಗಿ ತಾಲೂಕಿನ ಬಿದರಹಳ್ಳಿ ಗ್ರಾಮದಲ್ಲಿ, **ಶ್ರೀ ಕೃಷ್ಣ ಭಟ್ಟ ಜೋಶಿ** ಎಂಬುವವರ ಮನೆಯಲ್ಲಿ, ಮಹಾಸ್ವಾಮಿಗಳು ಕೊಟ್ಟ **ಟೆಂಗಿನ ಕಾಯಿ** ಇದೆ. ದಿನಾಲೂ ಅದಕ್ಕೆ ಪೂಜೆಯನ್ನು ಸಲ್ಲಿಸುತ್ತಾರೆ.

**(೧೨)** ಹುಬ್ಬಳ್ಳಿಯ ಹತ್ತಿರ ಛಬ್ಬಿ ಎಂಬ ಗ್ರಾಮದಲ್ಲಿ, ಶ್ರೀ ಕುಲಕರ್ಣಿಯವರ ಮನೆಯಲ್ಲಿ ಶ್ರೀ ಚಿದಂಬರ ಮಹಾಸ್ವಾಮಿಗಳು ಗಣೇಶೋತ್ಸವವನ್ನು ಒಳ್ಳೆ ವಿಜೃಂಭಣೆಯಿಂದ ಮಾಡಿಸಿ, ಆಶೀರ್ವಾದ ಮಾಡಿದ್ದಾರಂತೆ. ಈಗಲೂ ಛಬ್ಬಿಯಲ್ಲಿ ಶ್ರೀ ಕುಲಕರ್ಣಿ ಅವರ ಮನೆಯಲ್ಲಿ ಶ್ರೀ ಸ್ವಾಮಿಗಳು ಹಾಕಿ ಕೊಟ್ಟ ರೀತಿಯಲ್ಲಿಯೇ ಗಣೇಶೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸುತ್ತಾರೆ. ಭಕ್ತರನೇಕರು ಭಾಗವಹಿಸುತ್ತಾರೆ.

**(೧೩) ಮಹಾಸ್ವಾಮಿಯ ಹಸ್ತಾಕ್ಷರಗಳಿದ್ದ ಯಜ್ಞದ ಆಮಂತ್ರಣ ಪತ್ರ**

ಧಾರವಾಡ ಜಿಲ್ಹೆಯ ಗುತ್ತಲ ಗ್ರಾಮದಲ್ಲಿ ಶ್ರೀ ನರಸಿಂಹಗೌಡರ ಮನೆಯಲ್ಲಿ ಮಹಾಸ್ವಾಮಿಗಳ ಹಸ್ತಾಕ್ಷರಗಳಿದ್ದ ಯಜ್ಞದ ಆಮಂತ್ರಣ ಪತ್ರಿಕೆ ಇದೆ. ಅದನ್ನು ಅವರು ದೇವರ ಹತ್ತಿರ ಇಟ್ಟು ದಿನಾಲೂ ಭಕ್ತಿಯಿಂದ ಪೂಜಿಸುತ್ತಾರೆ.

**(೧೪) ಶ್ರೀ ಚಿದಂಬರ ಪಾದುಕೆಗಳುಳ್ಳ ಚಿದಂಬರ ಮಂದಿರ**

**ಅಗಡಿಯಲ್ಲಿ** ಕೋಟೆಯಲ್ಲಿ ಶ್ರೀ ದೇಸಾಯಿಯವರ ಸ್ವಾಧೀನದಲ್ಲಿ ಒಂದು ಚಿದಂಬರ ಮಂದಿರವಿದೆ. ಅದರ ಜೀರ್ಣೋದ್ಧಾರವಾಗಬೇಕಾಗಿದೆ, ಇದರ ಸಂಪೂರ್ಣ ವಿವರಗಳನ್ನು ಮುಂದಿನ ಆವೃತ್ತಿಯಲ್ಲಿ ಕೊಡುವೆವು.

**(೧೫) ಮಹಾಸ್ವಾಮಿಗಳು ಸ್ವತಃ ಬರೆದ ಪತ್ರ**

ಅಗಡಿಯಲ್ಲಿ ಶ್ರೀ ಹೇಜೀಬ ಅವರ ಮನೆಯಲ್ಲಿ ಮಹಾಸ್ವಾಮಿಗಳು ಹೇಜೀಬರ ಮೂಲಪುರುಷ ಶ್ರೀ ವೆಂಕಾಜಿಪಂತ (ಮಹಾಸ್ವಾಮಿಯ ಸಮಕಾಲೀನರು) ಅವರಿಗೆ ಬರೆದ ಪತ್ರವಿದೆ. ಅದರಲ್ಲಿ ಕ್ಷೇಮ ಸಮಾಚಾರ ವಿಷಯವಿದ್ದ, 'ಪ್ರಭುವರ್ಯರ ಇಚ್ಛೆಯನ್ನು ಅನುಸರಿಸಿ ನಡೆಯಬೇಕೆಂದು' ಸೂಚಿ

ಸಿದ್ದಾರೆ. ಸಧ್ಯ ಈ ಪತ್ರ ಸದಾನಂದ ಹೇಜೀಬ ಇವರ ಕಡೆಗೆ ಇದೆ. ಅದನ್ನು ದಿನಾಲೂ ಪೂಜಿಸುತ್ತಾರೆ.

ವಂಶಾವಳಿ

ಮೂಲಪುರುಷ–ವೆಂಕಾಜೀಪಂತ–ನರಸಿಂಗರಾಯ–ಬಾಳಕೃಷ್ಣ

ಗೋಪಾಳರಾಯ




## (೧೬) ಅಡಿಕೆಯ ಬೆಟ್ಟವನ್ನು ಕೊಟ್ಟದ್ದು ಹಾಗೂ ಅದು ಬಾಣಾಕೃತಿಯಾದದ್ದು

ಧಾರವಾಡ ಜಿಲ್ಹೆಯ ಹಾವನೂರ ಗ್ರಾಮದ ಅನಂತಭಟ್ಟರಿಗೆ ಮಹಾಸ್ವಾಮಿಗಳು, ಅಡಿಕೆಯ ಬೆಟ್ಟವನ್ನು ಕೊಟ್ಟಿದ್ದರಂತೆ. ಸಧ್ಯ ಇದು ಬಾಣರೂಪದಲ್ಲಿದ್ದು ಅವರ ವಂಶಜರಾದ ಹಣಮಂತ ತಮ್ಮಾಜೀ ಹಾಡಲಗೇರಿ, ಶಿರಸಿ, ಎಸ್. ಟಿ, ಡಿಪಾರ್ಟಮೆಂಟ, ಇವರಲ್ಲಿ ಇದೆ. ಹಾವನೂರು ಒಂದು ಪವಿತ್ರ ಕ್ಷೇತ್ರ. ಮಹಾಸ್ವಾಮಿಗಳು ಶ್ರೀ **ಟೇಂಬೇ ಮಹಾರಾಜರೂ, ಶ್ರೀ ಗುಳವಣೀ ಮಹಾರಾಜರೂ, ಶ್ರೀ ಶೇಷಾಚಲ ಮಹಾರಾಜ ಮೊದಲಾದವರು** ತಮ್ಮ ಪಾದಧೂಳಿಯಿಂದ ಈ ಊರನ್ನು ಕ್ಷೇತ್ರವನ್ನಾಗಿ ಮಾಡಿದ್ದಾರೆ. ಚಿದಂಬರ ಭಕ್ತಶ್ರೇಷ್ಠ ಶ್ರೀ ಹಣಮಂತಗೌಡರು ಬಹದ್ದೂರ ದೇಸಾಯಿಯವರ ಮೂಲ ಸಂಸ್ಥಾನವೂ ಇದೇ. ಇಲ್ಲಿ ಶ್ರೀ ದೇವಿಯ ಉತ್ಸವವು ಒಂದು ವಿಶಿಷ್ಟ ರೀತಿಯಲ್ಲಿ ಒಳ್ಳೆ ವೈಭವದಿಂದ ನೆರವೇರುತ್ತದೆ. ಇಲ್ಲಿ ಶ್ರೀ ಚಿದಂಬರ ರಾಜಾರಾಮ ವಾರಕರೀ ಭಕ್ತಮಂಡಲ ಸ್ಥಾಪಿತವಾಗಿದ್ದು, ಈಗ ೧೯ ವರುಷಗಳಿಂದ ದಿಂಡೀ ಪಾದಯಾತ್ರೆಯು ಕೈಕೊಳ್ಳಲ್ಪಡುತ್ತದೆ. ಇಲ್ಲಿ ಚಿದಂಬರ, ಸಾವಿತ್ರೀ, ಸರಸ್ವತೀ ಮೂರ್ತಿಗಳು (ಶಿಲೆಯ) ನಿರ್ಮಿತವಾಗಿದ್ದು ಅವುಗಳನ್ನು ಸ್ಥಾಪಿ

ಸುವದಕ್ಕಾಗಿ ಚಿದಂಬರ ಮಂದಿರವನ್ನು ಕಟ್ಟುವದಕ್ಕೆ ಸ್ಥಳವನ್ನೂ ಕೊಡ ತಕ್ಕೊಂಡಿದ್ದಾರೆ. ಭಕ್ತರ ಸಹಕಾರದಿಂದ ಮಂದಿರವು ಬೇಗನೇ ನಿರ್ಮಾಣವಾಗ ಲೆಂದು ಚಿದಂಬರ ಚರಣಾರವಿಂದಗಳಲ್ಲಿ ಪ್ರಾರ್ಥಿಸುವೆ.



## ಶ್ರೀ ಚಿದಂಬರ ಭಕ್ತವೃಂದದಲ್ಲಿ ನಿವೇದನೆ

ಭಾರತದಲ್ಲಿ ಅನೇಕ ಕಡೆಗೆ ಶ್ರೀ ಚಿದಂಬರ ಮಹಾಸ್ವಾಮಿಗಳಿಂದ ಅನು ಗ್ರಹೀತವಾದ ಮನೆತನಗಳಿವೆ. ಸ್ವಾಮಿಗಳು ದಯಪಾಲಿಸಿದ ಅನೇಕ ಅನುಗ್ರಹ ವಸ್ತುಗಳೂ ಇರಲು ಸಾಕು. ಭಕ್ತರು ಅವುಗಳ ಬಗ್ಗೆ ಪೂರ್ಣ ವಿವರಗಳನ್ನು ತಿಳಿಸಬೇಕಾಗಿ ಬಿನ್ನಹ.

**ವಿಳಾಸ**

ಗಣೇಶ ಚಿದಂಬರ ದೀಕ್ಷಿತ, ಇನಾಮದಾರ, ಬಿ.ಎ. ಆ. ಬಿ. ಟಿ.
ಮುಕ್ಕಾಂ–ಪೋ.—ಧಾರವಾಡ. (ಮದಿಹಾಳ)





# ಶ್ರೀ ಚಿದಂಬರ ಪ್ರಕಾಶ, ಭಾಗ ೧

## ಒಂಭತ್ತನೆಯ ಕಿರಣ

## ಶ್ರೀ ಚಿದಂಬರ ಚರಿತ್ರವನ್ನು ಬರೆದ, ಷಡ್ಭಕ್ತರ ಸಂಕ್ಷಿಪ್ತ ಪರಿಚಯ



**೧) ಪಂಡಿತ ಪ್ರಕಾಂಡ ಸಖಾರಾಮ ತ್ರ್ಯಂಬಕ ಗರ್ದೇ.**
**೨) ಸಂತರತ್ನ ರಾಜಾರಾಮ ಹರಿಸಿಂಗ ಪಾಟೀಲ**
**೩) ಭಕ್ತವರ್ಯ ರಾಮಚಂದ್ರ ಭೋಜರಾವ ದೇಶಪಾಂಡೆ**
**೪) ವೇದವೇದಾಂಗ ವಿಶಾರದ, ಶ್ರೀ ಶಿವಶಾಸ್ತ್ರಿಗಳು.**
**೫) ತಪಸ್ವೀ ಶ್ರೀ ಸಾಂಬದೀಕ್ಷಿತರು ಕಾಶೀಕರ.**
**೬) ಸಾಧ್ವೀಶಿರೋಮಣಿ ಶ್ರೀಮತೀ ವಿಠಾಬಾಯಿ ನಾಯಿಕ.**



### (೧) ಸಖಾರಾಮ ತ್ರ್ಯಂಬಕ ಗರ್ದೇ

ಇವರು ಮಹಾಸ್ವಾಮಿಯ ಸಮಕಾಲೀನರು. ಇವರಿಗೆ 'ಅಪ್ಪೂ ನಾನಾ' ಎಂದು ಎಲ್ಲರೂ ಸಂಬೋಧಿಸುತ್ತಿದ್ದರು. "ಶ್ರೀಮಚ್ಚರಿತ್ರ" ವೆಂಬ ಚಿದಂಬರ ಚರಿತ್ರವನ್ನು ಮರಾಠಿಯಲ್ಲಿ ಬರೆದಿದ್ದಾರೆ. ಇವರ ವಂಶಾವಳಿ ಹೀಗಿದೆ.

ಭಟ್ಟೋಜಿ ಗರ್ದೆ – ಮೂಲ ಪುರುಷರು
|
ಕೇಶವ ಗರ್ದೆ – (ಪತ್ನಿ – ಮಣಿಕರ್ಣಿಕಾ)
ಕೃಷ್ಣದೇವ – (ಪತ್ನಿ – ರುಕ್ಮಿಣೀ)
ತ್ರ್ಯಂಬಕ (ಪತ್ನಿ – ಆನಂದೀಬಾಯಿ)
ಸಖಾರಾಮ – (ಚರಿತ್ರ ಲೇಖಕರು)

ಇವರು ಋಗ್ವೇದಿಗಳು: ಶಾಕಲ ಶಾಖೆಯ ಆಶ್ವಲಾಯನ ಸೂತ್ರದವರು, ಕೊಂಕಣಸ್ಥರು. ಕಾಶ್ಯಪ ಗೋತ್ರದ ಮಯೂರ ಪಂಡಿತರ (ಮೋರೋ) ಮಗಳು ಆನಂದೀಬಾಯಿ ಇವರ ತಾಯಿ. ಜೇಜೂರಿಯ ಖಂಡೇರಾಯ ಇವರ ಕುಲಸ್ವಾಮಿ. ಜನ್ಮ ಎಲ್ಲಿ ಮತ್ತು ಯಾವಾಗ್ಗೆ ಎಂಬುವದು ತಿಳಿದಿಲ್ಲ. ಇವರು ಯಾವುದೋ ಕಾರಣದಿಂದ ಬೆಳಗಾಂವಿ ಜೇಲಿನಲ್ಲಿದ್ದರು. ಶ್ರೀ ಚಿದಂಬರ ದೀಕ್ಷಿತರ ಅನುಗ್ರಹದಿಂದ ಇವರ ಬಿಡುಗಡೆಯಾಯಿತು. ಕಾರಾಗೃಹದಲ್ಲಿ ಇದ್ದಾಗಲೇ ದೃಷ್ಟಾಂತವಾಗಿ, ಚರಿತ್ರ ಬರೆಯಲು ಮಹಾಸ್ವಾಮಿಗಳು ಸ್ವಪ್ನದಲ್ಲಿ ಹೇಳಿದ್ದರು. ೫೯ ಆರ್ಯಾಗಳನ್ನು ಬರೆಯುವಷ್ಟರಲ್ಲಿ ಇವರ ಬಿಡುಗಡೆಯಾಯಿತು. ಕಾಗದ, ಮಶಿ, ಇಲ್ಲದ್ದರಿಂದ, ಸಗಣಿಯನ್ನು ಕಲಿಸಿ, ದಂಟಿನಿಂದ ಸೆರೆಮನೆಯ ಗೋಡೆಯ ಮೇಲೆ ೫೯ ಆರ್ಯಾಗಳನ್ನು ಬರೆದಿದ್ದರಂತೆ. ಬಿಡುಗಡೆಯಾದ ಮೇಲೆ ಅವುಗಳನ್ನು ಬರೆದುಕೊಂಡು ದೀಕ್ಷಿತರ ದರ್ಶನ ಪಡೆದು, ಅವುಗಳನ್ನು ಅವರಿಗೆ ತೋರಿಸಿದನು. ಮುಂದೆ ಹಾಗೇ ಇಡಿಯ ಚರಿತ್ರವನ್ನು ಅವರ ಬಳಿಯಲ್ಲಿಯೇ ಇದ್ದು ಬರೆದನೆಂದು ತನ್ನ ಆತ್ಮವೃತ್ತಾಂತದಲ್ಲಿ ಹೇಳಿದ್ದಾನೆ.

ಈ ಚರಿತ್ರಕ್ಕೆ "ಶ್ರೀಮತ್ ಚರಿತ್ರ" ಎಂದು ಏಕೆ ಅನ್ನಬೇಕೆಂಬುದನ್ನು ಕವಿಯು ಬಹಳ ಮಾರ್ಮಿಕವಾಗಿ, ರಸವತ್ತಾಗಿ, ಅರ್ಥಪೂರ್ಣವಾಗಿ, ಔಚಿತ್ಯಪೂರ್ಣವಾಗಿ ಪದ್ಯದಲ್ಲಿಯೇ ಹೇಳಿದ್ದಾನೆ.

"ಶ್ರೀ" ಎಂದರೆ, ಲಕ್ಷ್ಮೀ ಸೌಂದರ್ಯ, ಜ್ಞಾನ, ಯಶ ಎಂದು ನಾಲ್ಕು ಅರ್ಥಗಳನ್ನು ಹೇಳಿದ್ದಾನೆ. ಅವಿನಾಶಿಯಾದ ಸಂಪತ್ತು ಚಿದಂಬರನಲ್ಲಿತ್ತು. ಚಿದಂಬರನಲ್ಲಿ ಅಂತರ್ಬಾಹ್ಯ ಸೌಂದರ್ಯವಿತ್ತು. ಕೇವಲ ದೇಹದಿಂದ ಸರ್ವಾಂಗ ಸುಂದರನಾಗಿದ್ದನಷ್ಟೇ ಅಲ್ಲದೆ ಮನಸ್ಸೂ ಪರಿಶುದ್ಧ. ಅಂತರ್ಬಾಹ್ಯ ಶುದ್ಧಿ ಚಿದಂಬರನಲ್ಲಿ ಇತ್ತು. ಉಪದೇಶ ಶುಭಕರ. ಚರಿತ ಶುಭಕರ. ಇಂತಹ ಚಿದಂಬರ ಚರಿತ್ರ ಕೂಡ ಶುಭಕರ. ಜ್ಞಾನ-ವಿಜ್ಞಾನಗಳು ಚಿದಂಬರನಿಗೆ ಅಧೀನವಾಗಿದ್ದವು. ಚಿದಂಬರ ಯಶವೂ ಸರ್ವತ್ರ ಪಸರಿಸಿತ್ತು. ದೀನದಲಿತರ ದುಃಖನಿವಾರಣೆಯಲ್ಲಿ; ಅನ್ನದಾನದಲ್ಲಿ; ದುಷ್ಟರ ದಂಡನೆಯಲ್ಲಿ; ಶಿಷ್ಟರ ಪಾಲನೆಯಲ್ಲಿ; ಅಲೌಕಿಕ ಲೀಲೆಗಳನ್ನು ಮಾಡುವಲ್ಲಿ; ಭಕ್ತರ

ಸಕಲ ಕಾಮನೆಗಳನ್ನು ಪೂರ್ಣ ಮಾಡುವಲ್ಲಿ ಚಿದಂಬರನ ಯಶಸ್ಸು ಹಬ್ಬಿತ್ತು. ಆದ್ದರಿಂದ ಚಿದಂಬರನಿಗೆ "ಶ್ರೀ" ಮಾನ್ ಎನ್ನಬೇಕು; ಚರಿತ್ರಕ್ಕೆ "ಶ್ರೀಮತ್" ಎನ್ನಬೇಕು ಎಂದು ಕವಿಯ ವಿವರಣೆ.

ಈ ಚರಿತ್ರೆಯಲ್ಲಿ ನಾಲ್ಕು ಪಾದಗಳಿವೆ. ೧ನೆಯದರಲ್ಲಿ ೨೯, ೨ನೆಯದರಲ್ಲಿ ೩೯, ೩ನೆಯದರಲ್ಲಿ ೪೪, ೪ನೆಯದರಲ್ಲಿ ೨೩ ಅಧ್ಯಾಯಗಳಿವೆ. ಒಟ್ಟು ೧೩೫ ಅಧ್ಯಾಯಗಳಿವೆ. ಮಹಾಸ್ವಾಮಿಯ ಅವತಾರ ಪೂರ್ವಕಾಲದ ವರ್ಣನೆ, ಮಾರ್ತಂಡಭಟ್ಟರ ವಿದ್ಯಾವ್ಯಾಸಂಗ, ತಪಶ್ಚರ್ಯ, ಮಹಾಸ್ವಾಮಿಯ ಅವತಾರ, ಅವರ ಬಾಲ್ಯ, ಉಪನಯನ, ವಿವಾಹ, ಮುರಗೋಡದಲ್ಲಿ ವಾಸವಾಗಿ ಲೋಕೋದ್ಧಾರ ಕಾರ್ಯ, ಅದ್ಭುತ ಲೀಲೆಗಳು, ರಾಜಕೀಯ ಕ್ಷೇತ್ರದಲ್ಲಿ ಸ್ವಾಮಿಗಳು ವಹಿಸಿದ ಅದ್ವಿತೀಯ ಪಾತ್ರ, ಅಪೂರ್ವವಾದ ಯಜ್ಞ, ರಾಜರಿಗೆ, ಮಂತ್ರಿಗಳಿಗೆ, ಭಕ್ತರಿಗೆ, ಆಪ್ತರಿಗೆ, ಮಕ್ಕಳಿಗೆ ಸದುಪದೇಶ, ಮಠಾಧಿಪತಿಗಳ ಕೂಡ ಬಂದ ಸಂಬಂಧ, ಇತ್ಯಾದಿ ವಿಷಯಗಳನ್ನು ಕವಿ ಸರಸವಾಗಿ ಹಾಡಿದ್ದಾನೆ. ಮರಾಠೀ ವಾಙ್ಮಯದಲ್ಲಿ ಇದ್ದ ಯಾವತ್ತೂ ಛಂದಸ್ಸುಗಳ ಸಮಾವೇಶ ಇಲ್ಲಿ ಇದೆ. ಆರ್ಯಾ, ಸವಯೀ, ಸಾಕೀ, ದಿಂಡೀ, ಗಪ್ಡಾಲಿಕಾ, ಅನುಷ್ಟುಭ್, ಓವೀ, ಶಾರ್ದೂಲವಿಕ್ರೀಡಿತ ಮೊದಲಾದವುಗಳನ್ನು ಸಾಕಷ್ಟು ಉಪಯೋಗಿಸಿದ್ದಾನೆ. ಅಲಂಕಾರಗಳು ಗ್ರಂಥವನ್ನು ಅಲ್ಲಲ್ಲಿ ಅಲಂಕರಿಸಿವೆ. ಇವನ ಸಂಗೀತ ವಿಷಯದ ಮಾಹಿತಿಯಿಂದ ಇವನು ಸಂಗೀತ ವಿಶಾರದನಿದ್ದನೆಂದು ತೋರುತ್ತದೆ. ಇವನು ವರ್ಣಿಸಿದ ವಿಷಯ ಪಟ್ಟಿಯನ್ನು ಪದ್ಯದಲ್ಲಿಯೇ ಬರೆದಿದ್ದಾನೆ. ವೇದ, ವೇದಾಂತ, ಸಿದ್ಧಾಂತ, ಜ್ಞಾನ, ಕರ್ಮ, ಉಪಾಸನಾ, ಭಕ್ತಿ, ವೈರಾಗ್ಯ, ನಾಮಮಹಾತ್ಮ್ಯ, ಸಂತರ ಶ್ರೇಷ್ಠತೆ, ವೇದವೇದಾಂಗಗಳ ಲಕ್ಷಣ, ಇತಿಹಾಸ, ಆಖ್ಯಾನ, ಕಥಾ ಇವುಗಳ ಮುಖಾಂತರ ಮುಖ್ಯವಾಗಿ ಚಿದಂಬರ ಕೀರ್ತಿಯನ್ನು ವರ್ಣಿಸಿದ್ದಾನೆ. ಈ ಚರಿತ್ರವಲ್ಲದೇ, ೬೦೦ ಅಭಂಗಗಳಿಂದ ಚಿದಂಬರ ಚರಿತ್ರ ಬರೆದಿದ್ದಾನೆ. ಭಕ್ತಿಗೀತಗಳನ್ನು, ಆರತಿ, ಅಷ್ಟಕ, ಸ್ತೋತ್ರ ಮೊದಲಾದವುಗಳನ್ನು ಬರೆದಿದ್ದಾನೆ. ವಿಶೇಷ ಸಂಚಿಕೆಯಲ್ಲಿ ಎಲ್ಲ ಮಾಹಿತಿಯನ್ನು ಕೊಡುವೆವು. ಆಗಿನ ಕಾಲದ ಐತಿಹಾಸಿಕ ಕೆಲ ಘಟನೆಗಳಿಗೆ ಇಲ್ಲಿ ಈ ಶ್ರೀಮಚ್ಚರಿತ್ರದಲ್ಲಿ ಆಧಾರಗಳು ಸಿಗುತ್ತವೆ.

ಸಮಕಾಲೀನನಾಪ್ಪರಿಂದಲೂ, ಸ್ವಾಮಿಗಳ ಹತ್ತಿರವೇ ಇದ್ದು ಚರಿತ್ರ ಬರೆದದ್ದರಿಂದಲೂ ಹೆಚ್ಚು ವಿಶ್ವಸನೀಯ ಗ್ರಂಥವೆಂದು ಹೇಳಬಹುದು.



## (೨) ಸಂತರತ್ನ ರಾಜಾರಾಮ ಮಹಾರಾಜರು

ಜನ್ಮ–ಶಕೆ ೧೬೯೦, ಫಾಲ್ಗುಣ ವದ್ಯ ದ್ವಿತೀಯಾ, (ಇ. ಸ. ೧೭೬೯) ಸಮಾಧಿ–ಶಕೆ ೧೭೬೫, ಕಾರ್ತಿಕ ವದ್ಯ ದ್ವಿತೀಯಾ, (ಶಹಾಪೂರದಲ್ಲಿ) ಜನ್ಮ. ಸ್ಥಳ–**ಬಾಭುಳಗಾಂವ,** ಗೋದಾವರೀ ದಂಡೆಯಮೇಲೆ ಇದೆ. ಪೂನಾ–ಅಹಮ್ಮದನಗರ ರೇಲುದಾರಿಯಲ್ಲಿರುವ, **ಪುಣತಾಂಬಾ** ಸ್ಟೇಶನ್ನಿನಿಂದ ಮೂರು ಮೈಲು ದೂರ ಇದೆ. ಇವನ ವಂಶಾವಳಿಯನ್ನು ಪರಿಶಿಷ್ಟ ೧ ರಲ್ಲಿ ನೋಡಿರಿ. ಇವನ ತಾಯಿ ಲಕ್ಷ್ಮೀಬಾಯಿ, ತಂದೆ ಹರಿಸಿಂಗ, ಅಡ್ಡ ಹೆಸರು ಪಾಟೀಲ. ಇವನಿಗೆ (ರಾಜಾರಾಮನಿಗೆ) ರಾಧಾ ಮತ್ತು ಕೃಷ್ಣಾ ಎಂಬ ಇಬ್ಬರು ಹೆಂಡಂದಿರು.

ಬಾಲ್ಯದಿಂದಲೇ ಅಧ್ಯಾತ್ಮದ ಕಡಗೆ ಒಲವು. ಪರಮಾತ್ಮನ ಸಗುಣ ದರುಶನಕ್ಕೆ ಹಂಬಲ. "ದೇವಾ ಧ್ರುವ ಬಾಲಕನು ಐದು ವರುಷದವನಿರುವಾಗಲೇ ಅವನಿಗೆ ಪ್ರತ್ಯಕ್ಷನಾದಿ; ನನಗೆ ಎಂಟು ವರುಷಗಳು ತುಂಬಿದ್ದರೂ ನನಗೇಕೆ ದರ್ಶನವಿಲ್ಲ? ಎಂದು ದೈನ್ಯದಿಂದ ಪ್ರಾರ್ಥಿಸುತ್ತಿದ್ದನು. ಪೇಶವೆಯರ ಆಳಿಕೆಯಲ್ಲಿ ಹುಸಂಗಾಬಾದದಲ್ಲಿ ೫೦೦ ಕುದುರೆಗಳ ಮೇಲೆ ಅಧಿಪತಿಯಾಗಿ (ರಿಸಾಲದಾರನಾಗಿ) ಲಷ್ಕರದಲ್ಲಿ ನೌಕರಿ ಮಾಡುತ್ತಿದ್ದ. ಕೊನೆಗೆ ನೌಕರಿಗೂ ಶರಣು ಹೊಡೆದು, ಚಿದಂಬರ ರೂಪದಿಂದ ಅವತರಿಸಿದ ಹರಿಯ ದರ್ಶನಕ್ಕೆ ಹೊರಡುವನು. ಆಗ್ಗೆ ಚಿದಂಬರ ಸ್ವಾಮಿಗಳು ಕುಂದಗೋಳದಲ್ಲಿದ್ದರು. ರಾಜಾರಾಮನು ಶಕೆ ೧೭೨೭ ಆಷಾಢಮಾಸದಲ್ಲಿ ಚಿದಂಬರ ದರ್ಶನಕ್ಕೆ (೧೮೦೫ ರಲ್ಲಿ) ಹೊರಟನು.

"ಬರೋಬರ ಆಮುಚಾ ಗುರುಬಂಧು ಏಕ।
ನಾಮ ತ್ಯಾಚೆ ದೇಖ ನಿಂಬಾಜೀ ತೆ ॥
ದಾಸ ಮ್ಹಣೆ ಕಾಂತಾ ಅಸೇ ಬರೋಬರಿ।
ತಟ್ಟೂವರಿ ಸ್ವಾರೀ ಕರುನೀ ಆಲೋ ॥



**ಬಾಭುಳಗಾಂವದಲ್ಲಿಯ ಶ್ರೀ ಚಿದಂಬರ ಮೂರ್ತಿ**

॥ ಶ್ರೀ ಚಿದಂಬರ ನಮೋಽಸ್ತುತೇ ॥

ಶ್ರೀ ಚಿ. ಸೇವಾ ಮಂಡಲ ಕೃಪೆ (ಮುಂಬೈ)

ಆಷಾಢ ತೋ ಮಾಸ ಪರ್ಜನ್ಯ ಬಹುತ ।
ದುಕ್ಕಾಳಾಚೇ ಗತಸಾಲ ಹೋತೆ ॥
ಶಕೆ ತೇ ಸತ್ರಾಶೇಸತ್ತಾವೀಸ ।
ಸಾಲೀ ದುಕ್ಕಾಳ ಪಡಲೇ ಉಜಾಡೀ ತೆ "

ಆಗ ಅರಣ್ಯದಲ್ಲಿ ದಾರಿ ತಗ್ಗಿ ಭಯಭೀತನಾಗುತ್ತಾನೆ. ಚಿದಂಬರನಿಗೆ ಅನನ್ಯಭಾವದಿಂದ ಪ್ರಾರ್ಥಿಸಿದ ಕೂಡಲೇ, ಚಿದಂಬರನು ಅಂತ್ಯಜ ಬಾಲಕನ ವೇಷದಲ್ಲಿ ಪ್ರತ್ಯಕ್ಷನಾಗುತ್ತಾನೆ.

"ವಿಚಿತ್ರ ತೇ ಮೂಲ ದಿಸೇ ತೇ ಸಹಜ । ಮ್ಹಣೇ ಮೀ ಅಂತ್ಯಜ ಗರೀಬಾಚೆ॥"

ರಾಜಾರಾಮನಿಗೆ ಆ ಬಾಲಕನನ್ನು ಕಂಡು ಆಶ್ಚರ್ಯ, ಆನಂದವಾಯಿತು. " ನಿನು ಯಾರು " ಎಂದು ರಾಜಾ ರಾಮ ಕೇಳಿದೊಡೆ,

"ಈ ದಟ್ಟಡವಿಯಲ್ಲಿ ದಾರಿ ತಪ್ಪಿದವರಿಗೆ ದಾರಿ ತೋರಿಸುವವ" ಎಂದು ಶ್ಲೇಷಾರ್ಥದಲ್ಲಿ ಹೇಳಿದ್ದು ರಾಜಾರಾಮನಿಗೆ ಹೊಳೆಯಲಿಲ್ಲ. ಬಾಲಕನು ದಾರಿ ತೋರಿಸುತ್ತ ಮುಂದೆ-ಮುಂದೆ ಸಾಗುತ್ತಿರಲು, ಹಿಂದೆ ರಾಜಾರಾಮ, ನಿಂಬಾಜೀ, ರಾಜಾರಾಮನ ಹೆಂಡತಿ, ಅವನ ಹಿಂದೆ ನಡೆಯುತ್ತಿದ್ದರು, ಊರು ಸಮೀಪಿಸಿದ ಕೂಡಲೇ, ಬಾಲಕನು ದೂರದಿಂದ ಊರು ತೋರಿಸಿ, ಅಲ್ಲಿಯೇ ಮಾಯವಾದನು. ಎಷ್ಟು ಹುಡುಕಿದರೂ ಸಿಗಲಿಲ್ಲ, ರಾಜಾರಾಮನು ದುಃಖಿತನಾಗಿ, ಬಾಲಕನು ಮಾಯವಾದ ಸ್ಥಳಕ್ಕೆ ನಮಸ್ಕರಿಸಿ, ಚಿದಂಬರನೇ ಬಂದು ನಮಗೆ ಮಾರ್ಗ ತೋರಿದನು ಎಂದು ಮನಗಂಡನು. ಮುಂದೆ ಪಂಢರಪುರದಿಂದ ಕುಂವಗೋಳಕ್ಕೆ ಹೋಗಿ, ಅಲ್ಲಿ ೬ ದಿನಗಳವರೆಗೆ ಉಪೋಷಣದಿಂದಿದ್ದು ಚಿದಂಬರ ದರ್ಶನಕ್ಕೆ ಹಂಬಲಿಸುವಾಗ ಪ್ರತ್ಯಕ್ಷ ಮಹಾಸ್ವಾಮಿಯೇ ಕೋಟೆಯ ಹೊರಭಾಗಕ್ಕೆ ಬಂದು, ರಾಜಾರಾಮನನ್ನು ವಾತ್ಸ-ಲ್ಯದಿಂದ ಬಿಗಿದಪ್ಪಿಕೊಂಡು, ಆತನ ತಲೆಯಮೇಲೆ ವರದ ಹಸ್ತವನ್ನಿಟ್ಟರು. ಆಗ ರಾಜಾರಾಮನಿಗೆ ಜ್ಞಾನೋದಯವಾಯಿತು. ಮೊದಲು ವರದ ಅಭಂಗಗಳೆಂಬ ೫೨೭ ಅಭಂಗಗಳನ್ನು ರಚಿಸಿ, ಆಮೇಲೆ, ೧,೫೧,೪೯೧ ಅಭಂಗಗಳನ್ನು ಒಟ್ಟು ರಚಿಸಿದನೆಂದು ರಾಜಾರಾಮನೇ ತನ್ನ ಆತ್ಮಚರಿತ್ರದಲ್ಲಿ ಹೇಳಿದ್ದಾನೆ. ಅವನ ಜೀವನದಲ್ಲಿಯ ಕೆಲ ಮುಖ್ಯ ಘಟನೆಗಳನ್ನು ಇಲ್ಲಿ ಕೊಡುವೆ.



ರಾಜಾರಾಮನು
ರಚಿಸಿದ
ಅಭಂಗಗಳ
ಗಾಥಾಗಳು
ಬಾಭುಳಗಾಂವ
ಶ್ರೀ ಚಿದಂಬರ
ಸೇವಾಮಂಡಲ ಕೃಪೆ
(ಮುಂಬೈ)

೧) ಜನ್ಮ ಶಕೆ ೧೬೯೦. ಫಾಲ್ಗುಣ ವದ್ಯ ದ್ವಿತೀಯಾ, ಮಂಗಳವಾರ ಮುಂಜಾನೆ ಮೊದಲನೆಯ ಪ್ರಹರದಲ್ಲಿ. (ಇ ೧೭೬೯.)

೨) ಶ್ರೀ ಚಿದಂಬರ ದರ್ಶನಕ್ಕೆ ಹೊರಟಿದ್ದು. ಶಕೆ ೧೭೨೭, ಆಷಾಢ ಮಾಸ. (ಇ. ೧೮೦೫.)

೩) ಕುಂದಗೋಳ ತಲುಪಿದ್ದು. ಶಕೆ ೧೭೨೭, ಶ್ರಾವಣ ವದ್ಯ ಚತುರ್ದಶೀ (ಇ. ೧೮೦೫.) ಜ್ಞಾನೋಪದೇಶ. ಭಾದ್ರ. ಶು. ೬.

೪) ವರದ ಅಭಂಗ ರಚನೆ. ಶಕೆ ೧೭೩೪, ಪುಷ್ಯ ವದ್ಯ ೧೩. (ಇ. ೧೮೧೩.) ಮಲಪ್ರಭಾ ನದಿಯ ದಂಡೆಯ ಮೇಲೆ, ಗುರ್ಲಹೊಸೂರಲ್ಲಿ.

೫) ಪ್ರಥಮ ಚಿದಂಬರ ಜಯಂತೀ. ಶಕೆ ೧೭೩೬, ಕಾರ್ತಿಕ ವದ್ಯ ಷಷ್ಠಿ,

೬) ಪ್ರಥಮ ಮೂರ್ತಿ ಪೂಜಾ. (ಸಾವಿತ್ರೀ, ಸರಸ್ವತೀ. ಚಿದಂಬರ ಮೂರ್ತಿಗಳು.)ಶಕೆ ೧೭೩೬,ಕಾರ್ತಿಕ ಶುದ್ಧ ಪಂಚಮಿ. (ಇ.೧೮೧೪.)

೭) ನಿಜಾತ್ಮಬೋಧ ಗ್ರಂಥಪೂರ್ತಿ. ಶಕೆ ೧೭೫೦, ಭಾದ್ರಪದ ಶು. ಚತುರ್ಥಿ. (ಇ. ೧೮೨೮.)

೮) ನಿರ್ಯಾಣ, ಶಕೆ ೧೭೬೫, ಕಾರ್ತಿಕ ವದ್ಯ ದ್ವಿತೀಯಾ, (ಇ.೧೮೪೩.)



## ರಾಜಾರಾಮನ ಗ್ರಂಥಗಳು

೧) ಅಭಂಗ ಸಂಗ್ರಹ. ೧, ೫೧, ೪೯೧ ಇವುಗಳಲ್ಲಿ, ನಾಮಪರ, ಭಕ್ತಿ ಪರ, ಕರುಣಾಪರ, ವೇದಾಂತಪರ, ಜ್ಞಾನಪರ ಇತ್ಯಾದಿ ಇವೆ.

### (೨) ಪಂಚ ರತ್ನಗಳು

೧) ನಿಜಾತ್ಮಬೋಧ ೨) ಚಿದಂಬರ ಸಹಸ್ರನಾಮ ೩) ಕರುಣಾಸಾಗರ ೪) ಅಮೃತಾನಂದ ೫) ಅದ್ವೈತಸಾರ.

೩) ಜ್ಞಾನಗರ್ಭ, ೪) ಗುರುಗಮ್ಯ ಠೇವ, ೫) ಗುರೂಪದೇಶ, ೬) ಬ್ರಹ್ಮೋಪದೇಶ, ೭) ಬ್ರಹ್ಮಾನುಭವ, ೮) ಚಿದಂಬರ ಅಷ್ಟೋತ್ತರಶತ ನಾಮ, ೯) ಬ್ರಹ್ಮಾನಂದ ಲಹರೀ, ೧೦) ಚಿದಂಬರಾ ವಿಷಯೀ ಗಾಣೆ,



ಶ್ರೀ ಚಿದಂಬರ
ಭಕ್ತಮಂಡಲ
ಮುಂಬೈ
ಬಾಭುಳಗಾಂವ
ದಲ್ಲಿ ಭಜನೆ
ಮಾಡುತ್ತಿರುವ
ದೃಶ್ಯ
ಶ್ರೀ ಚಿ. ಸೇವಾ
ಮಂಡಲ ಕೃಪೆ
(ಮುಂಬೈ)

(ಹಿಂದಿಯಲ್ಲಿ) ೧೧) ಲಘು ಚಿದಂಬರ ಚರಿತ್ರ, ೧೨) ಚಿದಂಬರ ನಾಮ ಯೋಗ, ೧೩) ಯಜ್ಞಸಾರ, ೧೪) ಚಿದಂಬರ ಬಾಲಕ್ರೀಡಾ, ೧೫) ಚಿದಂಬರ ಪಂಚಪದೀ.

## ರಾಜಾರಾಮನ ಕಾವ್ಯಶೈಲಿ

ಭಾಷೆ ಸರಳ ಹಾಗೂ ಸರಸವಿದೆ. ಉಪಮಾ, ಉತ್ಪ್ರೇಕ್ಷೆ, ದೃಷ್ಟಾಂತ ಮೊದಲಾದ ಅಲಂಕಾರಗಳಿಂದ ಸುಂದರವಾಗಿದೆ. ಜನಸಾಮಾನ್ಯರಿಗೂ ತಿಳಿಯು ವಂತೆ ವೇದಾಂತ ವಿಷಯವನ್ನು ವಿವರಿಸಿದ್ದಾನೆ.

## ಅಭಂಗ ಗಾಥಾಗಳು

ಇವರ ವಂಶಜರಾದ ಪ್ರಲ್ಹಾದ ಬುವಾ ಇವರ ಕಡೆಗೆ ಅಭಂಗ ಗಾಥಾ ಗಳು ಇವೆ. ಇವರು ಬಾಭುಳಗಾಂವದಲ್ಲಿ ಇರುತ್ತಾರೆ. ಮೂರ್ತಿಗಳೂ ಕೂಡ ಇವರ ಸ್ವಾಧೀನದಲ್ಲಿಯೇ ಇವೆ. ಭಕ್ತರ ದೃಷ್ಟಿ, ಈ ಅಭಂಗಗಳ ಕಡೆಗೆ ಹೊರಳ ಬೇಕು. ಲಕ್ಷಾವಧಿ ಅಭಂಗಗಳು ಪ್ರಕಾಶನವನ್ನು ಕಾಣದೇ ಇರುವವು. ಅಪಾರ ಮಾಹಿತಿ ಸಂಗ್ರಹ ಈ ಅಭಂಗಗಳಲ್ಲಿ ಇದೆ. ಅದರ ಸದುಪಯೋಗವನ್ನು ಭಕ್ತರು ಮಾಡಿಕೊಳ್ಳಬೇಕು.

## (೩ ಶ್ರೀ ರಾಮಚಂದ್ರ ಭೋಜರಾವ ದೇಶಪಾಂಡೆ

ಜನ್ಮ ಶಕೆ ೧೬೯೯, ಇ. ಸ. ೧೭೭೭.

ಮರಣ ಶಕೆ ೧೭೭೮, ನಲನಾಮ ಸಂವತ್ಸರ, ಆಶ್ವಿನಮಾಸ, ಇ. ಸ. ೧೮೫೬. ಜನ್ಮಸ್ಥಳ ಪಾಚ್ಛಾಪೂರ, ಜಿ. ಬೆಳಗಾಂವ.

ಇವರು ಸಂಸ್ಕೃತ ಪಂಡಿತರಿದ್ದರು. "ಶ್ರೀ ಚಿದಂಬರ ಮಹಾತ್ಮ್ಯಂ" ಎಂಬ ಸಂಸ್ಕೃತ ಚರಿತ್ರ ಬರೆದಿದ್ದಾರೆ. ಕೆಲವು ಸ್ತೋತ್ರ ಹಾಗೂ ಆರತಿಗಳನ್ನು ರಚಿಸಿ ದ್ದಾರೆ. ಇವರ ಅಜ್ಜ ರುದ್ರೋಪಂತರು ಧಾರ್ಮಿಕರು; ಅನುಷ್ಠಾನಿಕರು. ಬಾಳೀ ಕುಂದ್ರಿಯಲ್ಲಿರುವ ರಾಮೇಶ್ವರ ದೇವಾಲಯದ ಎದುರು ಒಂಟಿಗಾಲಿನ ಮೇಲೆ ನಿಂತು, ದತ್ತ ಗುರು ಚರಿತ್ರ ಲೇಖನ ಹಾಗೂ ಪಾರಾಯಣ ಮಾಡಿದರು.

ಇವರು ಬರೆದ ಗ್ರಂಥಗಳು ೧) ಚಿದಂಬರಮಹಾತ್ಮ್ಯಂ. ೨) ಚಿದಂ- ಬರ ಗೀತಾ ಮತ್ತು ಆರತಿ. ೩) ಸಿದ್ಧೇಶ್ವರಾಷ್ಟಕಂ. ೪) ರಾಮ ದೀಕ್ಷಿತ- ಸ್ತೋತ್ರಂ. ೫) ಆರತಿ ಮತ್ತು ಪದ್ಯಗಳು. ೬) ಗಂಗಾಸ್ತವಃ ೭) ವೀರಭದ್ರ ಕ್ಷೇತ್ರ ವರ್ಣನೆ. ೮) ಗಣೇಶ ಚರಿತ್ರ.

ಇವರಲ್ಲಿ ವಿದ್ವತ್ತೆಯಷ್ಟೇ ಅಲ್ಲದೇ ಕ್ಷಾತ್ರತೇಜವೂ ಕೂಡ ಇತ್ತು. ಧೋಂಡೋಪಂತ ಗೋಖಲೆ, ಕರ್ನಾಟಕ ಪ್ರಾಂತದಲ್ಲಿ ಬಂಡುಗಾರರನ್ನು ಹತ್ತಿಕ್ಕಲು ದೌಡು ಮಾಡಿದಾಗ, ಲಷ್ಕರದಲ್ಲಿ ಸೇರಿ, ದಲಪತಿಯಾದರು. ಬಾಪೂ ಗೋಖಲೇಯವರಿಗೆ ಬಲಗೈಯಂತಿದ್ದ ಇವರು ಯುದ್ಧದಲ್ಲಿ ಸಹಾಯ ಸಲ್ಲಿಸುತ್ತಿದ್ದರು. ಬಾಪೂ ಗೋಖಲೆಯ ಮರಣದ ನಂತರ ಶ್ರೀಮಂತ ಬಾಜೀರಾಯರ (೨ನೆಯ) ಆಶ್ರಯದಲ್ಲಿದ್ದರು. ಮುಂದೆ ಸೇವಾ ನಿವೃತ್ತಿ ಹೊಂದಿ, ಪಾಚ್ಛಾಪುರಕ್ಕೆ ಬಂದರು. ಪಾಚ್ಛಾಪುರ ಬಳಿಯಲ್ಲಿ ಶೀಗೀಹಳ್ಳಿ ಗ್ರಾಮದಲ್ಲಿ ವಿದ್ಯಾರ್ಥಿಗಳಿಗೆ, ವೇದ, ಕಾವ್ಯ, ಶಾಸ್ತ್ರಗಳನ್ನು ಕಲಿಸುತ್ತಿದ್ದರು. ಇವರಿಗೆ "ಶೀಗಿಹಳ್ಳಿಯ ಬುವಾ" ಎಂದು ಜನರು ಕರೆಯುತ್ತಿದ್ದರು.

ಚಿದಂಬರ ಚರಿತ್ರ ಬರೆಯಲು ತಮಗೆ ಮಹಾಸ್ವಾಮಿಯ ಮಕ್ಕಳಾದ ಶಂಕರ ದೀಕ್ಷಿತರು ಹಾಗೂ ಮೊಮ್ಮಕ್ಕಳಾದ ಮಾರ್ತಂಡ ದೀಕ್ಷಿತರು ಬಡಲಿ ಇವರ ಆಜ್ಞೆಯಾಯಿತೆಂದು ಹೇಳಿದ್ದಾರೆ.

"ಚಿದಂಬರಸ್ಯ ಪೌತ್ರೇಣ ಶ್ರೀಶಂಕರಸುತೇನಚ ।
ಮಾರ್ತಂಡದೀಕ್ಷಿತೇನೈವ ಬದರ್ಯಾಶ್ರಮ (ಬಡ್ಲಿ) ವಾಸಿನಾ ॥
ಸ್ವಪ್ನೇ ಚಿದಂಬರಾದಿಷ್ಟೋ ತಥಾವೈ ಶಂಕರೇಣ ಚ ॥"

ಚಿ. ಮಹಾತ್ಮ್ಯ

ಚರಿತ್ರವು ಸರಳ, ಸುಬೋಧ ಸಂಸ್ಕೃತ ಭಾಷೆಯಲ್ಲಿ ಬರೆಯಲಾಗಿದೆ. ಮಾರ್ತಂಡಭಟ್ಟರ ವಂಶಾವಳಿ, ವಿದ್ಯಾಭ್ಯಾಸ, ತಪಶ್ಚರ್ಯ, ಧರ್ಮಗ್ಲಾನಿ, ಚಿದಂಬರ ಅವತಾರ, ಧರ್ಮಸ್ಥಾಪನೆ ಮೊದಲಾದ ವಿಷಯಗಳನ್ನು ಬಹು ರಮ್ಯವಾಗಿ ವರ್ಣಿಸಿದ್ದಾರೆ. ಚಿದಂಬರನು ಅಷ್ಟವರ್ಷಾತ್ಮಕನಾಗಿ ಅವತರಿಸಿದಾಗ್ಗ, ಶ್ರೀ ಮಾರ್ತಂಡ ದೀಕ್ಷಿತರು ಹಾಗೂ ಮಾತೆ ಲಕ್ಷ್ಮೀದೇವಿಯರು, ಮಾಡಿದ ಸ್ತೋತ್ರ ಬಹಳ ಮಹತ್ವದ್ದಿದೆ. ಉಪಾಸನಾ ವಿಭಾಗದಲ್ಲಿ ಈ ಸ್ತೋತ್ರ ಕೊಟ್ಟಿದ್ದೇನೆ. ಚರಿತ್ರದಲ್ಲಿ ಅನೇಕ ಐತಿಹಾಸಿಕ ಘಟನೆಗಳ ಉಲ್ಲೇಖವಿದೆ. ಟೀಪುವಿನ ಮದಭಂಗ, ಬಾಜೀರಾಯನ ಆಗಮನ, ಬಾಪೂ ಗೋಖಲೇ, ಧೋಂಡೋಪಂತ ಗೊಖಲೇ, ರತ್ನಾಕರ ಪಂತ, ಧೋಂಡಜೀ ವಾಘ ಮೊದಲಾದವರ ವಿಷಯವೂ ಬಂದಿದೆ. ಗೊಣ್ಣಾಗರದಲ್ಲಿ ಚಿದಂಬರ ದೀಕ್ಷಿತರು

ಮಾಡಿದ ಯಜ್ಞದ ವರ್ಣನೆ, ಗಾಯತ್ರೀ ಪುರಶ್ಚರಣ ಪದ್ಧತಿ, ಅದ್ಭುತ ಪವಾಡಗಳ ವರ್ಣನೆ, ದಿವಾಕರ ದೀಕ್ಷಿತರ ಬಂಧನ ಮತ್ತು ಮೋಚನ ಮೊದಲಾದ ಇತಿಹಾಸವಿದೆ. ಈ ಚರಿತ್ರ ಸರ್ವಾಂಗಸುಂದರವಾಗಿದ್ದು, ಚಿದಂಬರ ಸ್ವಾಮಿಗಳ ಜೀವನದ ಮೇಲೆ ಹೊಸ ಬೆಳಕನ್ನು ಚಲ್ಲುತ್ತದೆ. ಇವರು ಮಹಾಸ್ವಾಮಿಗಿಂತ ೧೯ ವರುಷ ಚಿಕ್ಕವರು. ಮಹಾಸ್ವಾಮಿಯ ನಿರ್ಯಾಣವಾದ ಮೇಲೆ ೪೧ ವರುಷಗಳ ನಂತರ ಇಹಲೋಕ ಯಾತ್ರೆಯನ್ನು ಮುಗಿಸಿದರು. ಅಂತೆಯೇ "ಯಥಾದೃಷ್ಟಂ ಯಥಾಶ್ರುತಂ" ನಾನು ಪ್ರತ್ಯಕ್ಷ ನೋಡಿದಂತೆ, ಹಾಗೂ ಕೇಳಿದಂತೆ ಚಿದಂಬರ ಚರಿತ್ರವನ್ನು ಬರೆದಿದ್ದೇನೆ, ಎಂದು ಚರಿತ್ರದಲ್ಲಿ ಹೇಳಿದ್ದಾರೆ.

ಇನ್ನಿತರ ವಿಷಯಗಳು ಚಿದಂಬರ ಬಾಲಲೀಲೆ, ಉಪನಯನ, ಶೂದ್ರನಿಗೆ ದ್ರವ್ಯದಾನ, ವಿಜಾಪೂರದ ಬ್ರಾಹ್ಮಣನೋರ್ವಗೆ ಗುಪ್ತಧನ ಪ್ರದರ್ಶನ, ಸತ್ತವನನ್ನು ಬದುಕಿಸಿದ್ದು, ನಿರ್ಜಲಬಾಂವಿಯಲ್ಲಿ ಗಂಗಾಪ್ರವೇಶ, ಬ್ರಾಹ್ಮಣನ ಹುಂಬು ಗುಣಪಡಿಸಿದ್ದು, ಬ್ರಾಹ್ಮಣನ ಮದಭಂಗ, ಗೋಣ್ಣಾಗರದ ಯಜ್ಞವರ್ಣನೆ (ಅಧ್ಯಾಯ ೧೫–೧೯) ಬಾಜೀರಾಯನು ದರ್ಶನಕ್ಕೆ ಬಂದದ್ದು, ಅವನಿಗೆ ಆದರಾತಿಥ್ಯ, ಗುರ್ಲಹೊಸೂರ ಪ್ರವೇಶ, ಸತ್ತ ಎತ್ತು ಬದುಕಿಸಿದ್ದು, ವೇಶ್ಯೆಯ ಕುಷ್ಠ ಪರಿಹಾರ, ಅಡಿಕೆಯ ಬೆಟ್ಟ ಚಿಗಿತದ್ದು, ಆಚಾರ್ಯರೋ–ರ್ವರ ಕುಷ್ಠ ನಾಶ, ಸಂಸಾರಚಂದ ರಾಜನ (ಕಾಶ್ಮೀರದ) ರೋಗ ಪರಿಹಾರ, ಹುಲಿಯ ಪಂಜರದಿಂದ ಮುಳ್ಳನ್ನು ತೆಗೆದದ್ದು, ನಾರಾಯಣ ಯತಿಗಳ ವೃತ್ತಾಂತ, ಮನೆಯಲ್ಲಿ ಗುಪ್ತನಾಗಿ ಬೇರೆ ಕಡೆಗೆ ಪ್ರಕಟನಾದದ್ದು, ಗಾಯತ್ರೀ ಪುರಶ್ಚರಣ ವಿಧಾನ, (ಅ. ೩೭–೩೮) ಕಾಶೀ ಯಾತ್ರಾ ವರ್ಣನ, ಲಿಂಗರೂಪ ದರ್ಶನ, ಪಾಂಡ್ಯ ಎಂಬ ಗೃಹಸ್ಥನಿಗೆ ಅಡಿಕೆಯ ಬೆಟ್ಟವನ್ನು ಕೊಟ್ಟದ್ದು, ಅದು ಲಿಂಗದ ಆಕಾರ ತಾಳಿದ್ದು, ಪಾಂಡ್ಯನಿಗೆ ಸಂತತಿಯಾದದ್ದು ಇತ್ಯಾದಿ ಇವೆ. ೪೭ ನೆಯ ಅಧ್ಯಾಯದಲ್ಲಿ ದಿವಾಕರ ದೀಕ್ಷಿತರ ಬಂಧನ; ನಿರ್ದೋಷಿಗಳೆಂದು ಬಿಡುಗಡೆ ಹೊಂದಿದ ಇತಿಹಾಸವಿದೆ. ೪೮ ನೆಯ ಅಧ್ಯಾಯದಲ್ಲಿ ಕವಿಯ ಆತ್ಮಚರಿತ್ರ ವಂಶಾವಳಿ ಇವೆ. ಒಟ್ಟು ೪೮ ಅಧ್ಯಾಯಗಳಿದ್ದು, ೩೬೭೯ ಅನುಷ್ಟುಪ್ ಶ್ಲೋಕುಗಳಿವೆ. ಈ ಗ್ರಂಥ ಸಂಶೋಧನೆಯಾಗಿ ಪ್ರಕಟವಾಗಬೇಕು.



## (೪) ಶ್ರೀ ಶಿವಶಾಸ್ತ್ರಿಗಳು

ಶ್ರೀ ಚಿದಂಬರ ಮಹಾಸ್ವಾಮಿಗಳ ನಿಜವಾದ ಸ್ವರೂಪವನ್ನು ತಿಳಿದವರಲ್ಲಿ ಶ್ರೀ ಶಿವಶಾಸ್ತ್ರಿಗಳೂ ಒಬ್ಬರು. ಇವರು ದ್ರಾವಿಡರು. ಮದ್ರಾಸ ಪ್ರಾಂತದ ಮಚ್ಛಲೀ ಪಟ್ಟಣದವರು.

"ಏವಂ ಹಿ ವರ್ತಮಾನೇsತ್ರ ದ್ರಾವಿಡಸ್ಥೋ ಮಹಾನ್ ಕವಿಃ ।"

ಇವರ ಜನ್ಮಸ್ಥಳ ಆಟ್ಮಾವನ್ನಪಲ್ಲಿ. ತಾಲೂಕು ಕುಂದಗಿರಿ; ಜಿಲ್ಹಾ ನೆಲ್ಲೂರ. ಇವರು ತ್ರಿಕಾಲ ಶಿವನ ಪೂಜೆಯನ್ನು ಮಾಡಿ ಸದಾಚಾರದಿಂದ ಕಾಲ ಕಳೆಯುತ್ತಿದ್ದರು. ಶಾಸ್ತ್ರಪಾರಂಗತರೂ, ಮಹಾಕವಿಗಳೂ ಇದ್ದರು. ಕರ್ಮಿಷ್ಠರು. ಚಿದಂಬರ ಕೀರ್ತಿಯನ್ನು ಕೇಳಿ, ಪಾಪಮಯವಾದ ಈ ಕಲಿಯುಗದಲ್ಲಿ ಶಿವನ ಅವತಾರವು ಸಾಧ್ಯವೇ? ಎಂಬ ಸಂಶಯ ತಾಳಿ, ಗುರ್ಲಹೊಸೂರಕ್ಕೆ ಹೊರಟರು. ಅದೇ ದಿನವೇ ಶಿವಶಾಸ್ತ್ರಿಗಳಿಗೆ, ರಾತ್ರಿ ಸ್ವಪ್ನದಲ್ಲಿ, ದೀಕ್ಷಿತರು ಈಶ್ವರನ ರೂಪದಲ್ಲಿ ಬಂದು, 'ಶಾಸ್ತ್ರಿಗಳೇ ಎಲ್ಲಿಗೆ ಹೊರಟಿರಿ? ಪಾಪಮಯವಾದ ಈ ಕಲಿಯುಗದಲ್ಲಿ ಈಶ್ವರನು ಹೇಗೆ ಗೋಚರನಾಗುವನು?' ಎಂದು ಪ್ರಶ್ನಿಸಿದರು.

"ಆಗತ್ಯೋವಾಚ ಭೋ ಶಾಸ್ತ್ರಿನ್ ಕುತ್ರ ವಾ ತ್ವಂ ಗಮಿಷ್ಯಸಿ ।
ಕಲೌ ಪಾಪೈಕಬಹುಲೇ ಕಥಂ ಸ್ಯಾತ್ ಗೋಚರೋ ಹರಃ" ॥ ೧೨ ॥

ಸಂಸ್ಕೃತ ಚ. ಅ. ೨೦. (ಸಾಂಬದೀ)

ತಮ್ಮ ಇಂಗಿತವನ್ನು ಚಿದಂಬರನು ಹೇಗೆ ತಿಳಿದನು? ಆದ್ದರಿಂದ ಅವನು ನರನಲ್ಲ ದೇವನಿರಬೇಕೆಂದು ವಿಚಾರ ಮಾಡಿ, ಕುತೂಹಲದಿಂದ ಗುರ್ಲಹೊಸೂರಕ್ಕೆ ಬಂದರು. ಅಲ್ಲಿ ಸ್ವಪ್ನದಲ್ಲಿ ಕಂಡಂತೆ ಪಾರ್ವತೀ ಪರಮೇಶ್ವರನ ರೂಪ ಕಂಡು, ಸಂತುಷ್ಟರಾಗಿ, ಸಂಶಯ ನಿವಾರಣೆಯಾಗಿ, ದೀಕ್ಷಿತರ ಚರಣಕಮಲಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಕಾವ್ಯ ರೂಪದಲ್ಲಿಯೇ ಸ್ತೋತ್ರವೊಂದನ್ನು ರಚಿಸಿದರು.

'ದಯಾಸಮುದ್ರೋ ದುರಿತಾಪಹಾರೀ । ದುರಂತಸಂತಾಪನಿವಾರಕಾರೀ॥
ಸ್ವಪಾದಭಕ್ತಸ್ಯ ಭವಾಬ್ಧಿತಾರೀ । ಚಿದಂಬರೋ ಮೇ ಭವತು ಪ್ರಸನ್ನಃ ॥"

ಇತ್ಯಾದಿ ೧೦ ಶ್ಲೋಕುಗಳನ್ನು ರಚಿಸಿ ಚಿದಂಬರನಿಗೆ ಅರ್ಪಿಸಿದರು. ಚಿದಂಬರ ದೀಕ್ಷಿತರು ಶಿವಾವತಾರವೆಂದೇ ದೃಢನಿರ್ಧಾರ ಮಾಡಿಕೊಂಡು.

ಸ್ತುತಿಸಹತ್ತಿದರು. ಆಗ ದೀಕ್ಷಿತರು, 'ಶಾಸ್ತ್ರಿಗಳೇ ನನ್ನ ಸ್ತೋತ್ರವನ್ನು ಮಾಡಬೇಡಿರಿ; ನಾನೂ ಮನುಷ್ಯನೇ ಇರುವೆ. ಪರಮೇಶ್ವರನ ಸ್ತೋತ್ರ ಮಾಡಿರಿ: ಅವನು ನಿಮ್ಮ ಇಚ್ಛೆಯನ್ನು ಪೂರ್ಣ ಮಾಡುವನು" ಎಂದರು. ಆಗ ಶಿವಶಾಸ್ತ್ರಿಗಳು ಸಭಿಕರೆದುರು ಗದ್ಗದ ಕಂಠದಿಂದ, ಪ್ರತಿಜ್ಞಾಪೂರ್ವಕ ನುಡಿದರು. "ಸಭಿಕರೇ, ಚಿದಂಬರನು ಈಶ್ವರಾವತಾರಿಯೆಂದೇ ಸ್ತೋತ್ರ ರಚಿಸುವೆ. ನನ್ನ ಅಂಗೈಯಲ್ಲಿ ಕರ್ಪೂರವನ್ನು ಹೊತ್ತಿಸಿ, ಚಿದಂಬರನು ದೇವರೆಂದೇ ಸ್ತೋತ್ರ ರಚಿಸುವೆ. ಚಿದಂಬರನು ದೇವನಲ್ಲವಾದರೆ, ನನ್ನ ಕೈಯು ಸುಟ್ಟು ಭಸ್ಮವಾಗಲಿ" ಎಂದು ನುಡಿದು, 'ಭಕ್ತಾನಂದ ಲಹರೀ' ಎಂಬ ಸ್ತೋತ್ರ ಸುರು ಮಾಡಿದರು.

"ಅಸ್ತಿ ಭಾತಿ ಪ್ರಿಯಂಚೇತಿ ವಸ್ತು ಪ್ರಸ್ತೂಯತೆ ಬುಧೈಃ ।
ತದಸ್ತು ಸ್ವಸ್ತಿ ವಿಸ್ತಾರಾನ್ನಸ್ತು ಚೈದಂಬರಂ ಮಹಃ ॥
"ಬಭೂವ ಭೂವೌ ಪರಮೇಶ್ವರೋಽಸೌ ।
ಚಿದಂಬರಾಖ್ಯಃ ಸ ಶಿವೋಽವತೀರ್ಣಃ ॥'

ಇತ್ಯಾದಿ ೧೧೭ ಸರಸ ಪ್ರಾಸಬದ್ಧ ಶ್ಲೋಕಗಳನ್ನು ರಚಿಸುವವರೆಗೂ ಕೈಯಲ್ಲಿ ಕರ್ಪೂರವು ಉರಿಯುತ್ತಲೇ ಇತ್ತು. ದೀಕ್ಷಿತರ ಕಣ್ಣೊಳಗಿಂದ ನೀರು ಹರಿಯಿತು. ತಮ್ಮ ಆಸನದಿಂದ ಲಗುಬಗೆಯಿಂದ ಓಡಿ ಬಂದು ಶಾಸ್ತ್ರಿಗಳ ಕೈಯಲ್ಲಿಯ ಕರ್ಪೂರಜ್ಯೋತಿಯನ್ನು ನಂದಿಸಿದರು. ಸಭಿಕರೆಲ್ಲರೂ ಆಶ್ಚರ್ಯದಿಂದ ಸ್ತಂಭೀಭೂತರಾಗಿ ಕುಳಿತಿದ್ದರು. ದೀಕ್ಷಿತರು, ಕೃಪಾದೃಷ್ಟಿಯಿಂದ ಶಾಸ್ತ್ರಿಗಳನ್ನು ನೋಡಿ, ಮೈಮೇಲೆ ಕೈಯಾಡಿಸಿ, ವಾತ್ಸಲ್ಯದಿಂದ ನುಡಿದರು. "ವತ್ಸಾ ಈ ಉಗ್ರ ತಪಸ್ಸು ಬೇಡ; ನಿನ್ನ ಭಕ್ತಿಗೆ, ನಿನ್ನ ದೃಢ ನಿರ್ಧಾರಕ್ಕೆ ಮೆಚ್ಚಿದ್ದೇನೆ. ಯಾವ ವರವನ್ನಾದರೂ ಬೇಡು. ಈಶ್ವರನ ಅನುಗ್ರಹದಿಂದ ದಯಪಾಲಿಸುವೆನು" ಎಂದು ಸಾಂತ್ವನ ಮಾಡಿದರು. "ನನಗೆ ತಮ್ಮ ಚರಣಾರವಿಂದಗಳಲ್ಲಿ ನಿಶ್ಚಲ, ನಿರಂತರ ಭಕ್ತಿಯೊಂದನ್ನು ಕೊಡಿರಿ: ಬೇರೆ ಇನ್ನೇನು ಬೇಡ" ಎಂದು ಪ್ರಾರ್ಥಿಸಿದ ಕೂಡಲೇ, ಶಿವಶಾಸ್ತ್ರಿಗಳಿಗೆ ದೀಕ್ಷಿತರು ಭಕ್ತಿ ಮಾರ್ಗ ನಿರೂಪಣ ಮಾಡಿದರು. ನಿಜವಾದ ಭಕ್ತನಲ್ಲಿ ಇರಬೇಕಾದ ೨೪ ಗುಣಗಳನ್ನು ವರ್ಣಿಸಿದರು. ಶಾಸ್ತ್ರಿಗಳನ್ನು ಅನುಗ್ರಹಿಸಿ, ಕಾವ್ಯ ರಚಿಸಲು ಹೇಳಿದರು,

"ರಹಸ್ಯಾಹೂಯ ತಂ ವಿಪ್ರಮಾಹ ಸ್ತೋತ್ರಂ ಮದಾತ್ಮಕಂ ।
ಕುರು ತ್ವಂ ಭಕ್ತಶಾರ್ದೂಲ ಶಂಕರೋಽಹಂ ನ ಸಂಶಯಃ ॥ ೪೧ ॥
ತಹೂಶ್ವಾಸ್ಯ ಜಗಾಮೇಶಸ್ತದೈವ ಸ್ತೋತ್ರಮಾರಭತ್ ।
ಪೌರ್ಥಾರ್ಥಂ ಬುಹುವೃತ್ತಾಢ್ಯಂ ಸರಸಂ ಶಿವಪಂಡಿತಃ ॥ ೪೨ ॥
**ಗೀತಾಂ ಸಹಸ್ರನಾಮ್ನೈವಂ ಕವಚಂ ಹೃದಯಂ ತಥಾ ।**
**ಭಕ್ತಾನಂದಾಭಿಧಂ ಸ್ತೋತ್ರಮಿತೀಡೆ ರತ್ನಪಂಚಕೈಃ ॥ ೪೩ ॥**

ಸಾಂಬದೀ. ಸಂಸ್ಕೃತ ಚ. ಅ ೨೦

## ಶಾಸ್ತ್ರಿಗಳು ರಚಿಸಿದ ಗ್ರಂಥಗಳು

೧) ಶ್ರೀ ಚಿದಂಬರ ಭಕ್ತಾನಂದ ಸ್ತೋತ್ರ. ೨) ಚಿದಂಬರ ನವರತ್ನ ಮಾಲಾ. ೩) ಚಿದಂಬರ ಕವಚ. ೪) ಚಿದಂಬರ ಗೀತಾ. ೫) ಚಿದಂಬರ ಸಹಸ್ರ ನಾಮ. ೬) ಚಿದಂಬರ ಹೃದಯ, (ಉಪಲಬ್ಧವಿಲ್ಲ).

## ಶಾಸ್ತ್ರಿಗಳು ಗುರ್ಲಹೊಸೂರಿಗೆ ಯಾವಾಗ್ಗೆ ಬಂದರು ?

ಗುರ್ಲಹೊಸೂರನ್ನು, (ಗುರುನವಪುರ ಎಂದರೆ, ಗುರುಗಳ ಹೊಸ ಊರು–ಮರಾಠಿಯಲ್ಲಿ, ಗುರೂಲಾ ಹೊಸ ಊರು–ಗುರ್ಲಹೊಸೂರ ಎಂದು ಅದರ ರೂಪಾಂತರವಾಗಿರಬೇಕು.) ಚಿದಂಬರ ಮಹಾಸ್ವಾಮಿಗಳ ಅಜ್ಞೆಯಂತೆ, ಅವರ ಹಿರಿಯ ಮಕ್ಕಳಾದ ದಿವಾಕರ ದೀಕ್ಷಿತರು, ಸರದಾರ ಬಾಪೂ ಗೋಖಲೆಯ ಸಹಾಯದಿಂದ ಕಟ್ಟಿಸಿದರು, ಶಕೆ ೧೭೩೧, ವೈಶಾಖ ಶುದ್ಧ ದಶಮಿಯ ದಿನ (೧೮೦೯ ರಲ್ಲಿ) ವಿಧ್ಯುಕ್ತವಾಗಿ ಗ್ರಾಮನಿರ್ಮಾಣ ಪ್ರಾರಂಭವಾಗಿ, ಮುಂದೆ ಮಾರ್ಗಶೀರ್ಷ ಶುದ್ಧ ಸಪ್ತಮಿ, ವಾಸ್ತುಶಾಂತಿಯಾಗಿ, ದೀಕ್ಷಿತರು ಅಲ್ಲಿ ಇರಲು ಪ್ರಾರಂಭಿಸಿದರು. ಆದ್ದರಿಂದ ಶಿವಶಾಸ್ತ್ರಿಗಳು ಶಕೆ ೧೭೩೧ ನಂತರ ಹಾಗೂ ೧೭೩೭ರ ಮುಂಚೆ ಅಲ್ಲಿಗೆ ಬಂದಿರಬೇಕು.

ಶ್ರೀಮಚ್ಚರಿತ್ರ ಗರ್ದೇ

---

ಸೂಚನೆ—೫) ತಪಸ್ವೀ ಶ್ರೀ ಸಾಂಬದೀಕ್ಷಿತರು, ೬) ಸಾಧ್ವೀ ವಿಠಾಬಾಯಿ ನಾಯಿಕ ಇವರ ಇತಿಹಾಸವನ್ನು ಮುಂದಿನ ಭಾಗದಲ್ಲಿ ಪ್ರಕಟಿಸಲಾಗುವದು.



# ಶ್ರೀ ಚಿದಂಬರ ಪ್ರಕಾಶ, ಭಾಗ ೧

## ಹತ್ತನೆಯ ಕಿರಣ

## ಶ್ರೀ ಶೇಷಾಚಲ ಸ್ವಾಮಿಗಳೂ ಹಾಗೂ ಚಿದಂಬರ ಸಂಪ್ರದಾಯ

ಜನ್ಮ–ಶಕೆ ೧೭೬೯. ಚೈ, ವದ್ಯ ೫ । ನಿರ್ಯಾಣ–ಶಕೆ ೧೮೩೭, ಭಾದ್ರ. ಶು. ೭.



**“ನಗುರೋರಧಿಕಂ ನಗುರೋರಧಿಕಂ”**

ಸದ್ಗುರುಮಾಶ್ರಯ ಕುರು ತತ್ಸೇವಾಂ ।
ಇಚ್ಛಾ ತೇ ಚೇತ್ ಮೋಕ್ತುಂ ಬಂಧಾತ್ ॥
ಸದ್ಗುರುಭಜನಂ ಸರ್ವಾಧಾರಃ ।
ಸದ್ಗುರುಕೃಪಯಾ ಸಕಲಂ ಸಾಧ್ಯಂ ॥

ಆನಂದವನದ ಶ್ರೀ ಶೇಷಾಚಲ ಸ್ವಾಮಿಗಳು ಚಿದಂಬರ ಸಂಪ್ರದಾಯಗಳಾದ, ಅನ್ನದಾನ, ಅತಿಥಿ ಸೇವೆ, ಭಗವದ್ಭಕ್ತಿ, ಪರೋಪಕಾರ ಮೊದಲಾದವುಗಳನ್ನು ಯಥಾವತ್ತಾಗಿ ಆಚರಿಸಿ ಭಕ್ತವೃಂದಕ್ಕೆ ಮಾರ್ಗದರ್ಶನ ಮಾಡಿ, ಕೀರ್ತಿಶೇಷರಾಗಿದ್ದಾರೆ. ಅವರ ಪುಣ್ಯದ ಪ್ರಭಾವದಿಂದ, ತಪಸ್ಸಿನ ಸಾಮರ್ಥ್ಯದಿಂದ ಅವರ ವಂಶಜರಾದ, ಶ್ರೀ ಶೇಷಣ್ಣಸ್ವಾಮಿ, ಶ್ರೀ ಚಿದಂಬರ ಮೂರ್ತಿಗಳು, ಶ್ರೀ ಶಂಕರಸ್ವಾಮಿ ಹಾಗೂ ಶ್ರೀ ನಿಂಗಣ್ಣಸ್ವಾಮಿಗಳು, ಭಕ್ತವೃಂದದ ತನುಮನಧನ ಸಹಾಯದಿಂದ, ಶ್ರೀ ಶೇಷಾಚಲ ಮಹಾರಾಜರು ಮಾರ್ಗದರ್ಶನ ಮಾಡಿದಂತೆ, ಅವಿಚ್ಛಿನ್ನನಾಗಿ ಅನ್ನದಾನ, ಅತಿಥಿಸತ್ಕಾರ, ಸತ್ಸಂಗ, ಅನುಷ್ಠಾನ, ಸಂತಸನ್ಮಾನ ಮೊದಲಾದವುಗಳನ್ನು,

ಶ್ರದ್ಧೆಯಿಂದ, ಭಕ್ತಿಯಿಂದ, ಅಚ್ಚುಕಟ್ಟುತನದಿಂದ ನೆರವೇರಿಸುತ್ತ ಬಂದಿದ್ದಾರೆ. ಇತ್ತೀಚೆಗೆ "ಶ್ರೀ ಶೇಷಾಚಲ ಸದ್ಗುರು ಹಾಯಸ್ಕೂಲು" ಎಂಬ ಮಾಧ್ಯಮಿಕ ಶಿಕ್ಷಣದ ಸಂಸ್ಥೆಯನ್ನು ಸ್ಥಾಪಿಸಿ, ತನ್ಮೂಲಕ ವಿದ್ಯಾದಾನವನ್ನು ಮಾಡಹತ್ತಿದ್ದಾರೆ. ಅನೇಕ ಮಹನೀಯರು ಶಾಲೆಗೆ ಉದಾರ ದಾನ ನೀಡಿದ್ದಾರೆ. ಹಾಯಸ್ಕೂಲು ಆದರ್ಶ ಶಿಕ್ಷಣ ಸಂಸ್ಥೆಯಾಗಿ ಪೂರ್ವ ಪಶ್ಚಿಮ ಸಂಸ್ಕೃತಿಗಳ ಸುಮಧುರ ಸಮ್ಮಿಲನವಾಗಿ, ಸದ್ಗುರುವಿನ ಸಂದೇಶವನ್ನು ಸಾರಲಿ ಎಂದು ಹಾರೈಸುತ್ತೇನೆ.

ಆನಂದವನದ ಶ್ರೀ ಶೇಷಾಚಲ ಸಂಸ್ಥೆಯವರ ದೃಷ್ಟಿ ಅಪಾರವಾದ ಚಿದಂಬರ ವಾಙ್ಮಯದ ಕಡೆಗೆ ಹರಿಯಬೇಕು. ಭಾರತದ ೧೮ ನೆಯ ಶತಮಾನದ ಇತಿಹಾಸದ ಮೇಲೆ ಹೊಸ ಬೆಳಕನ್ನು ಚಲ್ಲಿ, ಸಮಸ್ತ ಮಾನವ ವೃಂದಕ್ಕೆ ಮಾರ್ಗದರ್ಶನ ಮಾಡಿ, ಸುಖ ಶಾಂತಿ ಸಮಾಧಾನಗಳನ್ನು ದೊರಕಿಸಿ ಕೊಡಬಲ್ಲ ಚಿದಂಬರ ವಾಙ್ಮಯದಲ್ಲಿಯ ಅಧ್ಯಾತ್ಮ ಭಾಂಡಾರವನ್ನು ಪ್ರಸಿದ್ಧಿಸುವ ಕಾರ್ಯವನ್ನು ಕೈಕೊಳ್ಳಬೇಕು. "ಸದ್ಬೋಧ ಚಂದ್ರಿಕೆ" ಯ ಮೂಲಕ ಈ ಚಿದಂಬರ ವಾಙ್ಮಯವನ್ನು ಪ್ರಕಟಿಸಿದರೆ, ಸಮಸ್ತ ಭಕ್ತವೃಂದಕ್ಕೆ ಉಪಯುಕ್ತವಾಗುವದರಲ್ಲಿ ಸಂದೇಹವಿಲ್ಲ. ಸಖಾರಾಮ ಗರ್ದೆಯವರ ಶ್ರೀಮಚ್ಚರಿತ್ರ, ಭೋಜಪುತ್ರರಾದ ರಾಮಚಂದ್ರ ದೇಶಪಾಂಡೆ ಇವರ ಸಂಸ್ಕೃತ ಚರಿತ್ರ, ಸಂತರತ್ನ ರಾಜಾರಾಮನ ಲಕ್ಷಾವಧಿ ಅಭಂಗಗಳನ್ನು, ಪದ್ಯಗಳನ್ನು ಮೂಲ ಕಾಗದ ಪತ್ರಗಳನ್ನು ಒಂದೊಂದನ್ನಾಗಿ ಕೈಗೆತ್ತಿಕೊಂಡು ಪ್ರಕಾಶನ ಮಾಡಿದರೆ ಚಿದಂಬರ ಜ್ಯೋತಿಯ ದರ್ಶನವಾಗುವದು; ಚಿದಂಬರ ರಹಸ್ಯವು ತಿಳಿಯುವದು; ಚಿದಂಬರನ ದಿವ್ಯ ಸಂದೇಶವು ಆಸೇತು ಹಿಮಾಚಲ, ಶಾಶ್ವತ ಶಾಂತಿ, ಸುಖ ಸಮಾಧಾನಗಳನ್ನು ಬೀರುವದು.

"ಸರ್ವೇ ಭದ್ರಾಣಿ ಪಶ್ಯಂತು ಸರ್ವೇ ಸಂತು ನಿರಾಮಯಾಃ ।
ಸರ್ವೇಚ ಸುಖಿನಃ ಸಂತು ಮಾ ಕಶ್ಚಿತ್ ದುಃಖಮಾಪ್ನುಯಾತ್ ॥

ಓಂ ಶಾಂತಿ: ಶಾಂತಿಃ ಶಾಂತಿಃ

ಜಯ ಚಿದಂಬರ

## ಭಜನ

ಶೇಷಾಚಲ ಮಹಾರಾಜ । ಜಯಜಯ ಶೇಷಾಚಲ ಮಹಾರಾಜ ॥
ಶೇಷಾಚಲ ನಾರಾಯಣಾ । ಸದ್ಗುರುವೇ ನೀ ಕರುಣಾಕರಾ ॥
ಚಿದಂಬರಾಹೋ ಚಿದಂಬರಾ । ಶೇಷಾಚಲ ಸ್ವಾಮೀ ಗುರೂವರಾ ॥
ಭಕ್ತವತ್ಸಲಾ ಶೇಷಾಚಲಾ । ದೀನದಯಾಲ ಶೇಷಾಚಲ ॥



## ಆರತಿ

ಜಯಜಯ ಶ್ರೀ ಶೇಷಾಚಲ ಸದ್ಗುರೂವರಾ ।
ಪಂಚಾರತಿ ಕರಿತೋ ತುಜ ಸಗುಣಮಂದಿರಾ ॥ ಪ ॥
ಶುಭ್ರಶರಚ್ಚಂದ್ರಪ್ರಭಾ ಪೂರ್ಣ ಪ್ರಕಟಲೀ ।
ತೇಂವಿ ಕೃಪಾದೃಷ್ಟಿ ಆಮ್ಹಾ ಸಹಜ ಲಾಭಲೀ ॥
ಹೃತ್ಪದ್ಮೇ ಮೋದಭರೇ ಪೂರ್ಣ ವಿಕಸಲೀ ।
ವಿಮಲಾ, ಸಕಲಾ, ಠಾಯೀ ಚಿನ್ಮಾತ್ರೇ, ತೂಚ ಅಸಸಿ,
ಹೇಗುಣಾಕರಾಃ ॥ ಜಯ ॥ ೧ ॥

ತೂ ಬ್ರಹ್ಮಾ ತೂ ವಿಷ್ಣೂ ತೂಚಿ ಗಣಪತಿ ।
ಇಂದ್ರ ಚಂದ್ರ ಅಗ್ನಿ ವರುಣ ತೂಚಿ ಧನಪತಿ ॥
ಅನಿಲಾಂತಕ ಮಂಗಲ ನಿಜಧಾಮ ಗಣಪತಿ ।
ಕರ್ತಾ, ಭರ್ತಾ, ಹರ್ತಾ, ಅಘಹರಣಾ ಭಯಶಮನಾ
ತೂ ಚಿದಂಬರಾ ॥ ಜಯ ॥ ೨ ॥

ವಿಶ್ವಂಭರ ವಿಶ್ವಪ್ರಭೋ ವಿಶ್ವಚಾಲಕಾ
ಮಾಯಾಗಜಪಂಚಾನನ ಭಕ್ತರಕ್ಷಕಾ ॥
ನಿತ್ಯ ಶುದ್ಧ ಬುದ್ಧ ಮುಕ್ತ ಪೂರ್ಣವ್ಯಾಪಕಾ ।
ಡೋಯೀ, ದೇಯಿ, ಸಮಯೀ, ಪಾಂಡುರಂಗ,
ಕರುನಿ ದಂಗ ಅಭಯಃವರಕರಾ ॥ ಜಯ ॥ ೩ ॥





# ಶ್ರೀ ಚಿದಂಬರ ಪ್ರಕಾಶ ಭಾಗ ೧

## ಹನ್ನೊಂದನೆಯ ಕಿರಣ

### ಪದ್ಮಶ್ರೀ ಬೇಂದ್ರೆಯವರ ಸಂದರ್ಶನ

### ಹಾಗೂ

### "ಶ್ರೀ ಚಿದಂಬರ ಪ್ರಕಾಶ"ಕ್ಕೆ ಅವರ ಕೊಡುಗೆ

ವಿಜಯದಶಮಿ, ದಿನಾಂಕ ೨-೧೦-೭೬ ಮುಂಜಾನೆ ೯-೩೦ಕ್ಕೆ, ತಮ್ಮ ನಿವಾಸದ ಬಾಗಿಲದ ಬಳಿಯಲ್ಲಿ ಬಾಲಕನನ್ನು ಆಡಿಸುತ್ತ ನಿಂತ ವರಕವಿಗಳಿಂದ ಹಾಗೂ ಅವರ ಮಕ್ಕಳಿಂದ ಹಾರ್ದಿಕ ಸ್ವಾಗತ. ನಾನು ಕಂಪೌಂಡಿನಲ್ಲಿ ಪ್ರವೇಶ ಮಾಡಿ, ನಮಸ್ಕಾರ ಮಾಡುವಷ್ಟರಲ್ಲಿ, 'ಓಹೋ ನಮಸ್ಕಾರ ಬನ್ನಿರಿ; ನಿನ್ನೆ ನಿಮ್ಮ ಮಗ ಪುಸ್ತಕವನ್ನು ತಂದು ಕೊಟ್ಟಿದ್ದ. ಅದನ್ನು ನೋಡಿದೆ' ಎಂದರು. ನಾನೂ ನಮಸ್ಕಾರ ಮಾಡಿ, ಮೂವರೂ ಮನೆಯೊಳಗೆ ಹೋಗಿ ಕುಳಿತು ಕೊಂಡವು. ಮನೆಯಿಂದ ತಂದಿದ್ದ ಚಿದಂಬರ ಪ್ರಸಾದವನ್ನು ಕೊಡಬೇಕೆಂದು ಚೀಲದಲ್ಲಿ ಕೈ-ಹಾಕುವಷ್ಟರಲ್ಲಿ, 'ಇವರು ಅಭಿಷೇಕ ಮಾಡಿಕೊಂಡು ಪ್ರಸಾದ ತಂದಾರ, ತಕ್ಕೊಳ್ಳಪಾ' ಎಂದು ತಮ್ಮ ಚಿರಂಜೀವರಿಗೆ ಹೇಳಿದರು. ಅವರು ಪ್ರಸಾದವನ್ನು ಸ್ವೀಕರಿಸಿ ಒಳಗೆ ಇಟ್ಟು ಬಂದರು. ಮಾತುಗಳು ಮತ್ತೆ ಮುಂದುವರಿವು. 'ನಾನು ಪುಸ್ತಕವನ್ನು ಅಷ್ಟಿಷ್ಟು ನೋಡಿದ್ದೇನೆ. ವಿಷಯ ಚನ್ನಾಗಿದೆ. ಸ್ವಾಮಿ ನಿಮ್ಮ ಕಡೆಯಿಂದ ಸೇವೆ ತೆಗೆದುಕೊಳ್ಳಬೇಕೆಂದು ಮಾಡಿದ್ದಾನೆ. ನೀವು ಈ ಕಾರ್ಯ ಮಾಡಿರಿ' ಎಂದರು. 'ಸಂತೋಷ. ನನಗೆ ಈ ಕಾರ್ಯದಲ್ಲಿ ತಮ್ಮಿಂದ ಮಾರ್ಗದರ್ಶನ ಬೇಕಾಗಿದೆ' ಎಂದು ಮುದ್ರಿತ ವಾದ ೧೧೨ ಪುಟಗಳನ್ನು ತೋರಿಸಿದೆ. "ನಾನೂ ನಿನ್ನೆಯಿಂದ ನಿಮಗೆ ಏನು ಕೊಡಬೇಕೆಂದು ವಿಚಾರ ಮಾಡತಾ ಇದ್ದೆ. ಹೊಳೆಯಿತು" ಎಂದು, ತಮ್ಮ

ಚಿರಂಜೀವರನ್ನು ಕರೆದು, 'ಇವರಿಗೆ ಒಂದು ಕಾರ್ಡು ತಂದು ಕೊಡಪಾ' ಎಂದರು, 'ಹಾಗೇ ಅಂಕಿಗಳನ್ನು ಬರೆದೇ ಕೊಡು' ಎಂದು ಹೇಳಿದರು ಒಳಗೆ ಹೋಗಿ ಅವರ ಮಕ್ಕಳು ಒಂದು ಕಾರ್ಡನ್ನು ತಂದು ಅವರ ಕೈಯಲ್ಲಿ ಕೊಟ್ಟರು. ಶ್ರೀ ಬೇಂದ್ರೆಯವರು ಅದರ ಮೇಲೆ ತಮ್ಮ ಹಸ್ತಾಕ್ಷರ ಹಾಕಿ, ನನಗೆ ಅದನ್ನು ಕೊಟ್ಟರು. ಅದರಲ್ಲಿ ೧೬೯೦, ೧೦, ೧೬೮೦, ೪ ಹೀಗೆ ಅಂಕಿಗಳಿದ್ದವು, ಒಂದು ಸುಳುವು (ಡಿಸಾಯಿನ) ಇತ್ತು. ಹಸ್ತಾಕ್ಷರಗಳಿದ್ದವು. ನಾನು ಕುತೂಹಲದಿಂದ ಕೇಳಿದೆ. 'ಇದೇನು? ಎಂತಹ ಕಾರ್ಡು' ಎಂದೆ "ಬಲದಿಂದ ಎಡಕ್ಕೆ ಮೊದಲನೆಯ ಅಂಕಿಯು ಯಾವುದು ಇದೆ ಹೇಳಿರಿ' ಎಂದರು. 'ನಾಲ್ಕು' ಎಂದು ಉತ್ತರಿಸಿದೆ. "ಹೌದು ನಾಲ್ಕು—ಶಂಖ, ಚಕ್ರ, ಗದಾ, ಪದ್ಮ" ಎಂದರು. 'ಅದರ ಹಿಂದೆ ಯಾವ ಸಂಖ್ಯೆ ಇದೆ?' ಎಂದು ಕೇಳಿದರು, "೧೬೮೦" ಎಂದೆ. "ಹೌದು ೧೬೮೦ ಮಹಾಸ್ವಾಮಿಗಳು ಅವತರಿಸಿದ ಶಕೆಯ ಕ್ರಮಾಂಕ" ಎಂದರು. 'ಇದರ ವೈಶಿಷ್ಟ್ಯವೇನು? ಬಹುಧಾನ್ಯ ಸಂವತ್ಸರ, ಕಾರ್ತಿಕ ಮಾಸ, ಷಷ್ಠೀ ತಿಥಿ, ವಣಿಜಾಕರಣ, ಬ್ರಹ್ಮಯೋಗ, ಪುಷ್ಯ ನಕ್ಷತ್ರ ಇವೆಲ್ಲವುಗಳ ವೈಶಿಷ್ಟ್ಯ ನನಗೆ ತಿಳಿದಿದೆ. ಆದರೆ ಈ '೧೬೮೦' ರ ಮಹತ್ವವೇನು? ದಯವಿಟ್ಟು ಹೇಳುವಿರಾ?' ಎಂದು ಬಿನ್ನವಿಸಿದೆ. "ನಾನೂ ಅದನ್ನೇ ಶೋಧ ಮಾಡತಾ ಇರೋದು. ಇಲ್ಲಿ ನೋಡ್ರಿ. ಇದು ಅನಿಬಜೆಂಟ ಮತ್ತು ಲೆಡ್‌ಬೀಟರ ಬರೆದ ಗ್ರಂಥವಿದೆ. ಇದರಲ್ಲಿ ದೇಹರಚನೆಯ ಬಗ್ಗೆ ಬರೆದಿದ್ದಾರೆ. '೧೬೮೦' ಸ್ಪಿರಲ್ಸಗಳಿಂದ (Spirals) ದೇಹರಚನೆ ಸುಬದ್ಧವಾಗಿದೆ. ೫, ೬, ೭, ೮ ಇವುಗಳ ಗುಣಾಕಾರವೇ ೧೬೮೦' ಎಂದರು. "ಈ ೧೦ ಸಂಖ್ಯೆ ಏಕೆ ಎಂದೆ?" "ಮತ್ಸ್ಯ, ಕೂರ್ಮ ಇ. ಹತ್ತು ಅವತಾರ" ಎಂದರು. ಮತ್ತೆ ಮಾತನ್ನು ಮುಂದುವರಿಸಿ, ಪುರುಷಸೂಕ್ತದಲ್ಲಿ ೧೬೯, ೪, ೧೦ ಎಂದರು. ೧೬೯×೧೦=೧೬೯೦ ಅಂದರು. ೧೬೮೦+೧೦=೧೬೯೦ ಅಂದರು. "ವಿಷಯ ಗಹನವಿದೆ" ಎಂದೆ. "ಹೌದು ನಿಮ್ಮ ಪುಸ್ತಕದ ಮುಂದಿನ ಭಾಗದಲ್ಲಿ ನಾನೇ ವಿವರಣೆ ನೀಡುವೆ" ಎಂದರು. 'ಬಹಳ ಸಂತೋಷ' ಎಂದೆ. 'ಏಕೆ' ಎಂದು ಕೇಳಿದರು. 'ನನ್ನ ಪುಸ್ತಕದ ಮುಂದಿನ ಭಾಗವೂ ಪ್ರಕಟವಾಗುತ್ತದೆ. ಮತ್ತು ತಾವೇ ಸ್ವತಃ ವಿವರಣೆಯನ್ನು ನೀಡುತ್ತೀರಿ' ಎಂದು ಹೆಚ್ಚಿನ ಸಂತೋಷ ಎಂದೆ, ನಕ್ಕರು. ಕಾರ್ಡಿನಲ್ಲಿ ಈ ನಕ್ಷೆ (ಡಿಜಾಯಿನ) ಏಕೆ?' ಎಂದು ಕೇಳಿದೆ.

'ಅದನ್ನು ಈ ರೀತಿ ಹಿಡಿದು ನೋಡಿರಿ' ಎಂದು ಕಾರ್ಡನ್ನು ಒಂದು ವಿಶಿಷ್ಟ ರೀತಿಯಲ್ಲಿ ಹಿಡಿದರು. ಅದರಲ್ಲಿ, ದ. ರಾ. ಬೇಂದ್ರೆ' ಎಂದು ಕಾಣಿಸುತ್ತಿತ್ತು. "ಓಹೋ ಇದು ನನಗೆ ಮೊದಲು ಹೊಳೆದಿರಲಿಲ್ಲ'' ಎಂದೆ. ಈ ಕಾರ್ಡು ಸಾಮಾನ್ಯ ಅಂತಾ ತಿಳಿಯಬೇಡಿರಿ. ಇದನ್ನು ಎದುರಿಗೆ ಇಟ್ಟು ಕೊಂಡು ಧ್ಯಾನ ಮಾಡಿದರೆ, ಒಂದು ಜ್ಯೋತಿಯನ್ನು ಕಾಣಬಹುದು, ಇದೇ ಚಿದಂಬರ ಜ್ಯೋತಿ" ಎಂದರು, ಇದನ್ನು ಬ್ಲಾಕು ಮಾಡಿಸಿ ಪುಸ್ತಕದಲ್ಲಿ ಹಾಕಿಬಿಡಿರಿ' ಎಂದರು. ಇದರ ವೈಶಿಷ್ಟ್ಯ ತಿಳಿಯುವ ಬಗೆ ಹೇಗೆ ಎಂದೆ. "ಮುಂದಿನ ಸಂಪುಟದಲ್ಲಿ ನಾನೇ ವಿವರಣೆಯನ್ನು ಕೊಡುವೆ" ಎಂದರು, "ಹಾಗಾದರೆ ಆ ರೀತಿ ನಾನು ಈ ಪುಸ್ತಕದಲ್ಲಿ ಬರೆಯಲೋ ?'' ಎಂದು ಕೇಳಿದೆ. "ಬರೆಯಬಹುದು" ಎಂದರು. ನಾನು ನನ್ನ ಚೀಲವನ್ನು ತಕ್ಕೊಂಡು "ನಾನಿನ್ನು ಬರುವೆ; ನಮಸ್ಕಾರ'' ಎಂದೆ. "ತಡೆಯಿರಿ" ಎಂದು ಕೈಯಲ್ಲಿ ಸಕ್ಕರೆಯನ್ನು ಹಾಕಿದರು, ಅಷ್ಟರಲ್ಲಿ ಅವರ ಚಿರಂಜೀವರು, ಉಂಡಿ, ಚೂಡಾ, ಚಹಾ ತಂದು ಇಟ್ಬರು, ಇಬ್ಬರೂ ಚಹಾ ತೆಗೆದುಕೊಂಡೆವು. "ನಾನಿನ್ನು ಬರುತ್ತೇನೆ'' ಎಂದೆ. "ತಡೆಯಿರಿ; ಒಳಗೆ ಬನ್ನಿರಿ'' ಎಂದು ಕೋಣೆಯಲ್ಲಿ ಕರೆದು ಕೊಂಡು ಹೋಗಿ, ತಾವು ಸಂಗ್ರಹಿಸಿದ ಕೆಲ ವಸ್ತುಗಳನ್ನು ತೋರಿಸಿದರು. ಸುಂದರವಾದ ಮೂರ್ತಿಗಳು, ಜರದ ಶಾಲುಗಳು, ಕೆಲ ಶಿಲೆಗಳು, ಗ್ರಂಥ ಭಾಂಡಾರ, ಚಿದಂಬರ ಚರಿತ್ರ ಮೊದಲಾದವುಗಳನ್ನು ತೋರಿಸಿದರು. ನನಗೆ ಪೇಶವೆಯವರ ಆಳಿಕೆಯಲ್ಲಿದ್ದ ಕೆಲ ಸರದಾರರ ಬಾಪೂ ಗೋಖಲೇ, ಅಪ್ಪಾ ಗೋಖಲೇ, ಧೋಂಡೋಪಂತ ಗೋಖಲೇ ಮೊದಲಾದವರ ಬಗ್ಗೆ ಮಾಹಿತಿ ಬೇಕಾಗಿದೆ'' ಎಂದೆ. ೨–೩ ಪುಸ್ತಕಗಳನ್ನು ತರಿಸಿ ಮಾಹಿತಿಯನ್ನೂ ಕೊಟ್ಟರು. "ಚಿದಂಬರನಿಗೆ, ಔದುಂಬರನಿವಾಸೀ'' ಎಂದು ಏಕೆ ಸಂಬೋಧಿಸುತ್ತಾರೆ ? ವಿಷ್ಣುವಿನ ಸಹಸ್ರನಾಮುಗಳಲ್ಲಿ, 'ತ್ತಕ್ಷ್ಟಕ:' ಎಂಬ ನಾಮವಿದೆ. ಇದರ ಔಚಿತ್ಯವೇನು ? ಎಂದು ಕೇಳಿದೆ. ಕೂಡಲೇ ವಿಷ್ಣು ಸಹಸ್ರನಾಮ ಭಾಷ್ಯ ತರಿಸಿ, "ತ್ತಕ್ಷ್ಟಕ:'' ಈ ಶಬ್ದದ ವಿವರಣೆಯನ್ನು ನೀಡಿದರು. ಮುಂದೆ ಅಡಿಗೆಯ ಮನೆಯ ಕಡೆಗೆ ಹೋಗಿ, 'ಇಲ್ಲಿ ನೋಡಿರಿ, ಈ ಗೋಡೆಯ ಮೇಲೆ; ಇಲ್ಲಿ ಅಕ್ಕಲಕೋಟಿ ಮಹಾರಾಜರ ಆಕೃತಿ ಇದೆ' ಎಂದು ಹೇಳಿದರು. ಮಹಾರಾಜರ ಆಕೃತಿಯಂತೆ ಅಲ್ಲಿ ಒಂದು ಆಕಾರವು ಕಂಡಿತು. "ಇದು

ಮೊದಲು ಇನ್ನೂ ನಿಚ್ಚಳವಾಗಿ ಕಾಣುತ್ತಿತ್ತು. ಈಗ ಸ್ವಲ್ಪ ಮಬ್ಬಾಳ ವಾಗಿದೆ" ಎಂದರು. ಹಾಗೇ ಮುಂದೆ ಸಾಗಿ ಹಿತ್ತಲದಲ್ಲಿ ಕರೆದೊಯ್ದರು. ಒಂದು ಔದುಂಬರ ಗಿಡವನ್ನು ತೋರಿಸಿದರು. ನಾನು ಕೈ-ಮುಗಿದೆ. ಇಲ್ಲಿ ಕೆಲವು ವರ್ಷಗಳ ಹಿಂದೆ, ಒಂದು ದಿನ ನಾಯಿ, ಬೆಕ್ಕು, ಕೋಳಿ ಮೂರೂ ಆಟವಾಡುತ್ತಿದ್ದವು. ಇದರ ನೆರಳಲ್ಲಿ ಒತ್ತಟ್ಟಿಗೆ ಆಶ್ರಯ ಪಡೆದಿದ್ದವು. ಇದು ಪ್ರಶಾಂತ ಮತ್ತು ನಿರ್ವೈರ ಸ್ಥಾನವೆಂದು ಒಂದು ಕಟ್ಟೆಯನ್ನು ಕಟ್ಟಿಸಿದ್ದೇನೆ' ಎಂದರು. "ತಾವು ಧನ್ಯರು, ನಿತ್ಯ ಔದುಂಬರ ದರ್ಶನ ತಮಗೆ ಆಗುವದು'' ಎಂದೆ. 'ನಾನಿನ್ನು ಬರುವೆ, ನಮಸ್ಕಾರ' ಎಂದು ಹೊರಟೆ, 'ನಮಸ್ಕಾರ; ಹೋಗಿ ಬರ್ರಿ. ಈ ಗ್ರಂಥಲೇಖನ ಒಂದು ಸೇವೆಯೆಂದು ಪೂರ್ಣ ಮಾಡಿರಿ' ಎಂದರು. "ಚಿದಂಬರನ ಕೃಪೆ, ತಮ್ಮಂತಹ ಹಿರಿಯರ ಆಶೀರ್ವಾದ ಇರ ಬೇಕು'' ಎಂದು ಮತ್ತೊಮ್ಮೆ ನಮಸ್ಕಾರ ಮಾಡಿ ಹೊರಟೆ. ಬಸ್‌ಸ್ಟಾಪದ ವರೆಗೂ ತಂದೆ-ಮಕ್ಕಳಿಬ್ಬರೂ ಬಂದು ಬೀಳ್ಕೊಟ್ಟರು. ಸಂತೋಷದಿಂದ ಬಸ್ಸ ನ್ನೇರಿ ಮನೆಗೆ ಬಂದೆ,

ಅವರ ಹೇಳಿಕೆಯಂತೆ, ಅವರು ಕೊಟ್ಟ ಕಾರ್ಡಿನ ಚಿತ್ರ ಈ ಪುಸ್ತಕ ದಲ್ಲಿ ಹಾಕಿದ್ದೇನೆ. ಜಿಜ್ಞಾಸುಗಳು ಅವನ್ನು ಪೂರ್ಣ ತಿಳಿದುಕೊಳ್ಳಲು ಪ್ರಯತ್ನ ಮಾಡಬೇಕು. ಶ್ರೀ ಬೇಂದ್ರೆಯವರ ಮನೆತನಕ್ಕೆ ಬಂದ ಶ್ರೀ ಚಿದಂಬರ ಸಂಬಂಧವನ್ನು ಅವರು ಬರೆದು ಕಳಿಸಿದ್ದನ್ನೇ ಇಲ್ಲಿ ಕೊಟ್ಟಿದ್ದೇನೆ, ಅಲ್ಲದೇ ಶ್ರೀ ಬೇಂದ್ರೆಯವರು. ರಾಜಾರಾಮನು ರಚಿಸಿದ ಗುರುಭಕ್ತೀಚೆ ಅಭಂಗ ಎಂಬ ಹನ್ನೆರಡು ಅಭಂಗಗಳನ್ನು ಕನ್ನಡದಲ್ಲ ಅನುವಾದಿಸಿದ್ದಾರೆ. ಅವುಗಳನ್ನೂ ಇಲ್ಲಿ ಕೊಟ್ಟಿದ್ದೀನೆ, ಚಿದಂಬರ ರಹಸ್ಯ ತಿಳಿದುಕೊಳ್ಳಲು ಸಾಧಕರಿಗೆ ಅವು ಮಾರ್ಗದರ್ಶಕವಾಗುವದರಲ್ಲಿ ಸಂದೇಹವಿಲ್ಲ. (ಅಭಂಗಗಳನ್ನು ಉಪಾಸನಾ ವಿಭಾಗದಲ್ಲಿ ನೋಡಿರಿ.)

ಶ್ರೀ ಬೇಂದ್ರೆಯವರು ಕಂಡ ಚಿದಂಬರ ಜ್ಯೋತಿ.

(ಸ್ವತಃ ಬೇಂದ್ರೆಯವರೇ ಬರೆದು ತಿಳಿಸಿದ್ದಾರೆ.)

'ನನ್ನ ಅಜ್ಜಿ ಗೋದೂಬಾಯಿ; ತವರುಮನೆ ನರಗುಂದ, ಯಜಮಾನರ ಊರು ಮುಳಗುಂದ. ತನ್ನ ದಾಂಪತ್ಯ ಜೀವನದ ಕಾಲಕ್ಕೆ ಧಾರವಾಡದ ಸಮೀಪದ ಹೆಬ್ಬಳ್ಳಿಯ ಪರಿಸರದಲ್ಲಿ ಇದ್ದಳು. ನನ್ನ ತಾಯಿ ಅಂಬಾಬಾಯಿ

ಕೂಸಿರುವಾಗ ಮತ್ತು ಇನ್ನಿಬ್ಬರು ಹೆಂಣುಮಕ್ಕಳೊಡನೆ ಅಜ್ಜಿ ಧಾರವಾಡಕ್ಕೆ ಬಂದಳು. ಸುಮಾರು ಮೂವತ್ತೈದು ವರ್ಷ ಕಾಲ ಧಾರವಾಡದಲ್ಲಿ ಕಳೆದಳು. ೧೯೧೩ ನವ್ಹಂಬರ ೧೩ ರಂದು, ಅವಳು ಧಾರವಾಡದಲ್ಲಿ ದೇಹವಿಟ್ಟಳು. ಆಕೆ ಚಿದಂಬರ ಭಜನೆ ಮಾಡದೆ ನಿದ್ದೆ ಮಾಡುತ್ತಿರಲಿಲ್ಲ. ಆಕೆಯ ತಂಗಿ "ಚಿದಂಬರಿ" ಎಂಬ ಹೆಸರಿನವಳೇ ಇದ್ದಳು. ನನ್ನ ಬೆನ್ನಮೇಲಿನ ತಮ್ಮನಿಗೆ ಚಿದಂಬರ ಎಂದು ಹೆಸರಿಟ್ಟರು. ಆ ಹುಡುಗ ಬಹಳ ದಿನ ಬದುಕಲಿಲ್ಲಾ. ಆ ತಮ್ಮ ಹೋದ ರಾತ್ರಿಯ ಕಾಲದಲ್ಲಿ ಒಂದು ಮಹಾಜ್ಯೋತಿಯ ದರ್ಶನ ನನಗೆ ಆಯಿತು. ಅದೇ ಚಿದಂಬರ ಜ್ಯೋತಿ ಎಂದು ನನ್ನ ಜೀವನದಲ್ಲಿ ಕೆಲಸ ಮಾಡಿದೆ. ನನಗೆ ವಿದ್ಯಾರ್ಥಿಯಾಗಿ ಒಬ್ಬ ಮೇಧಾವಿ ತರುಣ ಸಿಕ್ಕ. ಅವನೂ ಗೆಳೆಯರ ಗುಂಪು ಸೇರಿದ. ಅವನು ಪ್ರಾಯದಲ್ಲೇ ತೀರಿಕೊಂಡ. ಅವನ ಹೆಸರು ಚಿದಂಬರ. ನನ್ನ ಪತ್ನಿಯೊಡನೆ ನಾನು ಚಿದಂಬರ ಕ್ಷೇತ್ರಗಳ ಯಾತ್ರೆ ಮಾಡಿ ಬಂದಿದ್ದೇನೆ. ಚಿದಂಬರನನ್ನು ಕುರಿತು ಒಂದು ಆರತಿಯನ್ನು ರಚಿಸಿದ್ದೇನೆ. ಆಕಾಶವಾಣಿಯಲ್ಲಿ ಒಂದು ಭಾಷಣ ಬಿತ್ತರಿಸಿದ್ದೆ. ದೀಕ್ಷಿತರ ಮನೆತನದ ಅನೇಕರೊಡನೆ ನನ್ನ ಸಂಪರ್ಕ ಬಂದಿದೆ. ಕುಂದಗೋಳ, ಸವದತ್ತಿ, ಗುರ್ಲಹೊಸೂರ, ಮುರಗೋಡ ಈ ಸ್ಥಾನಗಳಿಗೂ ಹೋಗಿ ಬಂದೆ. ರಾಜಾರಾಮ, ವಿಠಾಬಾಯಿ ವಿಷಯವಾಗಿ, ಅಷ್ಟಿಷ್ಟು ಸುದ್ದೀ ಸಂಗ್ರಹ ಮಾಡಿದ್ದೇನೆ. ವಿಠಾಬಾಯಿಯ ಸಂಪರ್ಕ ನನ್ನ ಅಜ್ಜಿಗೆ ಬಂದಿರಬೇಕು ಎಂದು ನನ್ನ ಸಧ್ಯದ ತಿಳುವಳಿಕೆ. ಬಾಭುಳ ಗಾಂವಕ್ಕೆ ಒಮ್ಮೆ ಹೋಗಿ ಬರಬೇಕೆಂಬ ಆಸೆ ಇದೆ. ಇದಿಷ್ಟು ಸಂಕ್ಷೇಪದಲ್ಲಿ ಸುದ್ದಿ.'

ಧಾರವಾಡ, ೨೧–೪–೭೫ ದ. ರಾ. ಬೇಂದ್ರೆ

ಶ್ರೀ ಬೇಂದ್ರೆಯವರ ಮಕ್ಕಳು, ವಾ. ದ. ಬೇಂದ್ರೆಯವರು ಬರೆದ ಪತ್ರ

ಧಾರವಾಡ

೨೧–೪–೭೫

ಶ್ರೀ ಇನಾಮದಾರ ಇವರಿಗೆ, ವಂದನೆಗಳು—

ತಮ್ಮ ಪತ್ರ ಮುಟ್ಟಿ ಕೆಲವು ದಿನಗಳಾದವು. ಈ ಪತ್ರದ ಜೊತೆಗೆ ತಮ್ಮ ಅಪೇಕ್ಷೆಯಂತೆ, ೧) ತಂದೆಯವರ ಜೀವನಕ್ಕೂ, ಚಿದಂಬರ ದೀಕ್ಷಿತರಿಗೂ

